# ತುಳುನಾಡಿನ ಆಚರಣೆಗಳು
# ವಾರ್ಷಿಕ ಆವರ್ತನದ ಸಾಂಸ್ಕೃತಿಕ ಅಧ್ಯಯನ



ಪಿಎಚ್.ಡಿ. ಪದವಿಗಾಗಿ
ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಮಹಾಪ್ರಬಂಧ

ಮೂಲಕ
ಡಾ.ಹಾಮಾನಾ ಸಂಶೋಧನ ಕೇಂದ್ರ
ಶ್ರೀ ಧ.ಮಂ.ಕಾಲೇಜು, ಉಜಿರೆ



ಮಾನ್ಯತೆ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ–೫೮೩೨೭೬

೨೦೧೧

# ತುಳುನಾಡಿನ ಆಚರಣೆಗಳು
# ವಾರ್ಷಿಕ ಆವರ್ತನದ ಸಾಂಸ್ಕೃತಿಕ ಅಧ್ಯಯನ

ಪಿಎಚ್.ಡಿ. ಪದವಿಗಾಗಿ
ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಮಹಾಪ್ರಬಂಧ

ಮೂಲಕ
ಡಾ.ಹಾಮಾನಾ ಸಂಶೋಧನ ಕೇಂದ್ರ
ಶ್ರೀ ಧ.ಮಂ.ಕಾಲೇಜು, ಉಜಿರೆ

ಮಾನ್ಯತೆ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩೨೭೬

೨೦೧೧

# ತುಳುನಾಡಿನ ಆಚರಣೆಗಳು
# ವಾರ್ಷಿಕ ಆವರ್ತನದ ಸಾಂಸ್ಕೃತಿಕ ಅಧ್ಯಯನ

ಪಿಎಚ್.ಡಿ. ಪದವಿಗಾಗಿ
ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಮಹಾಪ್ರಬಂಧ

ಮೂಲಕ
ಡಾ.ಹಾಮಾನಾ ಸಂಶೋಧನ ಕೇಂದ್ರ
ಶ್ರೀ ಧ.ಮಂ.ಕಾಲೇಜು, ಉಜಿರೆ

ಮಾನ್ಯತೆ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ–೫೮೩೨೭೬

೨೦೧೧

# ಪರಿವಿಡಿ

# ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆ

## (ತುಳುನಾಡು)

ಉತ್ತರ ಕನ್ನಡ ಜಿಲ್ಲೆ

ಶಿವಮೊಗ್ಗ ಜಿಲ್ಲೆ

ಕುಂದಾಪುರ

ಉಡುಪಿ

ಚಿಕ್ಕಮಗಳೂರು ಜಿಲ್ಲೆ

ಕಾರ್ಕಳ

ಬೆಳ್ತಂಗಡಿ

ಮಂಗಳೂರು

ಅರಬ್ಬೀ ಸಮುದ್ರ

ಬಂಟವಾಳ

ಹಾಸನ ಜಿಲ್ಲೆ

ಪುತ್ತೂರು

ಸುಳ್ಯ

ಕಾಸರಗೋಡು ಜಿಲ್ಲೆ (ಕೇರಳ)

ಕೊಡಗು ಜಿಲ್ಲೆ



## ತುಳುನಾಡು

ಪ್ರಾರಂಭದ ಹಂತ



ಜಲಾವೃತ ಪ್ರದೇಶ

ಎರಡನೆಯ ಹಂತ



ದಟ್ಟಾರಣ್ಯ ಪ್ರದೇಶ

ಮೂರನೆಯ ಹಂತ



ದ್ರಾವಿಡರ ನೆಲೆ; ಬೇಟೆ
ಮತ್ತು ಭತ್ತ ಬೇಸಾಯ

ನಾಲ್ಕನೆಯ ಹಂತ



ದ್ರಾವಿಡೇತರರ ಆಗಮನ;
ಮುಂದುವರಿದ ಚಟುವಟಿಕೆ;
ಆಹಾರ ಬೆಳೆ + ವಾಣಿಜ್ಯ
ಬೆಳೆಗಳು;
ವ್ಯಾಪಾರ ವ್ಯವಹಾರ +
ಕೈಗಾರಿಕೆಗಳು

# ತುಳುನಾಡು ಜಾನಪದ ಸೂಚಿ



ಬೆಟ್ಟ ಗುಡ್ಡ, ತಗ್ಗು, ಬೈಲು (ಬಯಲು) ಹೊಳೆ, ನದಿ ಕಾಡು, ಮಲೆ
ಸಾಕುಪ್ರಾಣಿಗಳು / ಸಾಕು ಪಕ್ಷಿಗಳು/ ಕಾಡು ಪ್ರಾಣಿಗಳು/ ಕಾಡು ಪಕ್ಷಿಗಳು ಹಾವು ಮೀನುಗಳು/ ಕ್ರಿಮಿ ಕೀಟಗಳು
ಭೌಗೋಳಿಕ ಚಿತ್ರಣ
ಪ್ರಾಣಿ ಪ್ರಪಂಚ
ತುಳುನಾಡು ಜಾನಪದ
ಸಸ್ಯ ಜಗತ್ತು /ಬೇಸಾಯ
ಜಾತಿ ಜನಾಂಗ/ ವೃತ್ತಿ ವೈವಿಧ್ಯ
ಹತ್ತಾರು ಜಾತಿಗಳು
ಭತ್ತ ಬೇಸಾಯ, ಅಡಿಕೆ, ತೆಂಗು, ರಬ್ಬರ್, ಬಾಳೆ, ತರಕಾರಿ ಇತರ ಬೆಳೆಗಳು ಮತ್ತು ಸಸ್ಯ ಪ್ರಪಂಚ
ಮೀನುಗಾರಿಕೆ, ಮೂರ್ತೆಗಾರಿಕೆ, ಹೆಣೆಯುವುದು, ಕುಂಬಾರಿಕೆ

# ತುಳುನಾಡಿನ ಆಚರಣೆಗಳ ವಾರ್ಷಿಕ ಆವರ್ತನ ಸೂಚಿ



# ಅಧ್ಯಾಯ–೧

## ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ಸ್ವರೂಪ

# ಅಧ್ಯಾಯ–೧

## ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ಸ್ವರೂಪ

೧.೧: ಪ್ರಸ್ತಾವನೆ

- ೧.೧.೧: ತುಳುನಾಡು
- ೧.೧.೨: ತುಳುಪದ ನಿಷ್ಪತ್ತಿ
- ೧.೧.೩: ತುಳುನಾಡಿನ ಆಡಳಿತ ಇತಿಹಾಸ
- ೧.೧.೪: ತುಳುನಾಡಿನಲ್ಲಿ ನಂಬಿಕೆ ಆಚರಣೆಗಳು

೧.೨: ಅಧ್ಯಯನದ ಉದ್ದೇಶ

೧.೩: ಅಧ್ಯಯನದ ವ್ಯಾಪ್ತಿ

೧.೪: ಅಧ್ಯಯನದ ಸ್ವರೂಪ

೧.೫: ಈವರೆಗಿನ ಅಧ್ಯಯನ

# ಅಧ್ಯಾಯ–೧

# ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ಸ್ವರೂಪ

## ೧.೧: ಪ್ರಸ್ತಾವನೆ

ಜೀವಜಗತ್ತಿನಲ್ಲಿಯೇ ಮನುಷ್ಯ ಮೇಲ್ಮಟ್ಟದ ಜೀವಿ. ಮನುಷ್ಯನ ಜೀವನ ಇತರ ಜೀವಿಗಳಂತಲ್ಲ. ಮನುಷ್ಯನಿಗೆ ಸಂಸ್ಕೃತಿ ಸಂಸ್ಕಾರಗಳ ಚೌಕಟ್ಟಿದೆ. ಮಾನವ ಹುಟ್ಟಿ ಬೆಳೆದಂತೆಲ್ಲ ಪ್ರಕೃತಿಯಿಂದ ಬಹಳಷ್ಟು ಸಂಗತಿಗಳನ್ನು ಕಲಿತುಕೊಂಡಿದ್ದಾನೆ. ಮುಂದುವರಿದಂತೆ ಮಾನವನ ಬುದ್ಧಿ ವಿಕಾಸವಾಗುತ್ತಾ ಬಂತು. ಆದರೆ ಪ್ರಕೃತಿಯ ನಿಗೂಢತೆಯನ್ನು ಅರಿಯಲು ಸಾಧ್ಯವಾಗದೆ ಧರ್ಮ ದೇವರುಗಳ ಕುರಿತು ಚಿಂತಿಸಿರಬೇಕು. ಹಾಗಾಗಿ ದೇವರ ಅಸ್ತಿತ್ವ ಪ್ರಶ್ನಾತೀತ ವಿಷಯ. ಬುದ್ಧಿವಂತನಾದರೂ ಮನುಷ್ಯನಿಗೆ ಸೃಷ್ಟಿಯ ಹಿಂದು–ಮುಂದುಗಳನ್ನು ತಿಳಿಯಲು ಸಾಧ್ಯವಾಗಿರುವುದಿಲ್ಲ. ದೈವ–ದೇವರು–ಅಧ್ಯಾತ್ಮಗಳ ಕುರಿತು ಈ ಮಾನವ ಹಿಂದೆ ಯೋಚಿಸಿದ್ದಾನೆ; ಇಂದೂ ಯೋಚಿಸುತ್ತಿದ್ದಾನೆ; ಇನ್ನು ಮುಂದೆಯೂ ಯೋಚಿಸುತ್ತಾನೆ. ಸೃಷ್ಟಿ ನಿಗೂಢತೆಯ ಬಗ್ಗೆ ನಮಗೆ ತಿಳುವಳಿಕೆ ಇಲ್ಲವಾದ್ದರಿಂದಲೋ ಏನೋ ಅಥವಾ ಜೀವನದಲ್ಲಿ ಎದುರಾಗುವ ಕಷ್ಟ–ಕಾರ್ಪಣ್ಯ, ದುಗುಡ–ದುಮ್ಮಾನಗಳನ್ನು ನಿವಾರಿಸಲೆಂದೋ ಏನೋ, ಸೃಷ್ಟಿ ನಿಯಂತ್ರಕ ಶಕ್ತಿಗಳನ್ನು ಇಲ್ಲವೇ ಪ್ರಾಕೃತಿಕ ಪ್ರಕ್ರಿಯೆಗಳ ಶಕ್ತಿಗಳನ್ನು ದೈವ–ದೇವರು–ಅಧ್ಯಾತ್ಮಗಳ ನೆಲೆಯಲ್ಲಿ ಊಹಿಸಿಕೊಂಡು ಭಯಭಕ್ತಿಯಿಂದ ಆರಾಧಿಸುತ್ತಾ ಬಂದಿರುವುದು ಆಚರಣೆಗಳಾಗಿರಬೇಕು. ಈ ಆಚರಣೆಗಳೇ ಧಾರ್ಮಿಕ–ಸಾಂಸ್ಕೃತಿಕ ಕಲಾಪಗಳಾಗಿ, ಬದುಕಿಗೆ ಬೆಂಗಾವಲಾಗಿ, ಚೈತನ್ಯಶಕ್ತಿಗಳಾಗಿ ಅರ್ಥ ನೀಡುತ್ತಾ ಬಂದಿರುವುದನ್ನು ಸಾಂಸ್ಕೃತಿಕ ಚರಿತ್ರೆಯಿಂದ, ಸಾಮಾಜಿಕ ಚರಿತ್ರೆಯಿಂದ, ಧಾರ್ಮಿಕ ಚರಿತ್ರೆಯಿಂದ ತಿಳಿಯಲು ಸಾಧ್ಯವಿದೆ. ಇದರರ್ಥ ಹಬ್ಬ ಹರಿದಿನಗಳು, ಆಚರಣೆ–ಆರಾಧನೆ–ಉತ್ಸವಗಳಿರಬಹುದು; ಇವುಗಳಿಲ್ಲದ ವ್ಯಕ್ತಿ ಅಥವಾ ಸಮಾಜದ ಬದುಕು ಬದುಕಾಗಲಾರದು; ನೆಮ್ಮದಿ ಮರೀಚಿಕೆಯಾಗಬಹುದು.

ಇಂದು ಯಂತ್ರ–ತಂತ್ರಗಳ ಆವಿಷ್ಕಾರದಿಂದಾಗಿ ಪ್ರಪಂಚ ವೈಜ್ಞಾನಿಕವಾಗಿ ತೆರೆದುಕೊಳ್ಳುತ್ತಿದೆ. ಇದರ ಪರಿಣಾಮ ಮನುಷ್ಯ ಸಮಾಜದ ಹಿಂದಿನ ಸಾಂಸ್ಕೃತಿಕ ಸೊಗಡು ಮಾಯವಾಗುತ್ತಿದೆ. ಸಾಮಾಜಿಕ ಸಹಜತೆಗೆ ಭಂಗ ಉಂಟಾಗುತ್ತಿದೆ. ಸಾರವಿಲ್ಲದ ಸಂಸಾರ, ಸಜೀವವಲ್ಲದ ಸಮಾಜ ಎಲ್ಲ ಬರಡಾಗಿದೆ. ಅಂದರೆ ವಿಜ್ಞಾನವನ್ನು ವಿರೋಧಿಸುತ್ತಿರುವುದು ಎಂದು

ಅರ್ಥವಲ್ಲ. ವಿಜ್ಞಾನದ ಬೆಳವಣಿಗೆಗಳ ಜೊತೆಗೆ ಜಗತ್ತು ತನ್ನತನವನ್ನು ಮೂಲಸತ್ವವನ್ನು ಕಳೆದುಕೊಳ್ಳುತ್ತಿರುವುದು ಖೇದಕರ. ಆರ್ಥಿಕ ಸ್ವಾವಲಂಬನೆ ಮತ್ತು ಜ್ಞಾನ ಸಂಪಾದನೆ ಇವೆರಡೇ ಬದುಕಿನ ಗುರಿ ಎಂದು ತಿಳಿದು ಮುಂದುವರಿಯುತ್ತಿದೆ ನಮ್ಮ ಈಗಿನ ಪೀಳಿಗೆ. ವ್ಯಕ್ತಿ ಇಲ್ಲವೇ ಸಮಾಜದ ಮಾನಸಿಕ ಸ್ವಾಸ್ಥ್ಯವನ್ನು ಉಳಿಸಿಕೊಳ್ಳುವಲ್ಲಿ ನಿರಾಡಂಬರವಾಗಿ ದೇವರು, ಧರ್ಮ, ಆಚರಣೆ, ಆರಾಧನೆ, ಉತ್ಸವಾದಿಗಳನ್ನು ಸರಿಯಾದ ಅರ್ಥದಲ್ಲಿ ಹಿರಿಯರ ಮಾರ್ಗದರ್ಶನದಲ್ಲಿ ವಿಚಾರಮಾಡಿ ಆಚರಿಸಬೇಕು. ಇದರಿಂದ ಸಾರ್ಥಕತೆಯಿದೆ ಎಂಬುದನ್ನು ನಮ್ಮ ಹಿರಿಯರು ಸಾಧಿಸಿಕೊಟ್ಟಿದ್ದಾರೆ. ಜೀವನದ ಅರ್ಥವಂತಿಕೆಗೆ ಅಗತ್ಯವಾಗಿದ್ದು, ಅಲಕ್ಷ್ಯದಿಂದ ಮೂಲೆಗುಂಪಾಗುತ್ತಿರುವ ಇಂತಹ ಅರ್ಥಪೂರ್ಣ ಸಂಗತಿಗಳನ್ನು ಪೂರ್ತಿ ನಶಿಸುವ ಮೊದಲೇ ಶೋಧನೆ ಮಾಡಿ ದಾಖಲಿಸುವ ನಿಟ್ಟಿನಲ್ಲಿ ಮತ್ತು ವಿಮರ್ಶೆ ಮಾಡಿ ಇಂದಿನ ಯುವ ಪೀಳಿಗೆ ಅದರತ್ತ ಒಲವು ಹರಿಸುವಂತೆ ಮಾಡುವ ನಿಟ್ಟಿನಲ್ಲಿ ಸಂಶೋಧನೆಯ ಪಾತ್ರ ಬಹಳ ಗುರುತರವಾದುದೇ ಆಗಿದೆ. ಸಾಮಾಜಿಕ ಸ್ವಾಸ್ಥ್ಯವನ್ನು ಕಾಪಾಡುವ ನಿಟ್ಟಿನಲ್ಲಿ ಮುರಿದದ್ದನ್ನು ಕಟ್ಟುವ ಅಗತ್ಯ ಅನಿವಾರ್ಯತೆಯಿದೆ. ಸಂಶೋಧನೆ ಈ ಕೆಲಸವನ್ನು ಮಾಡುತ್ತಿದೆ ಮತ್ತು ಮಾಡಬೇಕು ಕೂಡ.

ಈ ಹಿನ್ನೆಲೆಯಲ್ಲಿ 'ತುಳುನಾಡಿನ ಆಚರಣೆಗಳು–ವಾರ್ಷಿಕ ಆವರ್ತನದ ಸಾಂಸ್ಕೃತಿಕ ಅಧ್ಯಯನ'ದ ಅಗತ್ಯತೆಯನ್ನು ಮನಗಾಣಲಾಯಿತು. ತುಳುನಾಡೆಂಬ ಪ್ರಾದೇಶಿಕ ಘಟಕವೊಂದರ ಅನನ್ಯ ಮತ್ತು ಸಮೃದ್ಧ ಸಂಸ್ಕೃತಿಯ ಸಂರಚನೆಯ ವೇಳೆ ಆವರ್ತನದ ಆಚರಣೆಗಳ ಮಹತ್ವ ಮತ್ತು ವೈಶಿಷ್ಟ್ಯಗಳನ್ನು ಸಮಗ್ರವಾಗಿ ಶೋಧಿಸಿ ವಿಚಾರಿಸಿ ಅರ್ಥೈಸುವ ಪುಟ್ಟ ಪ್ರಯತ್ನವನ್ನು ಈ ಅಧ್ಯಯನದ ಮೂಲಕ ಕೈಗೊಳ್ಳಲಾಗಿದೆ.

ಮಾನವ ಸಂಸ್ಕೃತಿ ಸಂಕೀರ್ಣವಾದುದು. ಈ ಸಂಸ್ಕೃತಿ ಸ್ಥಿರವಾದುದಲ್ಲ; ನಿರಂತರ ಚಲನಶೀಲವಾದುದು. ಸಂಸ್ಕೃತಿಯೊಂದು ರೂಪುಗೊಳ್ಳುವುದೇ ಆಯಾ ದೇಶ ಕಾಲದ ನೈಸರ್ಗಿಕ ಚಟುವಟಿಕೆಗಳಿಂದ ಎಂಬುದು ಮುಖ್ಯ ಸಂಗತಿ. ಈ ಹಿನ್ನೆಲೆಯಲ್ಲಿ ಜಾನಪದ ತಜ್ಞ ಡಾ.ಪುರುಷೋತ್ತಮ ಬಿಳಿಮಲೆಯವರು ಅರ್ಥಪೂರ್ಣ ಮಾತೊಂದನ್ನು ಹೇಳುತ್ತಾರೆ–

"ಮಾನವ ಸಂಸ್ಕೃತಿ ಎರಡು ಆವರ್ತನಗಳಲ್ಲಿ ಚಲನಗೊಳ್ಳುತ್ತದೆ ಹಾಗೂ ರೂಪುಗೊಳ್ಳುತ್ತದೆ. ಒಂದು, ಹುಟ್ಟಿನಿಂದ ತೊಡಗಿ ಸಾವಿನವರೆಗಿನ ಅನೇಕ ಸ್ಥಿತ್ಯಂತರಗಳ ಸಂದರ್ಭಗಳ ಆಚರಣೆಗಳ ಮೂಲಕ ಸಿದ್ಧಿಸುತ್ತದೆ. ಇಲ್ಲಿ ಪ್ರಾದೇಶಿಕ ಹಾಗೂ ಬಂಧುತ್ವ ವ್ಯವಸ್ಥೆಯ ವೈವಿಧ್ಯ ಸಾಂಸ್ಕೃತಿಕ ಬಹುತ್ವವನ್ನು ಹುಟ್ಟು ಹಾಕುವಲ್ಲಿ ಯಶಸ್ವಿಯಾಗಿದೆ.

ಎರಡನೆಯದು, ವಾರ್ಷಿಕಾವರ್ತನಕ್ಕೆ ಸಂಬಂಧಪಟ್ಟುದು. ಇಲ್ಲಿನ ಚಲನೆ ಭೌಗೋಳಿಕ ಸನ್ನಿವೇಶ, ಮಳೆ ಹಾಗೂ ಬೆಳೆಗೆ ಸಂಬಂಧಿಸಿರುತ್ತದೆ."[೧] ತಮ್ಮ ಮಾತನ್ನು ಮುಂದುವರಿಸಿದ ಬಿಳಿಮಲೆಯವರು ತುಳುನಾಡಿನ ಸಂಸ್ಕೃತಿಯ ಹಿನ್ನೆಲೆಯನ್ನು ಈ ರೀತಿ ವಿಶ್ಲೇಷಿಸುತ್ತಾರೆ– "ತುಳುನಾಡಿನ ಪ್ರಮುಖ ಬೆಳೆ ಭತ್ತಕ್ಕೆ ಸಂಬಂಧಿಸಿದಂತೆ ಸ್ಥಳೀಯ ಕಾಲಮಾನದ ಹಿನ್ನೆಲೆಯಲ್ಲಿ ಸೂರ್ಯಚಂದ್ರರ ಚಲನದಿಂದ ಎಲ್ಲ ಚಟುವಟಿಕೆಗಳು ನಿಯಂತ್ರಿತವಾಗುತ್ತವೆ. ಈ ಬಗೆಯ ಆವರ್ತನಗಳು ಪರಸ್ಪರ ಸಂಧಿಸುವಲ್ಲಿ ಸಂಸ್ಕೃತಿಯ ಮೂಲ ಮೌಲ್ಯವೊಂದು ಸಿದ್ಧವಾಗುತ್ತದೆ."[೨] ಈ ಎಲ್ಲ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ತುಳುನಾಡಿನ ವಾರ್ಷಿಕ ಆವರ್ತನದ ಆಚರಣೆಗಳನ್ನು ಭತ್ತಬೇಸಾಯ ಸಂಸ್ಕೃತಿಯೊಂದರ ಪೋಷಕ ವ್ಯವಸ್ಥೆ ಎಂಬ ಹಿನ್ನೆಲೆಯಲ್ಲಿ ಅಧ್ಯಯನ ಮಾಡುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ.

**೧.೧.೧: ತುಳುನಾಡು**

ಅವಿಭಜಿತ ದ.ಕ.ಜಿಲ್ಲೆಯನ್ನು ಸಾಂಪ್ರದಾಯಿಕವಾಗಿ ತುಳುನಾಡೆಂದು ಗುರುತಿಸುತ್ತಾ ಬರಲಾಗಿದೆ. ಇಂದಿನ ದ.ಕ.ಜಿಲ್ಲೆ ಉಡುಪಿ ಜಿಲ್ಲೆ ಹಾಗೂ ಕೇರಳ ರಾಜ್ಯಕ್ಕೆ ಸೇರಿರುವ ಕಾಸರಗೋಡು ಜಿಲ್ಲೆ ತುಳುನಾಡಿನ ವ್ಯಾಪ್ತಿಗೆ ಒಳಪಡುವ ಪ್ರದೇಶಗಳು. ಉತ್ತರದಲ್ಲಿ ಕಲ್ಯಾಣಪುರ ಹೊಳೆ, ದಕ್ಷಿಣದಲ್ಲಿ ಕಾಸರಗೋಡಿನ ಚಂದ್ರಗಿರಿ ಹೊಳೆ, ಪೂರ್ವದಲ್ಲಿ ಸಹ್ಯಾದ್ರಿ ಪರ್ವತಸಾಲು ಮತ್ತು ಪಶ್ಚಿಮದಲ್ಲಿ ಅರಬ್ಬೀ ಸಮುದ್ರ–ಇವು ತುಳುನಾಡಿನ ಗಡಿಗುರುತುಗಳು. ಈ ತುಳುನಾಡಿನ ಬಗ್ಗೆ ಹಲವಾರು ಐತಿಹ್ಯಗಳಿವೆ. ಪುರಾಣದ ಕಥೆಯ ಪ್ರಕಾರ ತುಳುನಾಡು 'ಪರಶುರಾಮ ಸೃಷ್ಟಿಯ ಕ್ಷೇತ್ರ' ವೆಂದೇ ಪ್ರಖ್ಯಾತಿಯನ್ನು ಪಡೆದಿದೆ.[೩] ಈ ಪ್ರದೇಶದ ಬಹುಪಾಲು ಜನರ ಮಾತೃಭಾಷೆ ತುಳು. ಇಲ್ಲಿ ಮೇರ, ಮನ್ಸ, ಬಾಕುಡ, ಮಲೆಕುಡಿಯ, ಕೊರಗ, ನಲ್ಕೆ, ಪಂಬದ, ಮರಕ್ಕಲ, ಮಡ್ಯೋಲ(ಮಡಿವಾಳ), ನಾಯ್ಕ, ಶೆಟ್ಟಿ, ಆಚಾರಿ(ವಿಶ್ವಕರ್ಮ), ಗೌಡ, ಪದಾರ್ಥಿ, ಗಾಣಿಗ, ಪರವ, ಜೈನ, ಶಿವಳ್ಳಿ ಬ್ರಾಹ್ಮಣ, ಸ್ಥಾನಿಕ ಬ್ರಾಹ್ಮಣ, ಪೂಜಾರಿ(ಬಿಲ್ಲವ), ಮೂಲ್ಯ, ದೇವಾಡಿಗ, ದಾಸಯ್ಯ, ನೇಯ್ಕಾರ, ಶೆಟ್ಟಿಗಾರ ಈ ಮೊದಲಾದ ಅನೇಕ ಜಾತಿ ಜನಾಂಗಗಳ ಜನ ತುಳುವನ್ನು ಮಾತೃಭಾಷೆಯನ್ನಾಗಿ ಮಾತನಾಡುತ್ತಿದ್ದಾರೆ.

ತುಳುನಾಡಿನ ಪ್ರಾಚೀನ ಚಿತ್ರಣ ಹೇಗಿತ್ತು? ತುಳುನಾಡಿನಲ್ಲಿ ಮಾನವರು ಮೊದಲು ಹೇಗೆ ನೆಲೆಯಾದರು? ತುಳುನಾಡಿನ ಜನರಲ್ಲಿ ಸಂಸ್ಕೃತಿ ನಾಗರೀಕತೆ ಹೇಗೆ ತೆರೆದುಕೊಂಡಿತು?

ಎನ್ನುವ ವಿಚಾರಗಳ ಬಗ್ಗೆ ಈಗಾಗಲೇ ಸಾಕಷ್ಟು ಸಂಶೋಧನೆಗಳು ನಡೆದಿವೆ. ಈ ಕುರಿತು ಖ್ಯಾತ ಇತಿಹಾಸ ತಜ್ಞ ಡಾ.ಕೆ.ವಿ.ರಮೇಶ ಅವರ ಮಾತುಗಳನ್ನು ಗಮನಿಸುವುದು ಸೂಕ್ತ.

"ತುಳುನಾಡಿನ ಕರಾವಳಿ ಪ್ರದೇಶದಲ್ಲಿ ಮೊಟ್ಟಮೊದಲಿಗೆ ಮಾನವನು ಕಾಣಿಸಿಕೊಂಡದ್ದು ಯಾವಾಗ? ಈ ಪ್ರದೇಶದಲ್ಲಿ ಇಲ್ಲಿಯವರೆಗೆ ಪುರಾತನ ವಸ್ತು ಸಂಶೋಧನೆಗಳು ನಡೆದಿಲ್ಲವಾದ ಕಾರಣ ಈ ಪ್ರಶ್ನೆಗೆ ಖಚಿತವಾದ ಸಮರ್ಥನೆ ನೀಡುವುದು ಅಸಾಧ್ಯ. ಪಶ್ಚಿಮ ಕರಾವಳಿಯಲ್ಲಿ ಮೊದಲಬಾರಿಗೆ ಮಾನವನು ಕಾಲಿಡುವುದಕ್ಕೆ ಕೆಲವು ಶತಮಾನಗಳಷ್ಟು ಮುಂಚಿತವಾಗಿಯೆ ಪುರಾತನ ಮನುಷ್ಯನು ದಕ್ಷಿಣ ಭಾರತದ ಇತರ ಪ್ರಾಂತಗಳಲ್ಲಿ ನೆಲೆಸಿದ್ದನೆಂಬುದು ವಿದ್ವಾಂಸರುಗಳ ಅಭಿಪ್ರಾಯ. ಪ್ರಾಚೀನ ಕಾಲದಲ್ಲಿ ಪಶ್ಚಿಮ ಘಟ್ಟದುದ್ದಕ್ಕೂ ಕರಾವಳಿ ಪ್ರದೇಶದಲ್ಲಿಯೂ ಇಂದಿರುವುದಕ್ಕಿಂತಲೂ ಹೆಚ್ಚು ಗಾಢವಾದ ಮತ್ತು ಅಪಾಯಕಾರಿಯಾದ ಕಾಡುಗಳಿದ್ದವು. ಘಟ್ಟವನ್ನು ದಾಟಿ ಕರಾವಳಿ ಪ್ರದೇಶದಲ್ಲಿ ನೆಲೆಸಿ ಅಲ್ಲಿ ಸಾಗುವಳಿಯ ಕಾರ್ಯ ಪ್ರಾರಂಭಿಸುವ ಸಲುವಾಗಿ ಪುರಾತನ ಮಾನವನು ಈ ಕಾಡುಗಳನ್ನು ಅಳಿಸುವುದು ಅನಿವಾರ್ಯವಾಯಿತು. ಈ ಮಹತ್ಸಾಧನೆಯು ಕಬ್ಬಿಣದ ಕೊಡಲಿಯ ಸಹಾಯವಿಲ್ಲದ ಮನುಷ್ಯರಿಂದ ಸಾಧ್ಯವಾಗಿರಲಾರದೆಂಬುದು ಖ್ಯಾತ ಪುರಾತತ್ವ ಸಂಶೋಧಕ ರಾಬರ್ಟ್ ಬ್ರೂಸ್‌ಫುಟ್‌ನ ಸಿದ್ಧಾಂತ. ಅಂದ ಮೇಲೆ ತುಳುನಾಡಿನ ಆದಿಮಾನವನು ಲೋಹಯುಗದವನೆಂದು (Ironage) ಊಹಿಸಬಹುದಾಗಿದೆ. ಈ ಸಂದರ್ಭದಲ್ಲಿ ಪ್ರಾಚೀನ ಕಾಲದಿಂದಲೂ ಪಶ್ಚಿಮ ಕರಾವಳಿ ಪ್ರದೇಶಕ್ಕೆ ಪರಶುರಾಮ ಕ್ಷೇತ್ರವೆಂಬ ಹೆಸರು ಇದ್ದು ಬಂದಿದೆಯೆಂಬುದು ಓದುಗರ ನೆನಪಿಗೆ ಬರದಿರಲಾರದು. ಪರಶುರಾಮನು ಆ ಲೋಹಯುಗದ ಕಾಡುಗಲಿಗಳ ನೆನಪಿನಿಂದ ಹುಟ್ಟಿದ ಪುರಾಣ ಪುರುಷನಿರಬಾರದೇಕೆ? ಇದು ಸರಿಯೆಂದಾದಲ್ಲಿ ತುಳುನಾಡಿನಲ್ಲಿ ಮಾನವನ ಇತಿಹಾಸವು ಮೂರುಸಾವಿರ ವರ್ಷಗಳ ಹಿಂದೆ ಪ್ರಾರಂಭವಾಯಿತೆಂದು ಹೇಳಬಹುದು. ಹೀಗೆ ತುಳುನಾಡಿಗೆ ಬಂದು ನೆಲೆಸಿದ ಆದಿಮಾನವರು ದ್ರಾವಿಡ ಜನಾಂಗಕ್ಕೆ ಸೇರಿದವರು. ಪಶ್ಚಿಮ ಘಟ್ಟಕ್ಕೆ ಅಡ್ಡವಾಗಿ ನಿಂತಿದ್ದ ಕಾರಣ ಅವರಿಗೂ ಘಟ್ಟದ ಪೂರ್ವಕ್ಕಿದ್ದ ಇತರ ದ್ರಾವಿಡ ಜನಾಂಗಗಳಿಗೂ ಮಧ್ಯೆ ಪರಸ್ಪರ ಸಂಪರ್ಕ ಕಡಿದು ಹೋಯಿತು. ಈ ಪ್ರತ್ಯೇಕತೆಯಿಂದಾಗಿ, ಅವರು ಮಾತನಾಡುತ್ತಿದ್ದ ದ್ರಾವಿಡ ಭಾಷೆಯಲ್ಲಿ ಕಾಲಕ್ರಮೇಣ ಬದಲಾವಣೆಗಳು ಹುಟ್ಟಿ ಬೆಳೆದು ತುಳುವೆಂಬ ಹೊಸದೊಂದು ದ್ರಾವಿಡ ಭಾಷೆಯು ಅಸ್ತಿತ್ವಕ್ಕೆ ಬಂದಿತು"[1] ಎನ್ನುವ ಈ ಮಾತನ್ನು ವಿಶೇಷವಾಗಿ ಗಮನಿಸಬೇಕು ಮತ್ತು

ಇದು ತುಳುನಾಡಿನ ಇತಿಹಾಸಕ್ಕೆ ಸಂಬಂಧಿಸಿದಂತೆ ಒಂದು ಅಧಿಕೃತ ಮಾಹಿತಿಯೆಂದು ಪರಿಗಣಿಸಬಹುದು.

### ೧.೧.೨: ತುಳುಪದ ನಿಷ್ಪತ್ತಿ

'ತುಳು' ಪದದ ನಿಷ್ಪತ್ತಿಯ ಕುರಿತು ಬಹಳಷ್ಟು ಜನ ವಿದ್ವಾಂಸರು ಬೇರೆ ಬೇರೆ ನೆಲೆಗಳಲ್ಲಿ ಚರ್ಚಿಸಿದ್ದಾರೆ. ಮಾತ್ರವಲ್ಲ, ಈ ವಿಚಾರದ ಬಗ್ಗೆ ಲೇಖಕರೊಳಗೆ ಭಿನ್ನಾಭಿಪ್ರಾಯವೂ ಇದೆ. ಮುಖ್ಯವಾಗಿ ಮಂಜೇಶ್ವರ ಗೋವಿಂದ ಪೈ,[೫] ಗಣಪತಿರಾವ್ ಐಗಳ್,[೬] ಬಿ.ಎ. ಸಾಲೆತ್ತೂರು,[೭] ಡಾ.ಪಿ.ಗುರುರಾಜ ಭಟ್,[೮] ಡಾ.ಸೂರ್ಯನಾಥ ಕಾಮತ್,[೯] ಪೊಳಲಿ ಶೀನಪ್ಪ ಹೆಗ್ಡೆ,[೧೦] ನಾರಾಯಣ ಕಿಲ್ಲೆ,[೧೧] ಕಡವ ಶಂಭುಶರ್ಮ,[೧೨] ಮೊದಲಾದವರನ್ನು ಈ ನೆಲೆಯಲ್ಲಿ ಹೆಸರಿಸಬಹುದು. ಸ್ಕಂದ ಪುರಾಣದ ಸಹ್ಯಾದ್ರಿಕಾಂಡದ ರಜತಪೀಠ(ಉಡುಪಿ) ಕ್ಷೇತ್ರ ಮಹಾತ್ಮ್ಯವನ್ನು ಆಧಾರವಾಗಿಟ್ಟುಕೊಂಡು ತುಳುನಾಡಿನ ಪ್ರಥಮ ಅರಸನಾದ ರಾಮಭೋಜನು, ಪರಶುರಾಮನ ಆದೇಶದಂತೆ ಮಾಡಿದ ತುಲಾಭಾರದಿಂದಾಗಿ ಈ ದೇಶಕ್ಕೆ ತೌಳವವೆಂದು ಹೆಸರು ಬಂತೆಂದು ಹೇಳುತ್ತಾರೆ.[೧೩] ಈ ಅರಸನಿಗೆ ತುಲಾರಾಜ, ತುಲಾದೇಶಾಧಿಪತಿ ಮುಂತಾದ ಹೆಸರುಗಳಿದ್ದುದರಿಂದ ಈ ನಾಡಿಗೆ ಅಥವಾ ಇಲ್ಲಿ ವಾಸಿಸುವ ಜನರಿಗೆ 'ತೌಲವ'ರೆಂಬ ಹೆಸರು ಬಂತು ಎಂದು ಹೇಳುತ್ತಾರೆ.[೧೪] ಕುಂದಾಪುರ ತಾಲೂಕಿನ ಕೋಟೇಶ್ವರದಲ್ಲಿ ಆಳಿದನೆನ್ನಲಾದ "ತುಳುಂಬ ಪೆರುಮಾಳ್" ಎಂಬ ಅರಸನಿಂದ ಈ ನಾಡಿಗೆ 'ತುಳು' ಎಂದು ಹೆಸರಾಯಿತೆಂದು ಊಹಿಸುವವರೂ ಇದ್ದಾರೆ.[೧೫] ನಾರಾಯಣ ಕಿಲ್ಲೆಯವರ ಅಭಿಪ್ರಾಯದಂತೆ ತುಳುನಾಡು ತಗ್ಗುಪ್ರದೇಶದಲ್ಲಿರುವ ನಾಡು. ಆದುದರಿಂದ ತುಳುನಾಡಾಯಿತು.[೧೬] ಗುರುರಾಜ ಭಟ್ಟರ ಅಭಿಪ್ರಾಯದಂತೆ ತುರುವರ ನಾಡೇ ತುಳುನಾಡಾಗಿದೆ.[೧೭] ಕ್ರಿ.ಶ. ೨-೩ನೇ ಶತಮಾನದಲ್ಲಿ ತುಳುನಾಡಿಗೆ ಬಂದು ನೆಲೆಸಿದ ಚುಟುಕುಲದವರಿಂದ ಈ ನಾಡಿಗೆ ತುಳುನಾಡೆಂದು ಹೆಸರು ಬಂತು ಎಂದೂ ಹೇಳಲಾಗಿದೆ.[೧೮] ಡಾ.ಬಿ.ಎ.ಸಾಲೆತ್ತೂರು ಅವರು 'ತುಳು' ಎಂಬ ಪದವು ಕನ್ನಡದ 'ತೂಳ್' ಎಂಬ ಪದದಿಂದ ಹುಟ್ಟಿಕೊಂಡಿರಬಹುದೆಂದು ಹೇಳುತ್ತಾರೆ.[೧೯] ಕುದ್ಕಾಡಿ ವಿಶ್ವನಾಥ ರೈ ಅವರು ತುಳ್ಳಲ್ ನಾಡು-ತುಳುನಾಡು ಎಂದಿದ್ದಾರೆ.[೨೦] ಜೆ.ಸ್ಟರಕ್ ಎಂಬ ವಿದೇಶೀ ವಿದ್ವಾಂಸರು ತುಳುಪದವನ್ನು ವಿಶ್ಲೇಷಿಸುತ್ತಾ ತುಳು ಎಂದರೆ ಸೌಮ್ಯ, ದುರ್ಬಲ, ದೀನ ಎಂಬ ಅರ್ಥವಿರುವುದರಿಂದ ಇಲ್ಲಿನ ಮುಖ್ಯ ಹಣ್ಣುಗಳಲ್ಲೊಂದಾದ ಹಲಸಿನ ಹಣ್ಣಿನ ಒಂದು ಜಾತಿಗೆ ತುಳುವ(ತುಳುವ ಪಿಲಕ್ಕಯಿ) ಎಂಬ ವಿಶೇಷಣವಿರುವುದರಿಂದ ಮೃದು ಎಂಬ

ಅರ್ಥದಿಂದಲೂ ಈ ನಾಡಿಗೆ ತುಳುನಾಡು ಎಂಬ ಹೆಸರು ಅನ್ವರ್ಥವಾಗಿ ಬಂದಿರಬೇಕು ಎಂದಿದ್ದಾರೆ.[೨೧] ಆದರೆ ಸೇಡಿಯಾಪು ಕೃಷ್ಣಭಟ್ಟರು, ತಮಿಳಿನಲ್ಲಿ 'ತುಳಿ' ಎಂದರೆ ನೀರಿನ ಹನಿ. ಇದು ಮಲೆಯಾಳದಲ್ಲಿಯೂ 'ತುಳ್ಳಿ' ಎಂಬ ರೂಪದಲ್ಲಿ ಬಳಕೆಯಲ್ಲಿದೆ. ಆದ್ದರಿಂದ ತುಳು ಎಂಬ ಶಬ್ದದ ನಿಜಾರ್ಥ ಜಲಭರಿತ ಎಂಬುದು ಸ್ಪಷ್ಟವಾಗುತ್ತದೆ ಎಂದು ಹೇಳಿ, ತುಳುನಾಡು ಎಂದರೆ ಆರ್ದ್ರ ಜಲಭರಿತ ಪ್ರದೇಶ ಎಂಬುದಾಗಿ ಚರ್ಚಿಸುತ್ತಾರೆ.[೨೨] ಇದಕ್ಕೆ ಪೂರಕವಾಗಿಯೇ ಮಂಜೇಶ್ವರ ಗೋವಿಂದ ಪೈಯವರು ಮೃದುಭೂಮಿ ಎಂಬ ಅರ್ಥದಲ್ಲಿ ತುಳುನಾಡು ಎಂಬ ಹೆಸರು ಬರಲು ಕಾರಣವಾಗಿರಬೇಕೆಂದು ಅಭಿಪ್ರಾಯಪಟ್ಟಿದ್ದಾರೆ.[೨೩] ಈ ಎಲ್ಲ ಅಂಶಗಳನ್ನು ಗಮನಿಸಿದಾಗ 'ತುಳು' ಪದದ ಬಗೆಗೆ ವಿಶ್ಲೇಷಣೆ ಮಾಡಿದ ಹೆಚ್ಚಿನ ಈ ಎಲ್ಲ ವಿದ್ವಾಂಸರುಗಳು ಅದನ್ನು ತುಳುಭಾಷೆಗೆ ಅನ್ವಯಗೊಳಿಸದೆ ಈ ಪ್ರದೇಶಕ್ಕೆ ಹೇಗೆ ಅನ್ವಯವಾಗುತ್ತದೆ ಎಂಬ ಬಗ್ಗೆ ಬೆಳಕು ಚೆಲ್ಲಿರುವುದು ಸ್ಪಷ್ಟವಾಗುತ್ತದೆ. ತುಳುನಾಡಿನ ಮೇರೆಗಳನ್ನು ಗುರುತಿಸುವಲ್ಲಿ ಭಾಷೆ ಅಥವಾ ರಾಜಕೀಯ ಅಂಶಗಳಿಗೆ ಪ್ರಾಧಾನ್ಯ ನೀಡುವುದು ಸರಿಯಲ್ಲ. ಏಕೆಂದರೆ ತುಳು ಎಂಬ ಹೆಸರು ಮೊದಲು ಬಂದುದು ನಾಡಿಗೇ ಹೊರತು ಭಾಷೆಗಲ್ಲ. ಈ ನಾಡಿನ ಜನರ ಆಡುಭಾಷೆಗೆ ತುಳು ಎಂಬ ಹೆಸರು ನಾಡಿನಿಂದಾಗಿ ಬಂತು. ತುಳು ಎಂಬ ಪದವನ್ನು ವಿಶ್ಲೇಷಿಸುತ್ತಾ ಹೆಚ್ಚಿನ ಎಲ್ಲಾ ವಿದ್ವಾಂಸರು ಈ ನಾಡಿನ ಪ್ರಾಕೃತಿಕ ಗುಣ ಲಕ್ಷಣಗಳಿಗೆ ಅನ್ವಯಗೊಳಿಸಿದ್ದಾರೆಯೇ ಹೊರತು ಭಾಷೆಗೆ ಅನ್ವಯಗೊಳಿಸಲು ಪ್ರಯತ್ನಿಸಿಲ್ಲ. ಪ್ರಾಚೀನ ತಮಿಳು ಕಾವ್ಯಗಳಲ್ಲಿ ಈ ನಾಡಿನ ಭಾಷೆಯನ್ನು 'ತುಳುನಾಟ್ಟ ತಮಿಳ್' ಎಂದು ಕರೆದಿರುವುದು ಈ ವಾದವನ್ನು ಪುರಸ್ಕರಿಸುತ್ತದೆ.[೨೪] ಎಸ್.ಯು.ಪಣಿಯಾಡಿಯವರು ತುಳುವ ಮಹಾಸಭೆಯ ವಿಜ್ಞಾಪನೆಯಲ್ಲಿ ಬರೆದಿರುವ ಲೇಖನದಲ್ಲಿ ತುಳುವರು, ತುಳುಮಾತನಾಡಬಲ್ಲವರು ಅಥವಾ ತುಳುನಾಡಿನ ಆವಾಸಿಗಳು ಎಂದಿದ್ದಾರೆ.[೨೫] ಇಲ್ಲಿ ಕೂಡ ತುಳುವ ಎಂಬ ಹೆಸರು ತುಳುನಾಡಿನ ನಿವಾಸಿಗಳಿಗೆ ಅನ್ವರ್ಥವಾಗುತ್ತದೆ-ಎಂಬುದು ಸ್ಪಷ್ಟವಾಗುತ್ತದೆ. ಕ್ರಿಸ್ತಶಕದ ಮೊದಲ ಮೂರು ಶತಮಾನಗಳಲ್ಲಿ ಪ್ರವರ್ಧಮಾನವಾಗಿದ್ದ ಸಂಗಂ ಕಾಲಕ್ಕೆ ಸೇರಿದ ತಮಿಳು ಸಾಹಿತ್ಯದಲ್ಲಿ ತುಳು ಎಂಬ ಪದ ಮೊದಲು ಕಂಡು ಬರುತ್ತದೆ ಮತ್ತು ಕ್ರಿ.ಶ.ಸುಮಾರು ಮೂರನೆಯ ಶತಮಾನದಲ್ಲಿ ಬಾಳಿರಬಹುದಾದ ಮಾಮುಲನಾರ್ ಎಂಬ ಸಂಘ ಕವಿಯು ತುಳುನಾಡನ್ನು 'ಮೆಯ್ಮಲಿ ಪುರುಂಪೊಣ್ ಚೆಮಕೋಶರ್........ ತುಳುನಾಡು' ಅಂದರೆ ಸುವರ್ಣಾಭರಣಗಳಿಂದ ಅಲಂಕೃತರಾದ ಕೋಶರ್ ಜನಾಂಗದ ನಾಡು-ತುಳುನಾಡು ಎಂದು ಪದ್ಯವೊಂದರಲ್ಲಿ ಬಣ್ಣಿಸಿದ್ದಾನೆ.[೨೬] ಕ್ರಿ.ಶ. ಮೂರನೇ ಶತಮಾನದ್ದೆನ್ನಲಾದ 'ಅಗನಾರೂರು' ಗ್ರಂಥದಲ್ಲಿ ನಿಬಿಡವಾದ

ಹಣ್ಣಿನ ಮರಗಳಿಂದ ಕೂಡಿದ ತೋಪುಗಳಿಂದಲೂ, ಹಣ್ಣುಗಳನ್ನು ತಿಂದು ನಲಿಯುವ ನವಿಲುಗಳಿಂದಲೂ ತುಳುನಾಡು ಸುಂದರವಾಗಿತ್ತು ಎಂಬ ವರ್ಣನೆಯಿದೆ.[೨೭] ಒಟ್ಟಾರೆಯಾಗಿ 'ತುಳು' ಇದು ಜಲಸಂಬಂಧವಾಚಕ ದೇಶವಾಚಿ ದ್ರಾವಿಡ ಪದ. ಅಂದರೆ ಪುರಾಣಗಳಲ್ಲಿನ ಉಲ್ಲೇಖಗಳ ಪ್ರಕಾರ ಪೂರ್ವದಲ್ಲಿ ತುಳುನಾಡು ಸಮುದ್ರ ಆವರಿಸಿಕೊಂಡಿದ್ದ ಪ್ರದೇಶವಾಗಿರುವುದರಿಂದ 'ತುಳುನಾಡು' ಪದದ ನಿಷ್ಪತ್ತಿಯ ಈ ವಾದವನ್ನು ವಿಶೇಷವಾಗಿ ಗಮನಿಸಬಹುದಾಗಿದೆ.

ತುಳುನಾಡಿಗೆ ತುಳುನಾಡು ಎಂದು ಹೆಸರು ರೂಢಿಯಲ್ಲಿ ಬರುವ ಮುಂಚೆ ತ್ರಿಗರ್ತ, ಮುದ್ಗರ ದ್ವಿಪ, ಪಾತಾಳ, ನಾಗರಖಂಡ, ಶೂರ್ಪಾರಕ, ಅನೂಪದೇಶ, ಅಪರಾಂತ, ಸಪ್ತಕೊಂಕಣ, ಸತಿಯಪುತ್ರ, ಆಲುವ(ಆಲುಕ), ಆಳ್ವಖೇಡ–ಮುಂತಾದ ಹೆಸರುಗಳು ಇದ್ದವು[೨೮] ಮತ್ತು ಈ ನಾಡಿಗೆ 'ತುಳುನಾಡು' ಎಂಬ ಹೆಸರು ಕ್ರಿ.ಶ. ಮೂರನೇ ಶತಮಾನದಿಂದಲಷ್ಟೆ ಬಂದಿದೆ.[೨೯] ಆದಾಗ್ಯೂ ರಾಮಾಯಣ ಕಾಲದಿಂದಲೇ ಈ ತುಳುನಾಡು ಪ್ರತ್ಯೇಕ ಅಸ್ತಿತ್ವವನ್ನು ಹೊಂದಿತ್ತು ಮತ್ತು ಪುರಾಣ ಕಾಲದಿಂದಲೇ ಈ ಭೂಪ್ರದೇಶವು ಪ್ರತ್ಯೇಕವಾಗಿ ಗುರುತಿಸಲ್ಪಟ್ಟಿತ್ತು.[೩೦] ಅಂದರೆ ತುಳು ಎಂಬ ಹೆಸರು ರೂಢಿಗೆ ಬರುವವರೆಗೆ ಬೇರೆ ಬೇರೆ ಕಾಲಘಟ್ಟಗಳಲ್ಲಿ ಈ ನಾಡು ಮೇಲಿನಂತೆ ಬೇರೆ ಬೇರೆ ಹೆಸರುಗಳಿಂದ ಕರೆಸಿಕೊಂಡಿತ್ತು–ಎಂಬಿತ್ಯಾದಿ ವಿವರಗಳನ್ನು ವಿದ್ವಾಂಸರು ಶೋಧಿಸಿರುವುದು ವಿಚಾರಣೀಯವಾದುದು. ಆದರೆ ತುಳುನಾಡಿನ ಪೂರ್ವದ ಹೆಸರುಗಳು ಏನೇ ಇದ್ದರೂ ಆ ಕಾಲಕ್ಕೆ ಈ ನಾಡಿನ ಭಾಷೆಯನ್ನು ಆ ಹೆಸರುಗಳಿಂದ ಇಲ್ಲವೆ ಬೇರೆ ಹೆಸರುಗಳಿಂದ ಕರೆಯುತ್ತಿದ್ದ ಬಗ್ಗೆ ಯಾವುದೇ ಮಾಹಿತಿಯಿಲ್ಲ. ಹಾಗಾಗಿ ಈ ನಾಡಿಗೆ ತುಳುನಾಡು ಎಂದು ಹೆಸರು ರೂಢಿಯಾದ ಬಳಿಕ ಇಲ್ಲಿನ ಭಾಷೆಗೂ ತುಳು ಭಾಷೆ ಎಂದು ಹೆಸರು ರೂಢಿಯಾಗಿರಬಹುದು. ಒಟ್ಟಿನಲ್ಲಿ ಹೇಳುವುದಾದರೆ ಈ ತುಳು ಭಾಷೆ, ತುಳು ಸಂಸ್ಕೃತಿಗೆ ಕಡಿಮೆ ಕಡಿಮೆಯೆಂದರೂ ಸುಮಾರು ಎರಡು–ಮೂರುಸಾವಿರ ವರ್ಷಗಳ ಇತಿಹಾಸ ಇದೆಯೆಂದು ವಿದ್ವಾಂಸರು ಪಡುವ ಅಭಿಪ್ರಾಯ ಒಪ್ಪತಕ್ಕದ್ದಾಗಿದೆ.[೩೧]

### ೧.೧.೩: ತುಳುನಾಡಿನ ಆಡಳಿತ ಇತಿಹಾಸ

ತಮಿಳು ಪದ್ಯವೊಂದರ ಪ್ರಕಾರ ಮೂಲದಲ್ಲಿ ತುಳುನಾಡಿನಲ್ಲಿ ಕೋಶರ್ ಜನಾಂಗದವರು ನೆಲೆಸಿದ್ದರು.[೩೨] ಈ ಕೋಶರರನ್ನು ಮೌರ್ಯ ಮನೆತನದ 'ನನ್ನನ್' ಎಂಬವನು

ಸೋಲಿಸಿ ತುಳುನಾಡನ್ನು ತನ್ನ ಅಧಿಪತ್ಯಕ್ಕೆ ಒಳಪಡಿಸಿಕೊಂಡ ಬಗ್ಗೆ ದಾಖಲೆಗಳಿವೆ.[೩೩] ಆ ಬಳಿಕ ಪ್ರಾಚೀನ ಬನವಾಸಿಯ ಕದಂಬರು(ಕ್ರಿ.ಪೂ.೨೦೦ರಿಂದ ಕ್ರಿ.ಶ.೬೦೦ರವರೆಗೆ),[೩೪] ಬಾದಾಮಿಯ ಪಶ್ಚಿಮ ಚಾಲುಕ್ಯರು(ಕ್ರಿ.ಶ.೫೭೮ರಿಂದ ಕ್ರಿ.ಶ.೭೫೭ರವರೆಗೆ),[೩೫] ರಾಷ್ಟ್ರಕೂಟರು(ಕ್ರಿ.ಶ.೭೫೪ರಿಂದ ಕ್ರಿ.ಶ.೯೭೩ರವರೆಗೆ),[೩೬] ಹೊಯ್ಸಳರು(ಕ್ರಿ.ಶ.೧೦೪೭ರಿಂದ ಕ್ರಿ.ಶ.೧೩೩೬ರವರೆಗೆ),[೩೭] ವಿಜಯನಗರದ ಅರಸರು(ಕ್ರಿ.ಶ.೧೩೩೬ರಿಂದ ಕ್ರಿ.ಶ.೧೫೬೫ರವರೆಗೆ),[೩೮] ಇಕ್ಕೇರಿ ಅರಸರು (ಕ್ರಿ.ಶ.೧೫೬೦ರಿಂದ ಕ್ರಿ.ಶ.೧೭೬೩ರವರೆಗೆ)[೩೯] ಮತ್ತು ಹಲವು ಸ್ಥಳೀಯ ಜೈನ ಅರಸರು–ಹೀಗೆ ಬೇರೆ ಬೇರೆ ಆಳರಸರು ತುಳುನಾಡನ್ನು ಆಳ್ವಿಕೆ ಮಾಡಿರುವ ಬಗ್ಗೆ ನಮಗೆ ಸಾಕಷ್ಟು ವಿವರಗಳು ದೊರೆಯುತ್ತವೆ. ಆದರೆ ಸುಮಾರು ಹೆಚ್ಚುಕಮ್ಮಿ ಒಂದುಸಾವಿರ ವರ್ಷಗಳ ದೀರ್ಘಕಾಲದವರೆಗೆ ತುಳುನಾಡನ್ನು ಆಳ್ವಿಕೆ ಮಾಡಿದವರು ಆರಂಭದ ಸಾಮಂತ ಅರಸರಾದ 'ಆಳುಪ'ರು. ಶಾಸನಗಳ ಆಧಾರದ ಪ್ರಕಾರ ಆಳುಪ ಅರಸರು ಕ್ರಿ.ಶ.೫೬೭ರಿಂದ ಕ್ರಿ.ಶ.೧೩೨೫ರವರೆಗೆ ತುಳುನಾಡನ್ನು ಆಳ್ವಿಕೆ ಮಾಡಿದ್ದಾರೆಂದು ತಿಳಿಯಬಹುದು.[೪೦] ಅವರ ಕಾಲದಲ್ಲಿ ತುಳುನಾಡಿನ ಭೌಗೋಳಿಕ ರೂಪವು ಸಾಕಷ್ಟು ಪರಿವರ್ತನೆ ಪಲ್ಲಟಗೊಂಡಿರುವುದು ಶಾಸನಗಳ ಆಧಾರದಿಂದ ತಿಳಿದು ಬರುತ್ತದೆ.

### ೧.೧.೪: ತುಳುನಾಡಿನಲ್ಲಿ ನಂಬಿಕೆ ಆಚರಣೆಗಳು

ತುಳುನಾಡಿನ ಜನ ಮೊದಲಿನಿಂದಲೂ ದೈವ ಭಕ್ತರು. ನಂಬಿ ನಡೆಯುವ ನಿಷ್ಠಾವಂತರು. ಅನ್ನ ನೀರು ಕೊಡುವ ಭೂಮಿಯಲ್ಲಿ ಗಾಳಿ ಬೆಳಕು ಕೊಡುವ ಪ್ರಕೃತಿಯಲ್ಲಿ ದೇವರನ್ನು ಕಂಡುಕೊಂಡವರಲ್ಲದೆ ಅತ್ಯಂತ ಭಯ ಭಕ್ತಿಯಿಂದ ಪೂಜಿಸುತ್ತಾ ಬಂದವರು. ಭೂತಾರಾಧನೆ, ನಾಗಾರಾಧನೆ–ಇವು ತುಳುವರ ನಂಬಿಕೆ ನಡವಳಿಕೆಗಳ ಜೀವಾಳ. ಅವರ ಪ್ರಕಾರ ಈ ಆರಾಧನಾ ಶಕ್ತಿಗಳನ್ನು ಅವರು ಒಟ್ಟಾಗಿ 'ಸತ್ಯೊಲು'(ಸತ್ಯಗಳು) ಎಂದು ಕರೆಯುತ್ತಾರೆ. ಅವುಗಳ ಅಗೋಚರ ಅಸ್ತಿತ್ವವನ್ನು 'ಮಾಯೆ' ಎನ್ನುತ್ತಾರೆ. ಅವುಗಳು ಗೋಚರಕ್ಕೆ ಬರುವುದನ್ನು 'ಜೋಗ' ಎನ್ನುತ್ತಾರೆ. ತಮ್ಮ ಬದುಕಿನ ಸಮಸ್ಯೆಗಳನ್ನು ಈ ಸತ್ಯಗಳ ಚಿತ್ತಕ್ಕೆ ಆರೋಪಿಸಿ ಪರಿಹಾರ ಬಯಸುವುದು ಅವರ ಆರಾಧನೆಯ ಮೂಲ ಉದ್ದೇಶವಾಗಿ ಕಂಡುಬರುತ್ತದೆ.

ತುಳುವರು ಈ ಸತ್ಯದೈವಗಳನ್ನು ತಮ್ಮ ತಮ್ಮ ಮನೆಗಳಲ್ಲೇ ಮಣೆಮಂಚಗಳಲ್ಲಿ ಇರಿಸಿ ಭಯಭಕ್ತಿಯಿಂದ ನಂಬಿ ಆಚರಿಸಿಕೊಂಡು ಬರುತ್ತಾರೆ. ಮನೆಯ ಪರಿಸರದ ಮರಗಳಡಿಯಲ್ಲಿ,

ಕಲ್ಲುಕಟ್ಟೆಗಳಲ್ಲಿ, ಆಲಡೆ, ಗುಡಿ(ಸಾನ), ಕಳ, ಕೊಟ್ಯ, ಗರಡಿಗಳಲ್ಲಿ ಆರಾಧಿಸುತ್ತಾರೆ. ಹಬ್ಬಹರಿದಿನ, ಹುಣ್ಣಿಮೆ, ಸಂಕ್ರಾಂತಿಗಳಲ್ಲಿ ಮತ್ತು ವರ್ಷದ ನಿರ್ದಿಷ್ಟ ದಿನಗಳಲ್ಲಿ ಕೋಲ, ನೇಮ, ತಂಬಿಲ ನಡೆಸಿಕೊಂಡು ಬರುತ್ತಾರೆ.

ಇಲ್ಲಿನ ಭೂತಾರಾಧನೆಯಂತು ಇತರ ಆರಾಧನಾ ಪದ್ಧತಿಗಳಿಗಿಂತ ಹೆಚ್ಚು ಪ್ರಭಾವಿತವಾದುದು. ಇತ್ತೀಚಿನ ಅಧ್ಯಯನಗಳ ಪ್ರಕಾರ ತುಳುನಾಡಿನಲ್ಲಿ ಸುಮಾರು ೩೬೦ ವಿವಿಧ ಭೂತಗಳ ಹೆಸರುಗಳು ದೊರೆತಿವೆ.[೪೧] ಇದಕ್ಕಿಂತಲೂ ಹೆಚ್ಚಿನ ಸಂಖ್ಯೆಯ ಭೂತಗಳು ಇವೆಯೆಂದು ಹೇಳಲಾಗುತ್ತದೆ. ಅಂದರೆ ತುಳುನಾಡಿನ ಸಾಮಾಜಿಕ ವ್ಯವಸ್ಥೆಗೆ ಭೂತಾರಾಧನೆಯ ಅವಶ್ಯಕತೆ ಗಮನಾರ್ಹವಾದುದು. ಡಾ.ಕೆ.ಚಿನ್ನಪ್ಪ ಗೌಡ ಅವರು ತುಳುನಾಡಿನ ಭೂತಾರಾಧನೆಯ ಕುರಿತು ವಿಸ್ತೃತವಾದ ಅಧ್ಯಯನ ಮಾಡಿ ತುಳುಸಮಾಜ ಮತ್ತು ಭೂತಾರಾಧನೆ ಬಗೆಗೆ ಗಹನವಾಗಿ ಚರ್ಚಿಸಿದ್ದಾರೆ.[೪೨] ತುಳುವರ ನಂಬಿಕೆ ಪ್ರಕಾರ ಉದಯಕ್ಕೆ ಸೂರ್ಯ, ಅಸ್ತಮಕ್ಕೆ ಚಂದ್ರ, ಕಲ್ಲಿನಲ್ಲಿ ನಾಗ, ಹುತ್ತದಲ್ಲಿ ಸರ್ಪ, ಬನದಲ್ಲಿ ಬೆರ್ಮೆರ್ ಅವರನ್ನು ಕಾಪಾಡುವ ಶಕ್ತಿಗಳಾಗಿವೆ.

ನಂಬಿದ ಸತ್ಯದೈವಗಳಿಗೆಲ್ಲ ಕಾಲಕಾಲಕ್ಕೆ ಪರ್ವ, ಅಗೆಲು, ತಂಬಿಲ, ಕೋಲ, ನೇಮ, ಮೆಚ್ಚಿ, ಆಯನ, ಬಂಡಿ, ಜಾತ್ರೆ, ತುಡರಬಲಿ, ದೊಂಪದಬಲಿ, ಒತ್ತೆಕೋಲ, ಕೆಂಡಸೇವೆ, ಜಾಲಾಟ ಮೊದಲಾದ ಆರಾಧನಾ ಪ್ರಭೇದಗಳ ಮೂಲಕ ಪೂಜೆ ಸಲ್ಲಿಸುತ್ತಾರೆ. ಈ ಆರಾಧನಾ ಕ್ರಮಗಳೆಲ್ಲ ನಿಗೂಢವಾದ ಅತಿಮಾನವ ಶಕ್ತಿಗಳ ಬಗೆಗೆ ತುಳುವರು ತಳೆದಿದ್ದ ಭಯ ಭಕ್ತಿ ಶ್ರದ್ಧೆ ನಂಬಿಕೆಗಳ ಆಚರಣಾತ್ಮಕ ಮನೋಭಾವವಾಗಿರುವುದನ್ನು ತಿಳಿಸುತ್ತದೆ. ಅಂದರೆ ತುಳುನಾಡು ಅನೇಕ ಸಾಂಸ್ಕೃತಿಕವಾದ, ಧಾರ್ಮಿಕವಾದ ಆಚರಣೆಗಳಿಗೆ ಪ್ರಖ್ಯಾತಿ ಪಡೆದಿದೆ. ಪಗ್ಗು, ಬೇಶ, ಕಾರ್ತೆಲ್, ಆಟಿ, ಸೋಣ, ನಿರ್ನಾಲ, ಬೊಂತೆಲ್, ಜಾರ್ದೆ, ಪೆರಾರ್ದೆ, ಪೊನ್ನಿ, ಮಾಯಿ, ಸುಗ್ಗಿ–ಎಂಬ ಹನ್ನೆರಡು ತಿಂಗಳುಗಳ ವಿಶಿಷ್ಟ ಕಾಲ ಕಲ್ಪನೆ ತುಳುನಾಡಿನಲ್ಲಿದೆ. ಇದರನುಸಾರವಾಗಿ ಬೇಸಾಯಕ್ರಮ, ಆಚರಣೆ, ಆರಾಧನೆ, ನಂಬಿಕೆಗಳನ್ನು ನಡೆಸಿಕೊಂಡು ಬರುತ್ತಿರುವುದು ತುಳುವರ ವಿಶೇಷತೆ. ಕಾಲ, ಸ್ಥಳ, ಬೆಳೆಗಳಿಗೆ ಹೊಂದಿಕೊಂಡು ವಾರ್ಷಿಕ ಆವರ್ತನದ ನೆಲೆಯಲ್ಲಿ ಈ ಆಚರಣೆಗಳನ್ನು ನಡೆಸಿಕೊಂಡು ಬರುತ್ತಿರುವುದು ನಿಜಕ್ಕೂ ವಿಸ್ಮಯಕಾರಿ ವಿಷಯ. ಅಂತೆಯೇ ಇಲ್ಲಿನ ಗಾದೆ, ಒಗಟು, ಪಾಡ್ದನ ಮುಂತಾದ ಜನಪದ ಸಾಹಿತ್ಯಲೋಕ ಕುತೂಹಲಕರವಾದುದು.

## ೧.೨: ಅಧ್ಯಯನದ ಉದ್ದೇಶ

ಸಂಶೋಧನೆಯ ಉದ್ದೇಶಗಳನ್ನು ಗಮನದಲ್ಲಿಟ್ಟುಕೊಂಡು ಈ ಅಧ್ಯಯನವನ್ನು ಕೈಗೆತ್ತಿಕೊಳ್ಳಲಾಗಿದೆ. ತುಳುನಾಡಿನ ವಾರ್ಷಿಕ ಆವರ್ತನದ ಆಚರಣೆಗಳನ್ನು ಗುರುತಿಸಿ ದಾಖಲಿಸುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ. ತುಳುನಾಡಿನ ಆಚರಣೆಗಳ ಸಾಂಸ್ಕೃತಿಕ ಜಗತ್ತನ್ನು ನಿರೂಪಿಸುವ ಕೆಲಸವನ್ನೂ ಮಾಡಲಾಗಿದೆ. ಆಚರಣೆಗಳ ಮಹತ್ವಕ್ಕೆ ಸಂಬಂಧಿಸಿದಂತೆ ಎರಡನೆಯ ಅಧ್ಯಾಯವಾದ 'ಆಚರಣೆಗಳ ಹುಟ್ಟು ಮತ್ತು ಸ್ವರೂಪ' ಎಂಬ ಅಧ್ಯಾಯದಲ್ಲಿ ವಿಶ್ಲೇಷಿಸಲಾಗಿದೆ. ಆಚರಣೆಗಳ ಪ್ರಯೋಜನ ಮತ್ತು ಔಚಿತ್ಯಗಳನ್ನು ಕಂಡುಕೊಳ್ಳುವ ಉದ್ದೇಶದೊಂದಿಗೆ, ಆಚರಣೆಗಳ ಮೂಲಕ ಪ್ರಕೃತಿ ಆರಾಧನೆ ಮತ್ತು ಕೃಷಿ ಸಂಸ್ಕೃತಿಯ ಸಂರಕ್ಷಣೆಗೆ ಸಿಗುತ್ತಿರುವ ಮಹತ್ವ, ಸಾಮಾಜಿಕ ಮತ್ತು ಕೌಟುಂಬಿಕ ಸಂಬಂಧವನ್ನು ಬೆಸೆಯುವಲ್ಲಿ ಆಚರಣೆಗಳು ನಿರ್ವಹಿಸುವ ಪಾತ್ರವನ್ನು ಕಂಡುಕೊಳ್ಳುವ ಪ್ರಯತ್ನವನ್ನು ಮಾಡಲಾಗಿದೆ. ತುಳುನಾಡಿನ ಆಚರಣೆಗಳು ಪ್ರಸ್ತುತದಲ್ಲಿ ಮೊದಲಿನ ಮಹತ್ವವನ್ನು ಉಳಿಸಿಕೊಳ್ಳದಿರುವ ಕಾರಣಗಳೇನು? ಹಾಗೂ ಅನ್ಯ ಸಂಸ್ಕೃತಿ ಆಚರಣೆಗಳ ಪ್ರಭಾವ ತುಳುನಾಡಿನ ಆಚರಣೆಗಳ ಮೇಲೆ ಆಗಿದೆ ಎಂಬವುಗಳ ಬಗೆಗೆ ಉತ್ತರವನ್ನು ಕಂಡುಕೊಳ್ಳುವ ಪ್ರಯತ್ನವನ್ನು ಇಲ್ಲಿ ನಡೆಸಲಾಗಿದೆ. ಅಂದರೆ ಆಚರಣೆಗಳ ಚಲನಶೀಲತೆಯ ಕುರಿತು ಚರ್ಚಿಸಲಾಗಿದೆ. ಅಂತೆಯೇ ತುಳುನಾಡಿನಲ್ಲಿ ಆಚರಣೆಗಳಲ್ಲಿ ಉಪಯೋಗಿಸುವ ಸಾಧನ ಸಲಕರಣೆಗಳ ಔಚಿತ್ಯದ ಕುರಿತು ಬೆಳಕು ಚೆಲ್ಲಲಾಗಿದೆ. ಆಧುನಿಕತೆ ಮತ್ತು ಶಿಕ್ಷಣದಿಂದ ತುಳುಸಂಸ್ಕೃತಿಯ ಮೇಲಾಗುವ ಪರಿಣಾಮಗಳ ಬಗೆಗೂ ಚರ್ಚಿಸಿ – ಈ ಎಲ್ಲಾ ಸಮಸ್ಯೆಗಳಿಗೆ ಉತ್ತರವನ್ನು ಕಂಡುಕೊಳ್ಳುವ ಉದ್ದೇಶವನ್ನು ಈ ಅಧ್ಯಯನದಲ್ಲಿ ಮಾಡಲಾಗಿದೆ.

## ೧.೩: ಅಧ್ಯಯನದ ವ್ಯಾಪ್ತಿ

ಪ್ರಸ್ತುತ ತುಳುನಾಡಿನಲ್ಲಿ ಬಿಸುಪರ್ಬ, ಅಕ್ಷಯ ತೃತೀಯ, ಪತ್ತನಾಜೆ, ಆಟಿ ಅಮಾವಾಸ್ಯೆ, ನಾಗರಪಂಚಮಿ, ವರಮಹಾಲಕ್ಷ್ಮೀ ವ್ರತ, ಋಗುಪಾಕರ್ಮ, ಯಜುರುಪಾಕರ್ಮ, ಶ್ರೀಕೃಷ್ಣ ಜನ್ಮಾಷ್ಟಮಿ, ಸೋಣ ಸಂಕ್ರಾಂತಿ, ಸೋಣ ಶನಿವಾರ, ಗೌರಿ ತೃತೀಯ, ಗಣೇಶ ಚೌತಿ, ಅನಂತ ಚತುರ್ದಶಿ, ಮಹಾಲಯ, ಮಹಾಲಯ ಅಮಾವಾಸ್ಯೆ, ಕುರಲ್‌ಪರ್ಬ, ಪುದ್ವಾರ್, ನವರಾತ್ರಿ, ಮಾರ್ನಮಿ, ಆಯುಧಪೂಜೆ, ವಿಜಯದಶಮಿ, ಶಮೀಪೂಜೆ, ಕಾವೇರಿ ಸಂಕ್ರಾಂತಿ, ಪರ್ಬ (ನರಕ ಚತುರ್ದಶಿ, ಲಕ್ಷ್ಮೀಪೂಜೆ, ಬಲೀಂದ್ರಪೂಜೆ, ಗೋಪೂಜೆ, ಅಂಗಡಿಪೂಜೆ,

ಆಯುಧಪೂಜೆ), ಜೋಕುಲೆ ಪುಣ್ಣಮೆ, ಸುಬ್ರಹ್ಮಣ್ಯ ಷಷ್ಠಿ, ಕಿರುಷಷ್ಠಿ, ತುಳಸೀಪೂಜೆ, ಮಕರ ಸಂಕ್ರಮಣ, ಕೆಡ್ಡಸ, ಶಿವರಾತ್ರಿ, ಚಾಂದ್ರಯುಗಾದಿ, ಎಳ್ಳಮವಾಸ್ಯೆ – ಹೀಗೆ ಸುಮಾರು ೩೦ಕ್ಕೂ ಹೆಚ್ಚು ಆಚರಣೆಗಳನ್ನು ವಾರ್ಷಿಕ ಆವರ್ತನದ ನೆಲೆಯಲ್ಲಿ ಆಚರಿಸುತ್ತಿರುವುದು ಕಂಡು ಬರುತ್ತದೆ. ಆದರೆ ಇವುಗಳನ್ನೆಲ್ಲ ಮೂಲತಃ ತುಳುನಾಡಿನ ಆಚರಣೆಗಳು ಎಂದು ಗುರುತಿಸುವುದು ಸಾಧ್ಯವಿಲ್ಲ. ಹೀಗಾಗಿ ತುಳುನಾಡಿನ ವಾರ್ಷಿಕ ಆವರ್ತನದ ಆಚರಣೆಗಳನ್ನು ಗುರುತಿಸುವಾಗ ಮುಖ್ಯವಾಗಿ ಮೂರು ಮುಖ್ಯ ಮಾನದಂಡಗಳನ್ನು ಇಲ್ಲಿ ಇಟ್ಟುಕೊಳ್ಳಲಾಗಿದೆ.

**ಮೊದಲನೆಯದಾಗಿ** ಆವರ್ತನದ ಆಚರಣೆಗಳನ್ನು ಮೂಲತಃ ತುಳುವರು ಅಂದರೆ ದ್ರಾವಿಡ ಮೂಲದ ತುಳುವರು ಆಚರಿಸುತ್ತಿದ್ದಿರಬೇಕು.

**ಎರಡನೆಯದಾಗಿ** ಆವರ್ತನದ ಆಚರಣೆಗಳು ಕೃಷಿ ಇಲ್ಲವೆ ಪ್ರಕೃತಿಯನ್ನು ಪೂಜಿಸುವ ನೆಲೆಯಲ್ಲಿ ಇರಬೇಕು.

**ಮೂರನೆಯದಾಗಿ** ಆವರ್ತನದ ಆಚರಣೆಗಳು ಸಾಮಾನ್ಯವಾಗಿ ತುಳು ತಿಂಗಳುಗಳ ನಿರ್ದಿಷ್ಟ ದಿನಗಳಲ್ಲಿ ಇಲ್ಲವೆ ನಿರ್ದಿಷ್ಟ ತುಳು ತಿಂಗಳುಗಳಲ್ಲಿ ಬರುವಂತಿರಬೇಕು.

ಈ ನೆಲೆಯಲ್ಲಿ ಪರಿಶೀಲಿಸಿದಾಗ ಮೇಲೆ ತಿಳಿಸಿದ ಮೂವತ್ತಕ್ಕೂ ಹೆಚ್ಚಿನ ವಾರ್ಷಿಕ ಆವರ್ತನದ ಆಚರಣೆಗಳಲ್ಲಿ ನಮಗೆ ಸಿಗುವುದು ಕೇವಲ ಬಿಸುಪರ್ಬ, ಪತ್ತನಾಜೆ, ಆಟಿ ಅಮಾವಾಸ್ಯೆ, ನಾಗರ ಪಂಚಮಿ, ಕುರಲ್‌ಪರ್ಬ, ಪುದ್ವಾರ್, ಕಾವೇರಿ ಸಂಕ್ರಾಂತಿ, ಪರ್ಬ, ಕೆಡ್ಡಸ – ಇವುಗಳು ಮಾತ್ರ. ಆದುದರಿಂದ ಈ ಒಂಬತ್ತು ಆಚರಣೆಗಳನ್ನು ಮಾತ್ರ ಅಧ್ಯಯನದ ವ್ಯಾಪ್ತಿಗೆ ಒಳಪಡಿಸಲಾಗಿದೆ. ಪ್ರಸ್ತುತ ತುಳುನಾಡು ದ.ಕ. ಉಡುಪಿ ಮತ್ತು ಕಾಸರಗೋಡು ಜಿಲ್ಲೆಗಳ ಭೌಗೋಳಿಕ ವ್ಯಾಪ್ತಿಯನ್ನು ಹೊಂದಿದೆಯಾದರೂ, ಅಧ್ಯಯನದ ಅನುಕೂಲಕ್ಕಾಗಿ ಮತ್ತು ಸಂಶೋಧನೆಯ ಕಾಲಮಿತಿಯನ್ನು ಗಮನದಲ್ಲಿಟ್ಟುಕೊಂಡು ಇಲ್ಲಿ ದ.ಕ. ಜಿಲ್ಲೆಯ ಬೆಳ್ತಂಗಡಿ ತಾಲೂಕನ್ನು ಹೆಚ್ಚು ಪ್ರತಿನಿಧೀಕರಿಸಲಾಗಿದೆ. ಜೊತೆಗೆ ದಕ್ಷಿಣ ಕನ್ನಡ ಜಿಲ್ಲೆಯ ಬೆಳ್ತಂಗಡಿ ತಾಲೂಕಿನ ಕೊಯ್ಯೂರು ಗ್ರಾಮದ ೨೩೭ ಮನೆಗಳನ್ನು ಅಧ್ಯಯನದ ಹಿನ್ನೆಲೆಯಲ್ಲಿ ವಿಶೇಷವಾಗಿ ಸಮೀಕ್ಷೆ ಮಾಡಲಾಗಿದೆ.

ತುಳುನಾಡು ಹಲವಾರು ಜಾತಿ ಜನಾಂಗಗಳ ನೆಲೆವೀಡು ಎಂಬುದನ್ನು ಈಗಾಗಲೇ ಗಮನಿಸಲಾಗಿದೆ. ಹಾಗೆಂದು ಆವರ್ತನದ ಆಚರಣೆಗಳನ್ನು ಜಾತಿ ಆಧಾರದ ಮೇಲೆ ಅಧ್ಯಯನ ಮಾಡುವುದು ಸೂಕ್ತವಲ್ಲ. ಯಾಕೆಂದರೆ ಈಗಾಗಲೇ ತಿಳಿಸಿದಂತೆ ತುಳುನಾಡಿನ ವಾರ್ಷಿಕ ಆವರ್ತನದ ಆಚರಣೆಗಳು ಕಾಲ ಮತ್ತು ದೇಶ ಬದ್ಧ ಮಾನದಂಡಗಳಡಿಯಲ್ಲಿ

ಗುರುತಿಸಲ್ಪಡುವುದೇ ಹೆಚ್ಚು. ತುಳುನಾಡಿನ ಆಚರಣೆಗಳಲ್ಲಿ ಜಾತಿಯಾಧಾರಿತ ವಿಶಿಷ್ಟತೆ ಇಲ್ಲವೆ ವ್ಯತ್ಯಾಸಗಳು ಅಧ್ಯಯನ ಮಾಡುವಷ್ಟು ಗಂಭೀರವಾದುದಲ್ಲ. ಆದ್ದರಿಂದ 'ತುಳುನಾಡಿನ ಆಚರಣೆಗಳು' ಎಂಬ ನೇರ ಪರಿಕಲ್ಪನೆಯ ನೆಲೆಯಲ್ಲಿ ವಿಶ್ಲೇಷಿಸಲು ಪ್ರಯತ್ನಿಸಲಾಗಿದೆ; ಅಧ್ಯಯನವನ್ನು ಮಾಡಲಾಗಿದೆ. ಯಾವುದೇ ಆಚರಣೆಗಳು ಸಂಸ್ಕೃತಿಯ ಒಂದು ಘಟಕ ಎಂಬುದನ್ನು ಗಮನಿಸಬೇಕು. ಹಾಗಾಗಿ ಸಂಸ್ಕೃತಿ ಎನ್ನುವುದು ವ್ಯತ್ಯಾಸಗೊಳ್ಳುವುದು ಕಾಲ ಮತ್ತು ದೇಶದ ನೆಲೆಯಲ್ಲಿ ಎಂಬುದನ್ನು ಅರಿತುಕೊಳ್ಳುವುದು ಹೆಚ್ಚು ಸಮಂಜಸವಾದೀತು. ಆದುದರಿಂದ ಅಧ್ಯಯನದ ಸಂದರ್ಭದಲ್ಲಿ ತುಳುನಾಡಿನ ಆಚರಣೆಗಳನ್ನು 'ತುಳುನಾಡು' ಎಂಬ ದೇಶವಾಚಿಯ ಮತ್ತು ಇಲ್ಲಿನ ಋತುಪರಿವರ್ತನೆಯ ನೆಲೆಯಲ್ಲಿ ಹೆಚ್ಚು ಗಮನಹರಿಸಲಾಗಿದೆ.

## ೧.೪: ಅಧ್ಯಯನದ ಸ್ವರೂಪ

ಅಧ್ಯಯನ ವಿಷಯವು ತುಳುನಾಡಿನ ಪ್ರಾದೇಶಿಕ ಸಂಸ್ಕೃತಿಯೊಂದರ ಅನನ್ಯತೆಯನ್ನು ಗುರುತಿಸುವುದಾದ್ದರಿಂದ ಇಲ್ಲಿ ಕ್ಷೇತ್ರಕಾರ್ಯವನ್ನು ವಿಶೇಷವಾಗಿ ಆಧರಿಸಲಾಗಿದೆ. ತಾಜಾ ಮಾಹಿತಿಯನ್ನು ಕಲೆ ಹಾಕುವ ನಿಟ್ಟಿನಲ್ಲಿ ಹಳ್ಳಿಯ ಕೃಷಿ ಕುಟುಂಬದ ಸದಸ್ಯರನ್ನು ಭೇಟಿ ಮಾಡಿ ಅಧ್ಯಯನ ಮಾಡಲಾಗಿದೆ. ಜನಪದರು ನೀಡಿದ ಮೌಖಿಕ ಮಾಹಿತಿಗಳನ್ನು ಒಂಬತ್ತೂ ಆಚರಣೆಗಳ ವಿಶ್ಲೇಷಣೆಯ ಸಂದರ್ಭದಲ್ಲಿ ಬಳಸಿಕೊಳ್ಳಲಾಗಿದೆ. ಪೂರಕವಾಗಿ ಮತ್ತು ಆಚರಣೆಗಳ ವಿಶ್ಲೇಷಣೆಯ ಭಾಗದಲ್ಲಿ ವಿಶೇಷವಾಗಿ ಬೇರೆ ಬೇರೆ ಗ್ರಂಥಗಳಲ್ಲಿ ದೊರೆತ ಮಾಹಿತಿಗಳನ್ನು ಆಧಾರದ ನೆಲೆಯಲ್ಲಿ ಉಪಯೋಗಿಸಿಕೊಳ್ಳಲಾಗಿದೆ. ಬೆಳ್ತಂಗಡಿ ತಾಲೂಕಿನ ವಿವಿಧ ಗ್ರಾಮಗಳ ವಿವಿಧ ಕುಟುಂಬಗಳನ್ನು ಭೇಟಿ ಮಾಡಲಾಗಿದ್ದು, ಭೇಟಿಯಾದ ಕುಟುಂಬಗಳ ವ್ಯಕ್ತಿಗಳ ಪಟ್ಟಿಯನ್ನು ಅನುಬಂಧದಲ್ಲಿ ನೀಡಲಾಗಿದೆ. ಆಚರಣೆಗಳ ಮತ್ತು ಕೆಲವು ಜಾನಪದ ವಸ್ತುಗಳ ಛಾಯಾಚಿತ್ರಗಳನ್ನು ಅಧ್ಯಯನಕ್ಕೆ ಪೂರಕವಾಗಿ ಬಳಸಿಕೊಳ್ಳಲಾಗಿದೆ. ವಕ್ತೃಗಳನ್ನು ಭೇಟಿ ಮಾಡಿದ ಸಂದರ್ಭದಲ್ಲಿ ಮೌಖಿಕ ಪ್ರಶ್ನೆಗಳ ಮೂಲಕ ಮಾಹಿತಿ ಕಲೆ ಹಾಕಿದ್ದಲ್ಲದೆ ಪ್ರಶ್ನಾವಳಿಗಳನ್ನೂ ಬಳಸಿಕೊಳ್ಳಲಾಗಿದೆ. ಪ್ರಶ್ನಾವಳಿಯ ನಮೂನೆಯನ್ನು ಅನುಬಂಧದಲ್ಲಿ ನೀಡಿದೆ. ಈ ಅಧ್ಯಯನದ ಹಿನ್ನೆಲೆಯಲ್ಲಿ ತುಳುನಾಡಿನ ಹಲವು ಮಂದಿ ವಿದ್ವಾಂಸರನ್ನು, ಸಂಶೋಧಕರನ್ನು ಸಂಪರ್ಕಿಸಲಾಗಿದ್ದು, ಅವರಲ್ಲಿ ಡಾ.ಅಮೃತ ಸೋಮೇಶ್ವರ, ಶ್ರೀ ಪೊಳಲಿ ಲಕ್ಷ್ಮೀನಾರಾಯಣ ಆಳ್ವ, ಡಾ.ತಾಳ್ತಜೆ ವಸಂತ ಕುಮಾರ್, ಡಾ.ಎ.ಸುಬ್ಬಣ್ಣ ರೈ, ಡಾ.ಕೆ.ಅಭಯ ಕುಮಾರ್, ಡಾ.ಬಿ.ಪ್ರಭಾಕರ ಶಿಶಿಲ, ಡಾ.ಪೂವಪ್ಪ ಕಣಿಯೂರು, ಡಾ.ನರೇಂದ್ರ

ರೈ ದೇರ್ಲ, ಡಾ.ಅಶೋಕ ಆಳ್ವ, ಡಾ.ಸುಂದರ ಕೇನಾಜೆ, ಶ್ರೀ ಮುದ್ದು ಮೂಡುಬೆಳ್ಳೆ,, ಶ್ರೀಮತಿ ಸಾಯಿಗೀತ-ಮೊದಲಾದವರು ತಮ್ಮ ಅಮೂಲ್ಯ ಸಲಹೆ ಸೂಚನೆ ಮತ್ತು ಅಭಿಪ್ರಾಯಗಳನ್ನು ನೀಡಿದ್ದಾರೆ. ಆವರ್ತನದ ಆಚರಣೆಗಳು ವರ್ಷದ ನಿರ್ದಿಷ್ಟ ತಿಂಗಳುಗಳ ನಿರ್ದಿಷ್ಟ ದಿನಗಳಲ್ಲಿ ಅಂದರೆ ಕಾಲ-ದೇಶ ಸಂದರ್ಭದಲ್ಲಿ ಮಾತ್ರ ಆಚರಿಸಲ್ಪಡುವುದರಿಂದ ಆ ನಿರ್ದಿಷ್ಟ ದಿನಗಳಲ್ಲಿ ಕ್ಷೇತ್ರಕಾರ್ಯ ಮಾಡಲಾಗಿದೆ. ಉದಾಹರಣೆಗೆ 'ಬಿಸುಪರ್ಬ' ಆಚರಣೆ 'ಪಗ್ಗು' ತಿಂಗಳ ಮೊದಲ ದಿನ ಬರುವುದು. ಆ ದಿನ ಗದ್ದೆಯಲ್ಲಿ 'ಅಪ್ಪರೆ ಪಾಡುನ' ಕ್ರಮವನ್ನು ಉಳಿದ ದಿನಗಳಲ್ಲಿ ನೋಡುವುದಾಗಲಿ, ಅದರ ಚಿತ್ರವನ್ನು ತೆಗೆಯುವುದಾಗಲಿ ಸಾಧ್ಯವಿಲ್ಲ. ಅಂತೆಯೇ 'ಆಟಿ ಅಮಾವಾಸ್ಯೆ'ಯ ಆಚರಣೆಯ ವಿಧಿ ವಿಧಾನಗಳು, 'ಪತ್ತನಾಜೆ' ದಿನದ ಭೂತಾರಾಧನೆಯ ಕ್ರಮಗಳು, 'ನಾಗರ ಪಂಚಮಿ'ಯ ಆರಾಧನೆಯ ವಿಶಿಷ್ಟತೆ ಇಲ್ಲವೆ 'ಕಾವೇರಿ ಸಂಕ್ರಾಂತಿ' ದಿನದಂದು ಬೈಹುಲ್ಲಿನ ರಾಶಿಗೆ, ಭತ್ತದ ರಾಶಿಗೆ ಕಲ್ಲು ಮುಳ್ಳು ಇಡುವ ಕ್ರಮಗಳಿರಬಹುದು. ಇವೆಲ್ಲವುಗಳ ನೈಜ ಮಾಹಿತಿಗಾಗಿ ಆಚರಣೆಯ ದಿನಗಳಲ್ಲೆ ಕ್ಷೇತ್ರ ಕಾರ್ಯ ಮಾಡಿ ಮಾಹಿತಿ ಸಂಗ್ರಹಿಸಿ ಆಚರಣೆಗಳ ಹಿಂದಿರುವ ನಂಬಿಕೆ ನಡವಳಿಕೆಗಳನ್ನು ತಿಳಿದುಕೊಳ್ಳುವ ಪ್ರಯತ್ನ ಮಾಡಲಾಗಿದೆ. ಇಡೀ ಅಧ್ಯಯನವು ಕ್ಷೇತ್ರ ಕಾರ್ಯದ ಮೂಲಕ ಪ್ರದರ್ಶನ ಮತ್ತು ಮೌಖಿಕ ಮಾಹಿತಿಯನ್ನು ಆಧರಿಸಿದ್ದಾಗಿದೆ.

ಒಟ್ಟಿನಲ್ಲಿ ಈ ಸಾಂಸ್ಕೃತಿಕ ಅಧ್ಯಯನವನ್ನು ಕೆಳಗಿನಂತೆ ಒಟ್ಟು ಹದಿನಾಲ್ಕು ಅಧ್ಯಾಯಗಳನ್ನಾಗಿ ವಿಭಾಗಿಸಿಕೊಳ್ಳಲಾಗಿದೆ.

**ಅಧ್ಯಾಯ-೧: ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ಸ್ವರೂಪ**

**ಅಧ್ಯಾಯ-೨: ಆಚರಣೆಗಳ ಹುಟ್ಟು, ಸ್ವರೂಪ ಮತ್ತು ಬೆಳವಣಿಗೆ**

**ಅಧ್ಯಾಯ-೩: ತುಳುನಾಡ ಸಂಸ್ಕೃತಿ ಮತ್ತು ವಾರ್ಷಿಕ ಆವರ್ತನದ ಸ್ವರೂಪ**

**ಅಧ್ಯಾಯ-೪: ತುಳುನಾಡಿನ ವಾರ್ಷಿಕ ಆವರ್ತನದ ಆಚರಣೆ 'ಬಿಸುಪರ್ಬ'(ಸೌರಮಾನ ಯುಗಾದಿ)**

**ಅಧ್ಯಾಯ-೫: ತುಳುನಾಡಿನ ವಾರ್ಷಿಕ ಆವರ್ತನದ ಆಚರಣೆ 'ಪತ್ತನಾಜೆ'**

**ಅಧ್ಯಾಯ-೬: ತುಳುನಾಡಿನ ವಾರ್ಷಿಕ ಆವರ್ತನದ ಆಚರಣೆ 'ಆಟಿ ಅಮಾವಾಸ್ಯೆ'**

**ಅಧ್ಯಾಯ-೭: ತುಳುನಾಡಿನ ವಾರ್ಷಿಕ ಆವರ್ತನದ ಆಚರಣೆ 'ನಾಗರ ಪಂಚಮಿ'**

**ಅಧ್ಯಾಯ-೮: ತುಳುನಾಡಿನ ವಾರ್ಷಿಕ ಆವರ್ತನದ ಆಚರಣೆ 'ಕುರಲ್ ಪರ್ಬ'(ಕದಿರು ಹಬ್ಬ)**

**ಅಧ್ಯಾಯ-೯: ತುಳುನಾಡಿನ ವಾರ್ಷಿಕ ಆವರ್ತನದ ಆಚರಣೆ 'ಪುದ್ವಾರ್'(ಹೊಸ ಅಕ್ಕಿ ಊಟ)**

**ಅಧ್ಯಾಯ-೧೦: ತುಳುನಾಡಿನ ವಾರ್ಷಿಕ ಆವರ್ತನದ ಆಚರಣೆ 'ಕಾವೊರಿ ಸಂಕ್ರಾಂತಿ' (ಕಾವೇರಿ ಸಂಕ್ರಮಣ)**

**ಅಧ್ಯಾಯ-೧೧: ತುಳುನಾಡಿನ ವಾರ್ಷಿಕ ಆವರ್ತನದ ಆಚರಣೆ 'ಪರ್ಬ'(ದೀಪಾವಳಿ)**

**ಅಧ್ಯಾಯ-೧೨: ತುಳುನಾಡಿನ ವಾರ್ಷಿಕ ಆವರ್ತನದ ಆಚರಣೆ 'ಕೆಡ್ಡಸ'**

**ಅಧ್ಯಾಯ-೧೩: ತುಳುನಾಡಿನ ವಾರ್ಷಿಕ ಆವರ್ತನದ ಆಚರಣೆಗಳ ಇಂದಿನ ಸ್ಥಿತಿಗತಿ**

**ಅಧ್ಯಾಯ-೧೪: ಉಪಸಂಹಾರ :**

## ೧.೫: ಈವರೆಗಿನ ಅಧ್ಯಯನ

ತುಳುನಾಡಿನ ಒಟ್ಟೂ ರಾಜಕೀಯ, ಧಾರ್ಮಿಕ, ಸಾಮಾಜಿಕ ಮತ್ತು ಇತರ ಸಾಂಸ್ಕೃತಿಕ ಕಲಾ ಪ್ರಕಾರಗಳ ಅಧ್ಯಯನಗಳು ಈಗಾಗಲೇ ಸಾಕಷ್ಟು ನಡೆದಿವೆ. ಆರಂಭಕಾಲದ ವಿದೇಶೀ ವಿದ್ವಾಂಸರುಗಳಾದ ಬ್ರಿಗೆಲ್,[೪೩] ಎ.ಮ್ಯಾನರ್,[೪೪] ಎ.ಸಿ.ಬರ್ನೆಲ್,[೪೫] ವಾಲ್‌ಹೌಸ್[೪೬] ಹಾಗೂ ದೇಶೀಯ ವಿದ್ವಾಂಸರುಗಳಾದ ಎಂ.ಗೋವಿಂದ ಪೈ,[೪೭] ಗಣಪತಿರಾವ್ ಐಗಳ್,[೪೮] ಡಾ.ಕೆವಿ.ರಮೇಶ್,[೪೯] ಡಾ.ಪಿ.ಗುರುರಾಜ್ ಭಟ್,[೫೦] ಡಾ.ಸೂರ್ಯನಾಥ ಕಾಮತ್[೫೧] ಮುಂತಾದವರು ಈ ಬಗ್ಗೆ ಸಾಕಷ್ಟು ಅಮೂಲ್ಯವಾದ ಮಾಹಿತಿಗಳನ್ನು ತಮ್ಮ ಕೃತಿಗಳಲ್ಲಿನ ನೀಡಿದ್ದಾರೆ. ಒಟ್ಟೂ ತುಳುನಾಡಿನ ಸಾಂಸ್ಕೃತಿಕ ಅಧ್ಯಯನದ ಸಂದರ್ಭದಲ್ಲಿ ಇವರುಗಳು ಶಿಷ್ಟಸಂಸ್ಕೃತಿಯ ಜೊತೆಗೆ ಜಾನಪದಸಂಸ್ಕೃತಿಯ ಕಡೆಗೂ ವಿಶೇಷ ಒಲವನ್ನು ತೋರಿಸಿರುವುದು ಮಹತ್ವದ ವಿಚಾರವಾಗಿದೆ. ಈ ಹಿನ್ನೆಲೆಯಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಇತಿಹಾಸ ಸಂಸ್ಕೃತಿಯನ್ನು ಅಧ್ಯಯನ ಮಾಡಿದ ವಿದ್ವಾಂಸರ ಕೊಡುಗೆಗಳನ್ನು ನಾವು ಮರೆಯುವಂತಿಲ್ಲ.

ತುಳುನಾಡಿಗೆ ಆಗಮಿಸಿದ್ದ ಬಾಸೆಲ್ ಮಿಷನ್ ಸಂಸ್ಥೆಯವರಿಂದ ೧೮೩೪ರಿಂದಲೇ ತುಳುನಾಡಿನಲ್ಲಿ ಜಾನಪದ ಅಧ್ಯಯನ ಮತ್ತು ಸಂಗ್ರಹಕಾರ್ಯ ಆರಂಭವಾಯಿತು. ೧೮೭೨ರಲ್ಲಿ ರೆ.ಜೆ.ಬ್ರಿಗೆಲ್ 'ಎ ಗ್ರಾಮರ್ ಆಫ್ ದ ತುಳು ಲಾಂಗ್ವೇಜ್' ಎಂಬ ಮೊತ್ತಮೊದಲ ತುಳು ವ್ಯಾಕರಣ ಗ್ರಂಥವನ್ನು ಬರೆದರು.[೫೨] ೧೮೮೬ರಲ್ಲಿ ಬಾಸೆಲ್ ಮಿಷನ್ ಪ್ರೆಸ್‌ನವರು ರೆ.ಎ.ಮ್ಯಾನರ್ ಸಿದ್ಧಪಡಿಸಿದ 'ತುಳು-ಇಂಗ್ಲಿಷ್ ಡಿಕ್ಷನರಿ'ಯನ್ನು ಪ್ರಕಟಿಸಿದರು.[೫೩] ಇದು ತುಳುಭಾಷೆಗೆ ಸಂಬಂಧಿಸಿದ ಮೊದಲ ಅರ್ಥಕೋಶವಾಗಿದೆ. ಇದರಲ್ಲಿ ತುಳುಜಾನಪದ ಶಬ್ದಗಳೂ, ತುಳುಗಾದೆಗಳೂ ಸೇರಿದ್ದು, ತುಳುಜಾನಪದದ ಕಡೆಗೆ ಗಮನಹರಿಸಿರುವುದನ್ನು ವಿಶೇಷವಾಗಿ ಗಮನಿಸಬಹುದು. ೧೮೭೭ರಲ್ಲಿ ವಾಲ್‌ಹೌಸ್ ತುಳುಗಾದೆಗಳ ಸಂಗ್ರಹವನ್ನು

ಪ್ರಕಟಿಸುವುದರ ಮೂಲಕ ತುಳುವಿನಲ್ಲಿ ವ್ಯವಸ್ಥಿತವಾದ ಜಾನಪದ ಸಂಗ್ರಹಕಾರ್ಯ ಪ್ರತ್ಯೇಕವಾಗಿ ಆರಂಭವಾಯಿತೆನ್ನಬಹುದು.[೫೪] ೧೮೮೬ರಲ್ಲಿ ರೆ.ಎ.ಮ್ಯಾನರ್ 'ಪಾಡ್ದನೊಳು' ಎಂಬ ೨೧ ಪಾಡ್ದನಗಳ ಸಂಗ್ರಹವನ್ನೂ,[೫೫] ೧೮೯೪ರಲ್ಲಿ ಡಾ.ಎ.ಸಿ.ಬರ್ನೆಲ್ 'ಡೆವಿಲ್ ವರ್ಷಿಪ್ ಆಫ್ ದ ತುಳುವಾಸ್' ಎಂಬ ೨೬ ಭೂತಪಾಡ್ದನಗಳ ಸಂಕಲನವನ್ನೂ ಪ್ರಕಟಿಸಿದ್ದಾರೆ.[೫೬] ಇವು ತುಳುಜಾನಪದವನ್ನು ತುಳುವ ಸಂಸ್ಕೃತಿಯನ್ನು ಅಧ್ಯಯನ ಮಾಡುವವರಿಗೆ ಅಮೂಲ್ಯ ಆಕರಗಳಾಗಿವೆ. ಇವಲ್ಲದೆ, ತುಳುವ ಸಂಸ್ಕೃತಿಯನ್ನು ತಮ್ಮ ಪ್ರಧಾನ ಅಧ್ಯಯನ ವಿಷಯವನ್ನಾಗಿ ಆರಿಸಿಕೊಂಡು ಅಧ್ಯಯನ ಮಾಡಿದ ಪಾಶ್ಚಾತ್ಯ ವಿದ್ವಾಂಸರು ಮಾರ್ತಾಆಷ್ಟನ್[೫೭] ಮತ್ತು ಪೀಟರ್ ಜೆ.ಕ್ಲಾಸ್[೫೮] ಅವರು. ಮಾರ್ತಾ ಅವರು ಯಕ್ಷಗಾನಕ್ಷೇತ್ರದ ಕುರಿತು ವಿಶೇಷ ಗಮನ ಹರಿಸಿದರೆ, ಪೀಟರ್ ಜೆ.ಕ್ಲಾಸ್ ಅವರು ತುಳು ಸಂಸ್ಕೃತಿಯ ಅಧ್ಯಯನ ಮತ್ತು ವಿಶ್ಲೇಷಣೆಗಳಿಗೆ ತಮ್ಮನ್ನು ವಿಶೇಷವಾಗಿ ಸಮರ್ಪಿಸಿಕೊಂಡು ಕೆಲಸಮಾಡಿದ್ದಲ್ಲದೆ, 'ತುಳುವ ದರ್ಶನ' ಎಂಬ ಅಮೂಲ್ಯ ಗ್ರಂಥವನ್ನೂ ಕೊಡುಗೆ ನೀಡಿದ್ದಾರೆ. ಇದರಲ್ಲಿ ಎಂಟು ಪ್ರಬಂಧಗಳಿದ್ದು, ಇವು ತುಳುಸಂಸ್ಕೃತಿಯ ಅಧ್ಯಯನಕ್ಕೆ ನೆರವಾಗಬಲ್ಲ ಗಟ್ಟಿಯಾದ ಕಾಣಿಕೆಗಳು ಎಂಬುದನ್ನು ಗಮನಿಸಬೇಕು. ಹೀಗೆ ತುಳುಜಾನಪದ ಜಗತ್ತಿನ ಅನ್ವೇಷಣೆಗೆ ಮೊದಲು ಚಾಲನೆ ದೊರೆತಿರುವುದು ವಿದೇಶೀ ವಿದ್ವಾಂಸರಿಂದ ಎಂಬುದು ಗಮನಾರ್ಹ ಸಂಗತಿಯಾಗಿದೆ. ಮುಂದೆ ೧೯೧೫ರಲ್ಲಿ ಎ. ಎನ್. ಶೀನಪ್ಪ ಹೆಗ್ಗಡೆಯವರು 'ದಕ್ಷಿಣ ಕನ್ನಡ ಜಿಲ್ಲೆಯ ಚರಿತ್ರೆ ಮತ್ತು ಭೂತಾಳಪಾಂಡ್ಯರಾಯನ ಕಟ್ಟು'[೫೯] ಎಂಬ ಗ್ರಂಥ ರಚಿಸಿರುವುದು ಸ್ಥಳೀಯರು ತುಳುನಾಡಿನ ಇತಿಹಾಸ ಮತ್ತು ಸಂಸ್ಕೃತಿಯ ಅಧ್ಯಯನದಲ್ಲಿ ಆಸಕ್ತಿ ವಹಿಸಿರುವುದನ್ನು ತಿಳಿಸುತ್ತದೆ. ಎನ್.ಎಸ್.ಕಿಲ್ಲೆ ಹಾಗೂ ಶೀನಪ್ಪ ಹೆಗ್ಗಡೆಯವರ 'ಪ್ರಾಚೀನ ತುಳುನಾಡು' (೧೯೫೪)[೬೦] ಕೃತಿಯಲ್ಲಿಯೂ ಪ್ರಾಚೀನ ತುಳುಪದ್ಧತಿ ಆಚರಣೆಗಳ ಸಾಕಷ್ಟು ವಿವರಗಳು ದೊರೆಯುತ್ತವೆ. ಶೀನಪ್ಪ ಹೆಗ್ಗಡೆಯವರ 'ತುಳುವಾಲ ಬಲಿಯೇಂದ್ರೆ'(೧೯೭೯)[೬೧] ಎಂಬ ಪಾಡ್ದನ ಸಂಗ್ರಹ ಕೃತಿ ಬಲೀಂದ್ರ ಆಚರಣೆ ಕುರಿತಾದ ಅಮೂಲ್ಯ ಆಕರ ಗ್ರಂಥವಾಗಿದೆ. ತುಳುನಾಡಿನ ಅಳಿಯಸಂತಾನ ಕುಟುಂಬಪದ್ಧತಿಯ ಬಗ್ಗೆ ವಿವರಣೆಯನ್ನು ನೀಡುವ ಸತ್ಯಮಿತ್ರ ಬಂಗೇರ ಅವರ 'ಅಳಿಯಸಂತಾನ ಕಟ್ಟ್‌ದ ಗುಟ್ಟು' (೧೯೩೦)[೬೨] ಕೃತಿ ತುಳುಸಂಸ್ಕೃತಿಯನ್ನು ಅಧ್ಯಯನ ಮಾಡುವ ಆಸಕ್ತರಿಗೆ ಒಂದು ಅಮೂಲ್ಯ ಕೈಪಿಡಿಯಾಗಿರುವುದನ್ನು ಗಮನಿಸಬಹುದು. ಡಾ.ಬಿ.ಎ. ಸಾಲೆತ್ತೂರು ಅವರ 'ಹಿಸ್ಟರಿ ಆಫ್ ತುಳುವ'[೬೩] ಗ್ರಂಥ ಇತಿಹಾಸ ಗ್ರಂಥವಾದರೂ ಇದರ ಕೊನೆಯ ಅಧ್ಯಾಯ ಪ್ರಾಚೀನ ತುಳು ಜನಜೀವನದ

ಕುರಿತಾಗಿರುವುದನ್ನು ವಿಶೇಷವಾಗಿ ಗಮನಿಸಬಹುದಾಗಿದೆ. ಅ ಂತೆಯೇ ಡಾ.ಪಿ.ಗುರುರಾಜ ಭಟ್ ಅವರ 'ತುಳುನಾಡು'(೧೯೬೦)[೬೪] ಎಂಬ ಇತಿಹಾಸ ಗ್ರಂಥದಲ್ಲಿಯೂ ತುಳುನಾಡಿನ ಸಾಮಾಜಿಕ ಅಧ್ಯಯನಕ್ಕೆ ವಿಶೇಷ ಮಹತ್ವ ಕೊಟ್ಟಿದ್ದಾರೆ. ಈ ನೆಲೆಯಲ್ಲಿ ಇವರ 'ಸ್ಟಡೀಸ್ ಇನ್ ತುಳುವ ಹಿಸ್ಟರಿ ಅಂಡ್ ಕಲ್ಚರ್'[೬೫] ಎಂಬ ಇನ್ನೊಂದು ಗ್ರಂಥವೂ ಉಲ್ಲೇಖನೀಯ. ಮುಂದೆ ಪಂಜೆ ಮಂಗೇಶರಾಯ, ಬೆನಕಲ್ ರಾಮರಾಯ, ಜಿ.ಎಸ್.ಕಕ್ಕಿಲ್ಲಾಯ, ಡಾ.ಕೆ. ಶಿವರಾಮ ಕಾರಂತ, ಎಂ. ನಾರಾಯಣ, ಅಮೃತ ಸೋಮೇಶ್ವರ, ಡಾ.ಬಿ.ಎ.ವಿವೇಕ ರೈ, ಡಾ.ಕೆ.ಚಿನ್ನಪ್ಪ ಗೌಡ ಮುಂತಾದವರು ತುಳುಜಾನಪದ ಕ್ಷೇತ್ರದಲ್ಲಿ ಸಾಕಷ್ಟು ಅಧ್ಯಯನ ಮಾಡಿ ಹೊಸ ಹೊಸ ಸಂಗತಿಗಳ ಮೇಲೆ ಬೆಳಕು ಚೆಲ್ಲಿದ್ದಾರೆ.[೬೬]

ಡಾ.ಬಿ.ಎ.ವಿವೇಕ ರೈ ಅವರು ಸಮಗ್ರ ತುಳುಜನಪದ ಸಾಹಿತ್ಯದ ವಿವಿಧ ಪ್ರಕಾರಗಳ ಕುರಿತು ವ್ಯಾಪಕವಾದ ಅಧ್ಯಯನ ಮಾಡಿದ್ದಾರೆ.[೬೭] ಸಂಶೋಧಕರಿಗೆ ಇದೊಂದು ಪ್ರಮುಖ ಆಕರ ಗ್ರಂಥವಾಗಿದೆ. ಅನಂತರದಲ್ಲೂ ಅನೇಕರು ತುಳು ಜಾನಪದ ಕುರಿತು ಅಧ್ಯಯನ ಮಾಡಿರುವುದನ್ನು ಮರೆಯುವಂತಿಲ್ಲ. ಡಾ.ಕೆ.ಚಿನ್ನಪ್ಪ ಗೌಡರು 'ಭೂತಾರಾಧನೆ'[೬೮] ಕುರಿತು ಮಾಡಿರುವ ಅಧ್ಯಯನ ತುಳುನಾಡಿನ ನಂಬಿಕೆಯ ಜೀವಾಳವಾಗಿರುವ ಭೂತಾರಾಧನೆಯ ಜಾನಪದಕ್ಕೆ ಸಂಬಂಧಿಸಿದಂತೆ ಬಹುದೊಡ್ಡ ಕೆಲಸ.

ತುಳುನಾಡಿನ ಜಾನಪದ ಅಧ್ಯಯನದಲ್ಲಿ ಉಡುಪಿಯ ಗೋವಿಂದ ಪೈ ಸ್ಮಾರಕ ಪ್ರತಿಷ್ಠಾನದ ಪ್ರಾದೇಶಿಕ ರಂಗಕಲೆಗಳ ಕೇಂದ್ರದ ಪಾತ್ರ ಗುರುತರವಾದುದು. ಕೇಂದ್ರದ ನಿರ್ದೇಶಕರಾಗಿದ್ದ ಪ್ರೊ.ಕು.ಶಿ.ಹರಿದಾಸ ಭಟ್ಟರು ಅಮೇರಿಕಾ, ಫಿನ್‌ಲ್ಯಾಂಡ್ ಮುಂತಾದ ದೇಶಗಳೊಂದಿಗೆ ಅಧ್ಯಯನ ಒಪ್ಪಂದ ಮಾಡಿಕೊಂಡು ವಿದೇಶೀ ವಿದ್ವಾಂಸರನ್ನು ತುಳುನಾಡಿನ ಜಾನಪದ ಅಧ್ಯಯನಕ್ಕೆ ಪ್ರಚೋದಿಸಿದರು. ಈ ಸಂದರ್ಭದಲ್ಲಿ ಪ್ರೊ.ಲಾರಿಹಾಂಕೋ ದಂಪತಿಗಳು ಅಧ್ಯಯನ ಮಾಡಿ ಪ್ರಕಟಿಸಿದ ಸಿರಿಪಾಡ್ದನ ದಾಖಲಾತಿ ಸ್ಮರಣೀಯವಾದ ಕೊಡುಗೆಯಾಗಿದೆ. ಡಾ.ಯು.ಪಿ.ಉಪಾಧ್ಯಾಯ ಮತ್ತು ಡಾ.ಸುಶೀಲಾ ಉಪಾಧ್ಯಾಯರು ಕ್ಷೇತ್ರಕಾರ್ಯದ ಮೂಲಕ ಸಮಗ್ರ ತುಳು ಜನಪದವನ್ನೇ ಜಾಲಾಡಿ ರಚಿಸಿದ 'ತುಳು ನಿಘಂಟು'[೬೯] ತುಳುಜಾನಪದ ಅಧ್ಯಯನಾಸಕ್ತರಿಗೆ ಮತ್ತೊಂದು ಕೈಪಿಡಿಯಾಗಿದೆ. ಡಾ.ಕೃಷ್ಣಯ್ಯನವರು ಜನಪದ ಕಲೆಗಳ ಆಚರಣೆಗಳ ಆಡಿಯೋ ವೀಡಿಯೋ ದಾಖಲಾತಿ ಮಾಡಿ ಸಂಶೋಧಕರಿಗೆ ಆಕರ ಸಾಮಗ್ರಿಗಳನ್ನು ಸಂಗ್ರಹಿಸಿದ್ದಾರೆ. ಜೊತೆಗೆ ಪ್ರೊ.ಎ.ವಿ.ನಾವಡ ಮತ್ತು ಡಾ.ಗಾಯತ್ರಿ ನಾವಡ ಅವರ ಹೆಸರುಗಳೂ ಇಲ್ಲಿ ಉಲ್ಲೇಖನೀಯ. ಈ ಎಲ್ಲ

ಅಧ್ಯಯನಗಳ ಮುಂದುವರಿಕೆಯಾಗಿ ತುಳುನಾಡಿನ ಬಹಳ ಜನ ಅಧ್ಯಯನಾಸಕ್ತರು ತಮ್ಮ ಪಿಎಚ್.ಡಿ. ಅಧ್ಯಯನಕ್ಕಾಗಿ ಭಿನ್ನಭಿನ್ನ ವಿಷಯಗಳನ್ನು ಆರಿಸಿಕೊಂಡಿರುವುದನ್ನು ಗಮನಿಸಬಹುದಾಗಿದೆ.

ಆದರೆ ತುಳುನಾಡಿನ ವಾರ್ಷಿಕಾವರ್ತನದ ಆಚರಣೆಗಳನ್ನು ಕುರಿತು ಸಮಗ್ರವಾಗಿ ಸಂಶೋಧನೆಯ ಮಾನದಂಡದಲ್ಲಿ ಅಧ್ಯಯನಗಳು ಅಷ್ಟಾಗಿ ನಡೆದಂತೆ ತೋರುವುದಿಲ್ಲ. ಅಧ್ಯಯನಕ್ಕೆ ಒಳಪಡಿಸಿರುವ ಆಚರಣೆಗಳು ವಾರ್ಷಿಕ ಆವರ್ತನದಲ್ಲಿ ಆಚರಿಸಲ್ಪಡುವ ಕಾರಣಕ್ಕಾಗಿ ಪ್ರತಿ ವರ್ಷ ಪತ್ರಿಕಾ ಮಾಧ್ಯಮಗಳಲ್ಲಿ ಬಿಡಿ ಬಿಡಿ ಲೇಖನಗಳು ಪ್ರಕಟವಾಗಿವೆ ಮತ್ತು ಪ್ರಕಟವಾಗುತ್ತಿವೆ. ಸಂಪಾದಿತ ಜಾನಪದ ಗ್ರಂಥಗಳಲ್ಲಿಯೂ ಬಿಡಿ ಬರಹಗಳು ಬಂದಿವೆ. ಉದಾಹರಣೆಗೆ–ಆಟಿ ಅಮಾವಾಸ್ಯೆ, ಕೆಡ್ಡಸ, ಪರ್ಬ, ನಾಗರಪಂಚಮಿ, ಪುದ್ವಾರ್–ಇವೇ ಮೊದಲಾದ ಆಚರಣೆಗಳ ಬಗ್ಗೆ ಮಾಹಿತಿ ರೂಪದಲ್ಲಿ ಸಾಂದರ್ಭಿಕ ಲೇಖನಗಳು ಬರುತ್ತಿರುತ್ತವೆ. ಇವೆಲ್ಲವನ್ನು ಅಧ್ಯಯನಕ್ಕೆ ಪೂರಕವಾಗಿ ಬಳಸಿಕೊಳ್ಳಲಾಗಿದೆ.

ತುಳುನಾಡಿನ ಆವರ್ತನದ ಆಚರಣೆಗಳನ್ನು ಕೆಲವೆಡೆ ಮಾಹಿತಿ ರೂಪದಲ್ಲಿ ಇನ್ನು ಕೆಲವೆಡೆ ಸಂಶೋಧನೆಯ ನೆಲೆಯಲ್ಲಿ ಆನುಷಂಗಿಕವಾಗಿ ಬೇರೆ ಬೇರೆ ಉದ್ದೇಶಗಳಿಗಾಗಿ ಅಧ್ಯಯನ ಮಾಡಿರುವ ಕೆಲವು ಗ್ರಂಥಗಳನ್ನು ಹೆಸರಿಸಬಹುದು.

ಡಾ.ಬಿ.ಎ.ವಿವೇಕ ರೈ ಮತ್ತು ಡಿ.ಯದುಪತಿ ಗೌಡ ಅವರ 'ಮಲೆಕುಡಿಯರು' (೧೯೯೬)[೨೦] ಎಂಬ ಕೃತಿಯು ಜನಾಂಗೀಯ ಅಧ್ಯಯನ ಕೃತಿಯಾಗಿದ್ದು, ಇದರಲ್ಲಿ ಮಲೆಕುಡಿಯರು ವಾರ್ಷಿಕ ಆವರ್ತನದಲ್ಲಿ ಆಚರಿಸುವ ಆಚರಣೆಗಳ ಮಾಹಿತಿಯಿದೆ. ಡಾ.ಕೆ.ಚಿನ್ನಪ್ಪ ಗೌಡ ಅವರು ಸಂಪಾದಿಸಿರುವ 'ಸೇರಿಗೆ'(೨೦೦೦)[೨೧] ಗ್ರಂಥದಲ್ಲಿ ಆಟಿಅಮಾವಾಸ್ಯೆ, ಕೆಡ್ಡಸ–ಮೊದಲಾದ ತುಳುನಾಡಿನ ಆಚರಣೆಗಳ ಸಂಶೋಧನಾತ್ಮಕ ಮತ್ತು ವಿಶ್ಲೇಷಣಾತ್ಮಕ ವಿವರಗಳಿವೆ. ತುಳುನಾಡಿನ ಹಿರಿಯ ಸಾಹಿತಿ ಡಾ.ಅಮೃತ ಸೋಮೇಶ್ವರ ಅವರ 'ತುಳುವ ಜಾನಪದ: ಕೆಲವು ನೋಟಗಳು' (೨೦೦೭)[೨೨] ಗ್ರಂಥದಲ್ಲಿ ತುಳುನಾಡಿನ ಆಚರಣೆಗಳ ಕುರಿತಾದ ಸಾಕಷ್ಟು ಒಳನೋಟಗಳನ್ನು ಗಮನಿಸಬಹುದಾಗಿದೆ. ಪ್ರೊ.ಎ.ವಿ.ನಾವಡರು ಸಂಪಾದಿಸಿರುವ 'ಕರಾವಳಿ ಜಾನಪದ' (೨೦೦೭)[೨೩] ಕೃತಿಯಲ್ಲಿ ಕರಾವಳಿ ಜಾನಪದದ ಕುರಿತಂತೆ ಉಪಯುಕ್ತ ಚರ್ಚೆಗಳಿವೆ. ಬನ್ನಂಜೆ ಬಾಬು ಅಮೀನ್ ಅವರ 'ತುಳು ಜಾನಪದ ಆಚರಣೆಗಳು' (೧೯೯೪)[೨೪] ಎಂಬುದೊಂದು ವಿಶಿಷ್ಟ ಕೃತಿ. ಇದರಲ್ಲಿ ತುಳುವರ ಕೆಲವು ಜೀವನಾವರ್ತನ ಆಚರಣೆಗಳು ಮತ್ತು ಕೆಲವು ವಾರ್ಷಿಕ ಆವರ್ತನದ ಆಚರಣೆಗಳ ಕುರಿತಾಗಿ

ಮಾಹಿತಿಗಳಿದ್ದು ಒಂದು ಕೈಪಿಡಿಯಂತಿದೆ. ಡಾ.ಪಾಲ್ತಾಡಿ ರಾಮಕೃಷ್ಣ ಆಚಾರ್ ಅವರ 'ಜಾನಪದ ಮಿನದನ' (೧೯೯೭)[೨೫] 'ತುಳು ಸಂಸ್ಕೃತಿದ ಪೊಲಬು' (೨೦೦೮)[೨೬] ಹಾಗೂ 'ಪಾಣರ ಜನಾಂಗ – ಬದುಕು ಮತ್ತು ಸಂಸ್ಕೃತಿ; ತುಳುನಾಡಿನಲ್ಲಿ ಭೂತಾರಾಧನೆ' (೨೦೦೪)[೨೭] ಮೊದಲಾದ ಕೃತಿಗಳು ತುಳುನಾಡಿನ ವಾರ್ಷಿಕ ಆವರ್ತನದ ಆಚರಣೆಗಳ ಬಗೆಗೆ ಸಾಕಷ್ಟು ಮಾಹಿತಿಯನ್ನು ನೀಡುತ್ತವೆ. ಅಂತೆಯೇ ಡಾ.ವಾಮನ ನಂದಾವರ ಅವರ 'ಜನಪದ ಸುತ್ತಮುತ್ತ' (೧೯೯೨)[೨೮] ಮತ್ತು 'ಸಿಂಗದನ' (೧೯೮೭)[೨೯] ಕೃತಿಗಳೂ ಗಮನಸೆಳೆಯುತ್ತವೆ. ಡಾ.ಬಿ.ಶಿವರಾಮ ಶೆಟ್ಟಿಯವರ 'ಸಸ್ಯ ಜಾನಪದ' (೨೦೦೦)[೩೦] ಕೃತಿಯು ತುಳುನಾಡಿನ ಆಚರಣೆಗಳು ಮತ್ತು ಪ್ರಕೃತಿ ಸಂಬಂಧಗಳ ಬಗ್ಗೆ ಸ್ಪಷ್ಟ ಕಲ್ಪನೆಯನ್ನು ನೀಡುತ್ತದೆ. ಡಾ.ಚಂದ್ರಶೇಖರ ದಾಮ್ಲೆ ಅವರು ಸಂಪಾದಿಸಿರುವ 'ಜಾತ್ರೆ ಮತ್ತು ಇತರ ಸಂಶೋಧನಾತ್ಮಕ ಪ್ರಬಂಧಗಳು' (೧೯೯೦)[೩೧] ಮತ್ತೊಂದು ಉಲ್ಲೇಖಾರ್ಹ ಕೃತಿಯಾಗಿದೆ. ಡಾ.ಡಿ.ಆರ್.ಪಾಂಡುರಂಗ ಅವರ 'ದಕ್ಷಿಣ ಕನ್ನಡ ಜಿಲ್ಲೆಯ ಭೈರರು' (೧೯೯೦),[೩೨] ಡಾ.ಅಭಯ ಕೌಕ್ರಾಡಿ ಅವರ 'ಮುಗೇರರು– ಜನಾಂಗ ಜಾನಪದ ಅಧ್ಯಯನ' (೧೯೯೭),[೩೩] ಪಿ.ಕಮಲಾಕ್ಷ ಅವರ 'ದಕ್ಷಿಣ ಕನ್ನಡ ಜಿಲ್ಲೆಯ ಹರಿಜನ ಮತ್ತು ಗಿರಿಜನರ ಸಾಮಾಜಿಕ ಇತಿಹಾಸ' (೧೯೯೪),[೩೪] ಇಂದಿರಾ ಹೆಗ್ಗಡೆಯವರ 'ಬಂಟರು – ಒಂದು ಸಮಾಜೋ ಸಾಂಸ್ಕೃತಿಕ ಅಧ್ಯಯನ' (೨೦೦೪)[೩೫] ಮೊದಲಾದ ಕೆಲವು ಗ್ರಂಥಗಳು ತುಳುನಾಡಿನ ಜನಾಂಗೀಯ ಅಧ್ಯಯನದ ನೆಲೆಯಲ್ಲಿ ಆನುಷಂಗಿಕವಾಗಿ ಆಚರಣೆಗಳ ಕುರಿತಂತೆ ಅಮೂಲ್ಯ ಮಾಹಿತಿಯನ್ನು ನೀಡುತ್ತವೆ. ಡಾ. ಪೂವಪ್ಪ ಕಣಿಯೂರು ಅವರ 'ಪೂಕರೆ ಮತ್ತು ಇತರ ಜಾನಪದೀಯ ಲೇಖನಗಳು' (೨೦೦೪)[೩೬] ಎಂಬ ಗ್ರಂಥವು ತುಳುನಾಡಿನ ಕೆಲವು ಆಚರಣೆಗಳ ಕುರಿತಂತೆ ಸಂಶೋಧನಾತ್ಮಕ ಲೇಖನಗಳಿರುವ ಒಳ್ಳೆಯ ಕೃತಿಯಾಗಿದೆ. ಡಾ.ರಾಜಶ್ರೀಯವರ 'ತುಳು ಜನಪದ ಕಾವ್ಯ – ಇಹಪರಲೋಕದೃಷ್ಟಿ' (೨೦೦೮)[೩೭] ಎಂಬುದು ಅಮೂಲ್ಯ ಮಾಹಿತಿಗಳನ್ನು ನೀಡುವ ಪಿಎಚ್.ಡಿ.ಮಹಾಪ್ರಬಂಧವಾಗಿದೆ. ಈ ಎಲ್ಲಾ ಗ್ರಂಥಗಳಲ್ಲಿ ತುಳುನಾಡಿನ ಕೆಲವು ಆವರ್ತನದ ಆಚರಣೆಗಳು ಸಂದರ್ಭೋಚಿತವಾಗಿಯೋ, ಮಾಹಿತಿ ರೂಪದಲ್ಲೋ ಇಲ್ಲವೆ ಸಂಶೋಧನಾತ್ಮಕವಾಗಿಯೋ ಇರುವುದನ್ನು ಗಮನಿಸಲಾಗಿದ್ದು, ಇವುಗಳನ್ನು ಅಧ್ಯಯನದ ಸಂದರ್ಭದಲ್ಲಿ ಬಳಸಿಕೊಳ್ಳಲಾಗಿದೆ. ಇವುಗಳಲ್ಲದೆ ಇನ್ನೂ ಹಲವು ಜನಾಂಗಿಕ ಅಧ್ಯಯನ ಗ್ರಂಥಗಳಲ್ಲಿ, ಅಭಿನಂದನ ಗ್ರಂಥಗಳಲ್ಲಿ, ಸ್ಮರಣಸಂಚಿಕೆಗಳಲ್ಲಿ

ಸಂದರ್ಭೋಚಿತವಾಗಿ ತುಳುನಾಡಿನ ವಾರ್ಷಿಕ ಆವರ್ತನದ ಆಚರಣೆಗಳ ಕುರಿತಾದ ವಿವರಗಳಿರುವುದನ್ನು ವಿಶೇಷವಾಗಿ ಗಮನಿಸಬಹುದು.

ಈ ಎಲ್ಲ ಹಿನ್ನೆಲೆಯಲ್ಲಿ ಅಲ್ಲಲ್ಲಿ ಚದುರಿಹೋಗಿರುವ ತುಳುನಾಡಿನ ವಾರ್ಷಿಕ ಆವರ್ತನದ ಆಚರಣೆಗಳನ್ನು ಒಂದು ಅಧ್ಯಯನದ ಶಿಸ್ತಿಗೆ ತಂದು ವಿಶೇಷವಾಗಿ ತಾತ್ವಿಕ ವಿಶ್ಲೇಷಣೆಗೆ ಒಳಪಡಿಸುವ ಒಂದು ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ. ತುಳುವರ ವರ್ಷಾರಂಭದ ಬಿಸುವಿನಿಂದ ಕೆಡ್ಡಸದವರೆಗಿನ ದೇಶ-ಕಾಲಬದ್ಧ ಆಚರಣೆಗಳನ್ನು ಕಾಲಾನುಕ್ರಮದಲ್ಲಿ ಅವುಗಳ ಔಚಿತ್ಯ ಮತ್ತು ಮಹತ್ವಗಳನ್ನು ಚರ್ಚಿಸುವುದರೊಂದಿಗೆ ಸಮಗ್ರವಾಗಿ ದಾಖಲಿಸುವ ಕಿರುಪ್ರಯತ್ನವನ್ನು ಈ ಅಧ್ಯಯನದಲ್ಲಿ ಕೈಗೊಳ್ಳಲಾಗಿದೆ.

---

**ಅಡಿ ಟಿಪ್ಪಣಿಗಳು**

೧. **ಕರಾವಳಿ ಜಾನಪದ:** ೨೦೦೭: (ಸಂ.)ಪ್ರೊ.ಎ.ವಿ.ನಾವಡ: ಸ್ವಾಗತ ಸಮಿತಿ, ಅಖಿಲ ಭಾರತ ೭೪ನೆಯ ಕನ್ನಡ ಸಾಹಿತ್ಯ ಸಮ್ಮೇಳನ, ಉಡುಪಿ: ಲೇಖನ ನೋಡಿ-'ಗಿಳಿಸೂವೆಯಿಂದ ಕರಾವಳಿಯ ಜಾನಪದ ಲೋಕವನ್ನು ಕಂಡಾಗ'

೨. **ಅದೇ:** ಪೂರ್ವೋಕ್ತ

೩. **ಪರಶುರಾಮ ಸೃಷ್ಟಿಯ ವೈವಿಧ್ಯ:** ೨೦೧೦: ಡಾ.ಕೆ.ಪ್ರಭಾಕರ್ ಆಚಾರ್: ಕರ್ನಾಟಕ ಜೀವ ವೈವಿಧ್ಯ ಪ್ರಶಸ್ತಿ ನಿಧಿ, ಬೆಂಗಳೂರು: ಪುಟ-೧೪

೪. **ತುಳುನಾಡಿನ ಇತಿಹಾಸ :** ೧೯೬೯: ಡಾ. ಕೆ. ವಿ.ರಮೇಶ : ಗೀತಾ ಬುಕ್ ಹೌಸ್, ಮೈಸೂರು: ಪುಟ-೧೭

೫. **ತುಳುನಾಡು ಪೂರ್ವಸ್ಮೃತಿ, ತೆಂಕನಾಡು :** ೧೯೪೭ : ಗೋವಿಂದ ಪೈ: ಸ್ವಾಗತ ಸಮಿತಿ, ೩೧ನೆಯ ಕನ್ನಡ ಸಾಹಿಯ ಸಮ್ಮೇಳನ, ಕಾಸರಗೋಡು

೬. **ದ.ಕ.ಜಿಲ್ಲೆಯ ಪ್ರಾಚೀನ ಇತಿಹಾಸ :** ೧೯೨೮ : ಗಣಪತಿರಾವ್ ಐಗಳ್ ಎಂ. : ಶಾರದಾಪ್ರೆಸ್, ಮಂಗಳೂರು

೭. **Ancient Karnataka Vol.1: History of Tuluva:** 1963: B.A.Satethur: oriental Book Agency.

೮. **ತುಳುನಾಡು:** ೧೯೬೩: ಡಾ. ಪಿ. ಗುರುರಾಜ ಭಟ್ಟ: (ಸಂ) ಕೆ. ಲಕ್ಷ್ಮೀನಾರಾಯಣ ಭಟ್ಟ: ಭವ್ಯವಾಣಿ, ಪಡುಪೇಟೆ, ಉಡುಪಿ

೯. **ಕರ್ನಾಟಕದ ಸಂಕ್ಷಿಪ್ತ ಇತಿಹಾಸ:** ಡಾ. ಸೂರ್ಯನಾಥ ಕಾಮತ್

೧೦. **ಪ್ರಾಚೀನ ತುಳುನಾಡು:** ೧೯೫೪: ಕಿಲ್ಲೆ ಎನ್.ಎಸ್., ಶೀನಪ್ಪ ಹೆಗ್ಗಡೆ: ಶ್ರೀಮತಿ ಇಂದಿರಾ ಕಿಲ್ಲೆ: ಮಂಗಳೂರು

೧೧. **ಅದೇ :** ಪೂರ್ವೋಕ್ತ

೧೨. **ತುಳು ದೇಶ ಭಾಷಾ ವಿಚಾರವು:** ೧೯೭೦: ಕಡವ ಶಂಭುಶರ್ಮಾ: ಕೆ.ವಿ.ಶರ್ಮ, ಪೆರ್ಲ

೧೩. **ತುಳು ನಾಡು-ನುಡಿ:** ೧೯೯೯: ಡಾ. ಪಾಲ್ತಾಡಿ ರಾಮಕೃಷ್ಣ ಆಚಾರ್: ಕರ್ನಾಟಕ ಸಂಘ ಪುತ್ತೂರು: ಪುಟ-೧೩

೧೪. **ತುಳುನಾಡಿನ ಗತವೈಭವ:** ೧೯೯೮: ಉದಯವರ್ಮರಾಜ: ಕನ್ನಡ ಸಾಹಿತ್ಯ ಪರಿಷತ್ತು, ಕೇರಳ ವಿಶೇಷ ಘಟಕ, ಕಾಸರಗೋಡು: ಪುಟ-೪೦

೧೫. **ಅದೇ:** ಪೂರ್ವೋಕ್ತ: ಪುಟ-೪೦

೧೬. **ಅದೇ:** ಪೂರ್ವೋಕ್ತ: ಪುಟ-೪೦

೧೭. **ಅದೇ:** ಪೂರ್ವೋಕ್ತ: ಪುಟ-೪೦

೧೮. **ಅದೇ:** ಪೂರ್ವೋಕ್ತ: ಪುಟ-೪೨

೧೯. **ತುಳು ನಾಡು-ನುಡಿ:** ೧೯೯೯: ಡಾ. ಪಾಲ್ತಾಡಿ ರಾಮಕೃಷ್ಣ ಆಚಾರ್: ಪೂರ್ವೋಕ್ತ: ಪುಟ-೧೩

೨೦. **ಅದೇ:** ಪೂರ್ವೋಕ್ತ: ಪುಟ-೧೪

೨೧. **ಅದೇ:** ಪೂರ್ವೋಕ್ತ: ಪುಟ-೧೫

೨೨. **ಅದೇ:** ಪೂರ್ವೋಕ್ತ: ಪುಟ-೧೯

೨೩. **ಅದೇ:** ಪೂರ್ವೋಕ್ತ: ಪುಟ-೪೦

೨೪. **ಅದೇ:** ಪೂರ್ವೋಕ್ತ: ಪುಟ-೧೬

೨೫. **ಅದೇ:** ಪೂರ್ವೋಕ್ತ: ಪುಟ-೦೨

೨೬. **ಅದೇ:** ಪೂರ್ವೋಕ್ತ: ಪುಟ-೦೨

೨೭. **ಅದೇ:** ಪೂರ್ವೋಕ್ತ: ಪುಟ-೦೨

೨೮. **ಅದೇ:** ಪೂರ್ವೋಕ್ತ: ಪುಟ-೦೩, ೦೪, ೦೫, ೦೬, ೦೩, ೦೮, ೦೯, ೧೦

೨೯. **ಅದೇ:** ಪೂರ್ವೋಕ್ತ: ಪುಟ-೦೨

೩೦. **ಅದೇ:** ಪೂರ್ವೋಕ್ತ: ಪುಟ-೦೨

೩೧. **ತುಳುನಾಡಿನ ಇತಿಹಾಸ:** ೧೯೬೯: ಡಾ.ಕೆ.ವಿ.ರಮೇಶ: ಪೂರ್ವೋಕ್ತ: ಪುಟ-೧೭

೩೨. **ಅದೇ:** ಪೂರ್ವೋಕ್ತ: ಪುಟ-೧೮, ೧೯

೩೩. **ಅದೇ:** ಪೂರ್ವೋಕ್ತ: ಪುಟ-೧೮, ೧೯

೩೪. **ದಕ್ಷಿಣ ಕನ್ನಡ ಜಿಲ್ಲೆಯ ಪ್ರಾಚೀನ ಇತಿಹಾಸ:** ೨೦೦೪,(ದ್ವಿತೀಯಾವೃತ್ತಿ): ಮಂಜೇಶ್ವರ ಗಣಪತಿರಾವ್ ಐಗಳ್: ರಾಷ್ಟ್ರಕವಿ ಗೋವಿಂದ ಪೈ ಸಂಶೋಧನ ಕೇಂದ್ರ, ಉಡುಪಿ: ಪುಟ-೩೫

೩೫. **ಅದೇ:** ಪೂರ್ವೋಕ್ತ: ಪುಟ-೧೫

೩೬. **ಅದೇ:** ಪೂರ್ವೋಕ್ತ: ಪುಟ-೧೫

೩೭. **ಅದೇ:** ಪೂರ್ವೋಕ್ತ: ಪುಟ-೧೫

೩೮. **ಅದೇ:** ಪೂರ್ವೋಕ್ತ: ಪುಟ-೧೫

೩೯. **ಅದೇ:** ಪೂರ್ವೋಕ್ತ: ಪುಟ-೧೫

೪೦. **ಅದೇ:** ಪೂರ್ವೋಕ್ತ: ಪುಟ-೧೫

೪೧. **ಭೂತಾರಾಧನೆ-ಜಾನಪದೀಯ ಅಧ್ಯಯನ** : ೧೯೯೦ : **ಡಾ.ಕೆ.ಚಿನ್ನಪ್ಪ** ಗೌಡ: ಮದಿಪು ಪ್ರಕಾಶನ, ಮಂಗಳ ಗಂಗೋತ್ರಿ: ಪುಟ-೩೯

೪೨. **ಅದೇ:** ಪೂರ್ವೋಕ್ತ

೪೩. **Grammer of Tulu Language-**1832: Rev. J.Brigel: Basel Mission Press, Mangalore

೪೪. **Tulu English Dictionary**: 1983: Rev.A. Manner: Asian Educational Services, New Delhi

೪೫. **The Devil Worship of Tuluvas**: 1894-1897: Burwell A.C.: Ind. Antiquary Vol.XXIII, XXIV, XXV, XXVI

೪೬. **On Behalf of Bhutas–Devil and ghost worship in western India:** Dec 14 1875: Walhouse M.J.: Journal of the Anthropological Institute of great Britain.

೪೭. **ತುಳುನಾಡಿನ ಪೂರ್ವಸ್ಮೃತಿ, ತೆಂಕನಾಡು:** ೧೯೪೭: ಗೋವಿಂದ ಪೈ: ಪೂರ್ವೋಕ್ತ

೪೮. **ದಕ್ಷಿಣ ಕನ್ನಡ ಜಿಲ್ಲೆಯ ಪ್ರಾಚೀನ ಇತಿಹಾಸ:** ೧೯೨೮: ಗಣಪತಿರಾವ್ ಐಗಳ್: ಪೂರ್ವೋಕ್ತ

೪೯. **ತುಳುನಾಡಿನ ಇತಿಹಾಸ:** ೧೯೬೯: ಡಾ. ಕೆ.ವಿ.ರಮೇಶ: ಪೂರ್ವೋಕ್ತ

೫೦. **ತುಳುನಾಡು:** ೧೯೬೩: ಡಾ.ಪಿ.ಗುರುರಾಜ ಭಟ್ಟ: ಪೂರ್ವೋಕ್ತ

೫೧. **ಕರ್ನಾಟಕದ ಸಂಕ್ಷಿಪ್ತ ಇತಿಹಾಸ:** ಡಾ. ಸೂರ್ಯನಾಥ ಕಾಮತ್: ಪೂರ್ವೋಕ್ತ

೫೨. **Grammar of Tulu Language:** 1972: Rev. J. Brigel: ಪೂರ್ವೋಕ್ತ

೫೩. **Tulu, English Dictionary:** 1983: Rev. A.Manner: ಪೂರ್ವೋಕ್ತ

೫೪. **ದಕ್ಷಿಣ ಕನ್ನಡ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ:** ೨೦೦೭: (ಸಂ)ಡಾ.ಆರ್.ಗೋಪಾಲ್: ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು: ಪುಟ–೫೦

೫೫. **ಪಾಡ್ದನೊಳು:** ೧೮೮೬: ಮ್ಯಾನರ್ ಎ.: ಬಾಸೆಲ್ ಮಿಷನ್ ಪ್ರೆಸ್, ಮಂಗಳೂರು

೫೬. **The Devil Worship of the Tuluvas:** 1894-1897: Burwell A.C.: ಪೂರ್ವೋಕ್ತ

೫೭. **Night Life in South Canara:** 1876: Martha Aston: Souvenir, Bharatiya Vidya Bhavan, Mangalore

೫೮. **The Siri Myth and Ritual A Mass Possession cult of south India:** 1875: Peter J.claus, Ethnology -14,1 47-48

೫೯. **ದ. ಕ. ಜಿಲ್ಲೆಯ ಚರಿತ್ರೆ ಮತ್ತು ಭೂತಾಳ ಪಾಂಡ್ಯರಾಯನಕಟ್ಟು:** ೧೯೧೫: ಎ. ಎಸ್. ಶೀನಪ್ಪ ಹೆಗ್ಗಡೆ: ಗುರುಪುರ, ದ.ಕ.

೬೦. **ಪ್ರಾಚೀನ ತುಳುನಾಡು:** ೧೯೫೪: ಎನ್. ಎಸ್. ಕಿಲ್ಲೆ, ಶೀನಪ್ಪ ಹೆಗ್ಗಡೆ.: ಪೂರ್ವೋಕ್ತ

೬೧. **ತುಳುವಾಲ ಬಲಿಯೇಂದ್ರ:** ೨೦೦೯: (ಸಂ.)ಶೀನಪ್ಪ ಹೆಗ್ಗಡೆ ಎ.ಎಸ್.: ವ್ಯವಸ್ಥಾಪನಾ ಸಮಿತಿ, ವಿಶ್ವ ತುಳು ಸಮ್ಮೇಳನ, ಉಜಿರೆ

೬೨. **ಅಳಿಯ ಸಂತಾನ ಕಟ್ಟ್‌ದ ಗುಟ್ಟು:** ೨೦೦೯: ಸತ್ಯಮಿತ್ರ ಬಂಗೇರ: ವ್ಯವಸ್ಥಾಪನಾ ಸಮಿತಿ, ವಿಶ್ವ ತುಳು ಸಮ್ಮೇಳನ, ಉಜಿರೆ

೬೩. **Ancient Karnataka Vol.1: History of Tuluva:** 1936: B.A.Sale their: ಪೂರ್ವೋಕ್ತ

೬೪. **ತುಳುನಾಡು:** ೧೯೬೩: ಡಾ.ಪಿ.ಗುರುರಾಜ ಭಟ್ಟ: ಪೂರ್ವೋಕ್ತ

೬೫. **Studies in Tuluva History and Culture:** 1975: Dr. Gururaa Bhatt: Kallianpura D.K.

೬೬. **ದ.ಕ.ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ:** ೨೦೦೭: (ಸಂ)ಡಾ.ಆರ್.ಗೋಪಾಲ್: ಪೂರ್ವೋಕ್ತ: ಪುಟ–೫೧

೬೭. **ತುಳು ಜನಪದ ಸಾಹಿತ್ಯ:** ೧೯೮೫: ಡಾ.ಬಿ.ಎ.ವಿವೇಕ ರೈ: ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

೬೮. **ಭೂತಾರಾಧನೆ–ಜಾನಪದೀಯ ಅಧ್ಯಯನ:** ೧೯೯೦: ಡಾ.ಕೆ.ಚಿನ್ನಪ್ಪ ಗೌಡ: ಪೂರ್ವೋಕ್ತ

೬೯. **ತುಳು ನಿಘಂಟು:** ಸಂಪುಟ–೧: ೧೯೮೮: ಸಂಪುಟ–೨: ೧೯೯೨: ಸಂಪುಟ–೩: ೧೯೯೫: ಸಂಪುಟ–೪: ೧೯೯೭: ಸಂಪುಟ–೫: ೧೯೯೭: ಸಂಪುಟ–೬: ೧೯೯೭: ಡಾ. ಉಪಾಧ್ಯಾಯ ಯು.ಪಿ.: ರಾಷ್ಟ್ರಕವಿ ಗೋವಿಂದ ಪೈ ಸಂಶೋಧನ ಕೇಂದ್ರ, ಉಡುಪಿ

೭೦. **ಮಲೆಕುಡಿಯರು:** ೧೯೯೬: ಬಿ. ಎ. ವಿವೇಕ ರೈ., ಡಿ.ಯದುಪತಿ ಗೌಡ: ಶ್ರೀ ಧರ್ಮಸ್ಥಳ ಮಂಜುನಾಥೇಶ್ವರ ತುಳುಪೀಠ, ಮಂಗಳೂರು ವಿಶ್ವವಿದ್ಯಾನಿಲಯ

೭೧. **ಸೇರಿಗೆ:** ೨೦೦೦: ಡಾ.ಕೆ.ಚಿನ್ನಪ್ಪ ಗೌಡ: ಮದಿಪು ಪ್ರಕಾಶನ, ಮಂಗಳಗಂಗೋತ್ರಿ

೭೨. **ತುಳುವ ಜಾನಪದ ಕೆಲವು ನೋಟಗಳು:** ೨೦೦೭: ಡಾ. ಅಮೃತ ಸೋಮೇಶ್ವರ: ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೭೩. **ಕರಾವಳಿ ಜಾನಪದ:** ೨೦೦೭: (ಸಂ)ನಾವಡ ಎ.ವಿ.: ಪೂರ್ವೋಕ್ತ

೭೪. **ತುಳು ಜಾನಪದ ಆಚರಣೆಗಳು:** ೨೦೦೩: ಬನ್ನಂಜೆ ಬಾಬು ಅಮೀನ್: ಕೆಮ್ಮಲಜೆ ಜಾನಪದ ಪ್ರಕಾಶನ, ಉಡುಪಿ

೭೫. **ಜಾನಪದ ಮಿನದನ:** ೧೯೯೭: ಪಾಲ್ತಾಡಿ ರಾಮಕೃಷ್ಣ ಆಚಾರ್: ಸುಪ್ರಿಯಾ ಪ್ರಕಾಶನ, ಪುತ್ತೂರು

೭೬. **ತುಳು ಸಂಸ್ಕೃತಿದ ಪೊಲಬು:** ೨೦೦೮: ಡಾ.ಪಾಲ್ತಾಡಿ ರಾಮಕೃಷ್ಣ ಆಚಾರ್: ಕರ್ನಾಟಕ ತುಳು ಸಾಹಿತ್ಯ ಅಕಾಡೆಮಿ, ಮಂಗಳೂರು.

೭೭. **ಪಾಣರ ಜನಾಂಗ–ಬದುಕು ಮತ್ತು ಸಂಸ್ಕೃತಿ, ತುಳುನಾಡಿನಲ್ಲಿ ಭೂತಾರಾಧನೆ:** ೨೦೦೪: ಡಾ.ಪಾಲ್ತಾಡಿ ರಾಮಕೃಷ್ಣ ಆಚಾರ್: ಪ್ರಸಾರಾಂಗ, ಮಂಗಳೂರು ವಿಶ್ವವಿದ್ಯಾನಿಲಯ

೭೮. **ಜನಪದ ಸುತ್ತಮುತ್ತ:** ೧೯೯೨: ಡಾ.ವಾಮನ ನಂದಾವರ: ಪ್ರಜಾಬಂಧು ಪ್ರಕಾಶನ, ಮಂಗಳೂರು

೭೯. **ಸಿಂಗದನ:** ೧೯೮೭: ಡಾ.ವಾಮನ ನಂದಾವರ: ಹೇಮಾಂಶು ಪ್ರಕಾಶನ, ಮಂಗಳೂರು

೮೦. **ಸಸ್ಯ ಜಾನಪದ:** ೨೦೦೦: ಡಾ.ಬಿ.ಶಿವರಾಮ ಶೆಟ್ಟಿ: ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೮೧. **ಜಾತ್ರೆ ಮತ್ತು ಇತರ ಸಂಶೋಧನಾತ್ಮಕ ಪ್ರಬಂಧಗಳು:** ೧೯೯೦: (ಸಂ)ಚಂದ್ರಶೇಖರ ದಾಮ್ಲೆ: ಸಮಾಜ ಶಾಸ್ತ್ರ ಸಂಘ, ನೆಹರು ಮೇಮೋರಿಯಲ್ ಕಾಲೇಜು, ಸುಳ್ಯ

೮೨. **ದ.ಕ. ಜಿಲ್ಲೆಯ ಬೈರರು:** ೧೯೯೦: ಡಾ.ಡಿ.ಆರ್.ಪಾಂಡುರಂಗ: ರಾಷ್ಟ್ರಕವಿ ಗೋವಿಂದ ಪೈ ಸಂಶೋಧನ ಕೇಂದ್ರ, ಉಡುಪಿ

೮೩. **ಮುಗೇರರು ಜನಾಂಗ–ಜಾನಪದ ಅಧ್ಯಯನ:** ೧೯೯೭: ಡಾ.ಅಭಯ ಕೌಕ್ರಾಡಿ: ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು: ಕರ್ನಾಟಕ ತುಳು ಸಾಹಿತ್ಯ ಅಕಾಡೆಮಿ, ಮಂಗಳೂರು

೮೪. **ದ.ಕ.ಜಿಲ್ಲೆಯ ಹರಿಜನರ ಮತ್ತು ಗಿರಿಜನರ ಸಾಮಾಜಿಕ ಇತಿಹಾಸ:** ೧೯೯೪: ಪಿ.ಕಮಲಾಕ್ಷ: ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು

೮೫. **ಬಂಟರು ಒಂದು ಸಮಾಜೋ ಸಾಂಸ್ಕೃತಿಕ ಅಧ್ಯಯನ:** ೨೦೦೪: ಇಂದಿರಾ ಹೆಗ್ಗಡೆ: ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು

೮೬. **ಪೂಕರೆ ಮತ್ತು ಇತರ ಜಾನಪದೀಯ ಲೇಖನಗಳು:** ೨೦೦೪: ಪೂವಪ್ಪ ಕಣಿಯೂರು: ರಾಜ್ ಪ್ರಕಾಶನ, ಮೈಸೂರು

೮೭. **ತುಳು ಜಾನಪದ ಕಾವ್ಯ–ಇಹಪರ ಲೋಕದೃಷ್ಟಿ:** ೨೦೦೦: ರಾಜಶ್ರೀ: ಶ್ರೀ ಧ.ಮಂ. ತುಳುಪೀಠ, ಮಂಗಳೂರು ವಿಶ್ವವಿದ್ಯಾನಿಲಯ

■■■

# ಅಧ್ಯಾಯ–೨

## ಆಚರಣೆಗಳ ಹುಟ್ಟು, ಸ್ವರೂಪ ಮತ್ತು ಬೆಳವಣಿಗೆ

೨.೧: 'ಆಚರಣೆ'-ಪದಾರ್ಥ ವಿವೇಚನೆ

೨.೨: ಆಚರಣೆ ಮತ್ತು ನಂಬಿಕೆ

೨.೩: ಆಚರಣೆ ಮತ್ತು ಹಬ್ಬ

೨.೪: ಆಚರಣೆಯ ಆಶಯ

೨.೫: ಆಚರಣೆಯ ಪ್ರಭೇದಗಳು

೨.೬: ಭಾರತದಲ್ಲಿ ಆಚರಣೆಗಳು

೨.೭: ಆಚರಣೆಗಳ ಚಲನಶೀಲತೆ

೨.೮: ಆಚರಣೆ ಮತ್ತು ಧಾರ್ಮಿಕತೆ

# ಅಧ್ಯಾಯ–೨

## ಆಚರಣೆಗಳ ಹುಟ್ಟು, ಸ್ವರೂಪ ಮತ್ತು ಬೆಳವಣಿಗೆ

# ಅಧ್ಯಾಯ-೨

# ಆಚರಣೆಗಳ ಹುಟ್ಟು, ಸ್ವರೂಪ ಮತ್ತು ಬೆಳವಣಿಗೆ

## ೨.೧: ಆಚರಣೆ-ಪದಾರ್ಥ ವಿವೇಚನೆ

ಆಚರಣೆಗಳು ಮನುಷ್ಯ ಲೋಕಕ್ಕೆ ಮಾತ್ರ ಸೀಮಿತವಾದ ಸಾಂಸ್ಕೃತಿಕ ಸಂಬಂಧವುಳ್ಳ ಪರಂಪರಾಗತ ಕಟ್ಟುಪಾಡುಗಳು. "ಮನುಷ್ಯ ಅಗೋಚರವಾದ ದೈವ ಶಕ್ತಿಗಳ ಪ್ರೀತ್ಯರ್ಥವಾಗಿ ನಡೆಸುವ ಮತಾಚಾರಗಳು ಮತ್ತು ಕರ್ಮವಿಧಿಗಳನ್ನು ಆಚರಣೆಗಳೆಂದು ಕರೆಯಲಾಗಿದೆ. ಆಚರಣೆಗಳನ್ನು ಪರಂಪರಾಗತವಾಗಿ ಮುಂದುವರಿಸಿಕೊಂಡು ಬರುವುದರಿಂದ ಇವುಗಳ ಹಿನ್ನೆಲೆಯಲ್ಲಿ ಬಲವಾದ ನಂಬಿಕೆಗಳು ಇರುತ್ತವೆ. ಆಚರಣೆಗಳು ಧಾರ್ಮಿಕ ವಲಯದಲ್ಲಿರುವುದೇ ಹೆಚ್ಚು. ಈ ಬಗೆಯ ಆಚರಣೆಗಳನ್ನು ಅನುಷ್ಠಾನಕ್ಕೆ ತಂದರೆ ತಾನು ನಂಬಿದ ಅಗೋಚರ ಅಥವಾ ಪವಿತ್ರ ವಸ್ತುಗಳಿಗೆ ತನ್ನ ಮೇಲೆ ಪ್ರೀತಿ ಉಂಟಾಗುತ್ತದೆಂದು ಅವನ ನಂಬಿಕೆ."[೧] ಈ ಅರ್ಥದಲ್ಲಿ ಮನುಷ್ಯನ ನಂಬಿಕೆಗಳ ಕ್ರಿಯಾರೂಪವೇ ಆಚರಣೆ ಎಂದು ಅರ್ಥೈಸಬಹುದು.

ಲೋಕ ಸೃಷ್ಟಿಯ ವಿಸ್ಮಯವನ್ನು ಭೇದಿಸಲಾಗದ ಮನುಷ್ಯ ಈ ಸೃಷ್ಟಿ ರಹಸ್ಯದ ಹಿಂದೆ ಅದ್ಯಾವುದೋ ಶಕ್ತಿಯನ್ನು ಪ್ರಕೃತಿಯಲ್ಲಿನ ಬೇರೆ ಬೇರೆ ವಸ್ತುಗಳಲ್ಲಿ, ಬೇರೆ ಬೇರೆ ಪ್ರಕ್ರಿಯೆಗಳಲ್ಲಿ, ಬೇರೆ ಬೇರೆ ಪ್ರಾಣಿಗಳಲ್ಲಿ, ಬೇರೆ ಬೇರೆ ಸಸ್ಯಗಳಲ್ಲಿ, ನೆಲ, ಜಲ, ಗಾಳಿ, ಬೆಳಕುಗಳಲ್ಲಿ ಕಂಡುಕೊಳ್ಳುವ ಪ್ರಯತ್ನವನ್ನು ಮಾಡಿದ್ದಾನೆ. ಮಾತ್ರವಲ್ಲ, ಆ ಶಕ್ತಿಗಳಿಗೆ ಹೆದರಿಯೋ, ಆ ಶಕ್ತಿಗಳನ್ನು ಸಂತುಷ್ಟ ಪಡಿಸಿ ಪ್ರೀತಿಗಳಿಸಬೇಕೆಂದೋ, ಈ ಲೋಕದಲ್ಲಿ ತನ್ನನ್ನು ಸೃಷ್ಟಿ ಮಾಡಿದ್ದಕ್ಕೆ ಕೃತಜ್ಞತೆಯನ್ನು ಸಲ್ಲಿಸುವ ಸಲುವಾಗಿಯೋ, ಈ ಭೂಮಿಯಲ್ಲಿ ಸೃಷ್ಟಿಯಾದ ತನಗೆ ಬದುಕಲು ಬೇಕಾಗುವ ಅಗತ್ಯ ವಸ್ತು ಪರಿಕರಗಳನ್ನು ನಿತ್ಯ ಒದಗಿಸಿಕೊಡು ಎಂದು ಬೇಡಿಕೊಳ್ಳುವ ರೀತಿಯಲ್ಲೋ ಇಲ್ಲವೆ ಭವಿಷ್ಯದ ಜೀವನಕ್ಕೆ ಯಾವುದೇ ರೀತಿಯ ತೊಂದರೆಗಳಾಗದಿರಲಿ ಎಂದೋ, ಸತ್ತ ಮೇಲೆ ಸ್ವರ್ಗ ಪ್ರಾಪ್ತಿಯಾಗಲೆಂದೋ ಅಥವಾ ದುಡಿದು ದಣಿದ ತನುಮನಗಳಿಗೆ ಸುಖ ಶಾಂತಿ ಸಿಗಲೆಂದೋ-ಹೀಗೆ ನಾನಾ ಕಾರಣಗಳ ಹಿನ್ನೆಲೆಯಲ್ಲಿ ನಾನಾ ರೀತಿಯ ಆಚರಣೆಗಳು ಅಸ್ತಿತ್ವಕ್ಕೆ ಬಂದಿರುವ ಸಾಧ್ಯತೆಗಳಿವೆಯೆಂದು ಹೇಳಬಹುದು. ಹಾಗಾಗಿ ಈ ಆಚರಣೆಗಳು ಮನುಷ್ಯನ ಸೃಷ್ಟಿಯೊಂದಿಗೆ ಸೃಷ್ಟಿಯಾಗಿರಬೇಕು ಮತ್ತು ಇವು

ಮನುಷ್ಯ ಜೀವನದ ಪ್ರತಿಬಿಂಬಗಳು. ಈ ಹಿನ್ನಲೆಯಲ್ಲಿ ಹೇಳುವುದಾದರೆ ಆಚರಣೆಗಳು ಒಂದು ದೇಶಕ್ಕಾಗಲೀ, ಒಂದು ಜಾತಿ ಮತ ಜನಾಂಗಕ್ಕಾಗಲಿ ಸೀಮಿತವಾದುದಲ್ಲ. ಆದ್ದರಿಂದ ಆಚರಣೆಗೆ ಮಾನವನ ಇತಿಹಾಸದಷ್ಟು ಪ್ರಾಚೀನತೆಯನ್ನು ಗುರುತಿಸಬಹುದಾಗಿದೆ. ಈ ರೀತಿಯ ಆಚರಣೆಗಳು ಕೇವಲ ಒಂದು ಪ್ರದೇಶಕ್ಕೆ ಮಾತ್ರ ಸೀಮಿತವಾದದ್ದಲ್ಲ. ಜಗತ್ತಿನ ವಿವಿಧ ಭಾಗಗಳಲ್ಲಿ ವಿವಿಧ ಜನಾಂಗಗಳಲ್ಲಿಯೂ ಇರುವುದನ್ನು ಗುರುತಿಸಬಹುದಾಗಿದೆ.

ಸಂಸ್ಕೃತದ 'ಆಚರಣಾ' ಎಂಬ ನಾಮಪದವೇ ಕನ್ನಡದಲ್ಲಿ 'ಆಚರಣೆ'ಯಾಗಿದೆ. 'ಆಚಾರ' ಎಂಬ ನಾಮಪದ ಇದರ ಮೂಲರೂಪವಾಗಿ ಕಂಡುಬರುತ್ತದೆ. ಈ ಪದದಿಂದಲೇ ಆಚರಿಸು, ಎಂಬ ಕ್ರಿಯಾಪದವೂ, ಆಚಾರ್ಯ ಎಂಬ ನಾಮಪದವೂ ಹುಟ್ಟಿಕೊಂಡಿವೆ. ಆಚರಣೆ ಪದಕ್ಕೆ ಅರ್ಥಕೋಶಗಳಲ್ಲಿ ಆಚರಿಸುವುದು, ಬಳಕೆ[೨]; ಆಚರಣ, ಅನುಸರಿಸುವುದು, ಆಚರಿಸುವುದು, ನಡೆಯುವುದು, ನಡೆ– Following, observing ಅಭ್ಯಾಸ, ರೂಢಿ, ಬಳಕೆ– a custom, an observance, usage, practice, performance[೩]; ನಡತೆ, ಚರಿತ್ರ, ಲಕ್ಷಣ, ಆಗಮನ, ರಥ[೪]; ಆಚರಿಸುವುದು, ಅನುಸರಿಸುವುದು, ಅಭ್ಯಾಸ, ಬಳಕೆ[೫]; ಧಾರ್ಮಿಕ, ಸಾಮಾಜಿಕ ಕಟ್ಟಳೆಗಳ ನಡೆಸುವಿಕೆ, ಆಚರಣೆ–Performance of religious and social ceremonies, ಅನುಷ್ಠಾನ–observance, ರೂಢಿ, ಪರಂಪರಾಗತ ಪದ್ಧತಿ–usage, established custom, ಉತ್ಸವ–a festival[೬]; coming near, following, observing, conduct, usage, practice, transaction, performance, deportment, behaviour[೭]; observing, conduct, practice, performance[೮]; practicing, doing, performing, following, observing, conduct, behaviour[೯]–ಮೊದಲಾದ ಅರ್ಥಗಳಿವೆ. ಇವುಗಳೂ ಆಚರಣೆಯೆಂಬುದು ಮನುಷ್ಯ ಮೊದಲಿನಿಂದಲೂ ರೂಢಿಸಿಕೊಂಡು ಬಂದ ವಿಶಿಷ್ಟ ಕ್ರಿಯೆಗಳು ಎಂಬ ಅರ್ಥವನ್ನೇ ಹೇಳುತ್ತವೆ.

## ೨.೨: ಆಚರಣೆ ಮತ್ತು ನಂಬಿಕೆ

ಆಚರಣೆಯ ವಿಶ್ಲೇಷಣೆಗೆ ಕಾರ್ಯ ಕಾರಣ ಸಂಬಂಧ ಹೆಚ್ಚು ಸೂಕ್ತವಾಗಿ ಅನ್ವಯವಾಗುತ್ತದೆ. ಯಾವುದೇ ಕ್ರಿಯೆಯ ಹಿಂದೆ ಒಂದು ಕಾರಣವಿರುವಂತೆ ಪ್ರತಿಯೊಂದು ಆಚರಣೆಯ ಹಿಂದೆ ಒಂದು ನಂಬಿಕೆ ಕೆಲಸ ಮಾಡುತ್ತದೆ. ಇದರರ್ಥ ಮನುಷ್ಯನ ಲೌಕಿಕದ ಎಲ್ಲ ಚಟುವಟಿಕೆಗಳಿಗೂ ನಂಬಿಕೆಗಳೇ ಮೂಲಾಧಾರಗಳು. ಈ ಹಿನ್ನೆಲೆಯಲ್ಲಿ "ಆಚರಣೆಗಳು

ಹುಟ್ಟುವುದಕ್ಕೆ ನಂಬಿಕೆಗಳು ಮೂಲಕಾರಣವಾಗುತ್ತವೆ. ಆದ್ದರಿಂದ ಒಂದು ಆಚರಣೆ ಅರ್ಥಪೂರ್ಣವಾಗಬೇಕಾದರೆ ನಂಬಿಕೆಯಲ್ಲಿ ಹುರುಳಿರಬೇಕಾದದ್ದು ಅನಿವಾರ್ಯವಾಗಿದೆ"[೧೦]- ಎಂಬ ಮಾತನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು.

ಈ ನೆಲೆಯಲ್ಲಿ ಆಚರಣೆಗಳೂ ನಂಬಿಕೆಗಳ ತಳಹದಿಯಲ್ಲಿ ಹುಟ್ಟಿಕೊಂಡವುಗಳು. ಈ "ನಂಬಿಕೆ ಮತ್ತು ಆಚರಣೆಗಳು ಒಟ್ಟೊಟ್ಟಿಗೇ ಇದ್ದರೂ ಕೂಡ ಕೆಲವು ವೇಳೆ ಗೊತ್ತಿಲ್ಲದಂತೆಯೇ ಅವೆರಡಕ್ಕೂ ಸಂಬಂಧವೇ ಇಲ್ಲದಂತಹ ಸಂದರ್ಭ ಬರಬಹುದು. ಭಾರೀ ಸಾಧನೆಗಳನ್ನು ಮಾಡಿದಾಗ ಅದಕ್ಕೆ ಮಕ್ಕಳನ್ನು ಬಲಿಕೊಡುವ ಪದ್ಧತಿ ಯುರೋಪ್ ದೇಶಗಳಲ್ಲಿ ಹಿಂದೆ ಇತ್ತು. ದೊಡ್ಡ ದೊಡ್ಡ ಕಟ್ಟಡಗಳ ಕೆಳಗಡೆ ಎಲುಬುಗಳು ದೊರೆತಿರುವುದು ಇದನ್ನು ಸಮರ್ಥಿಸುತ್ತದೆ. ಆದರೆ ಈ ಆಚರಣೆಗೆ ಸಂಬಂಧಿಸಿದ ನಂಬಿಕೆಗಳು ಸಿಗುವುದಿಲ್ಲ. ಇದೇ ರೀತಿ ಅಂತ್ಯ ಸಂಸ್ಕಾರಕ್ಕೆ ಶವವನ್ನು ಒಯ್ಯುವಾಗ ತಲೆ ಬಾಗುವ ಪದ್ಧತಿ ಪಾಶ್ಚಾತ್ಯರಲ್ಲಿ ಇದ್ದು, ಅದಕ್ಕೆ ಕಾರಣ ಬೇರೆ ಇದೆ. ಹಿಂದೆ ಮೆರವಣಿಗೆಯ ಹಿಂದೆ ಒಯ್ಯುತ್ತಿದ್ದ ಶಿಲುಬೆಗೆ ವಂದಿಸುತ್ತಿದ್ದರು. ಆದರೆ ಈ ಆಚರಣೆ ಕಣ್ಮರೆಯಾಗಿ ನಂಬಿಕೆಯ ಬಲದಿಂದ ವಂದಿಸುವ ಪದ್ಧತಿ ಉಳಿದಿದೆ."[೧೧] ಹಾಗಾಗಿ ನಂಬಿಕೆಗಳೆಲ್ಲ ಆಚರಣೆ ರೂಪದಲ್ಲಿರುವುದಿಲ್ಲ; ಆದರೆ ಪ್ರತಿಯೊಂದು ಆಚರಣೆಯ ಹಿಂದೆಯೂ ನಂಬಿಕೆ ಇದ್ದೇ ಇರುತ್ತದೆ.

## ೨.೩: ಆಚರಣೆ ಮತ್ತು ಹಬ್ಬ

ಸಾಮಾನ್ಯವಾಗಿ ಆಚರಣೆ ಮತ್ತು ಹಬ್ಬ ಪದಗಳು ಸಮಾನಾರ್ಥದಲ್ಲಿ ಬಳಕೆಯಾಗುವುದುಂಟು. ಆದರೆ ಆಚರಣೆ ಮತ್ತು ಹಬ್ಬ ಒಂದೇ ಅಲ್ಲ; ಮತ್ತು ಆಚರಣೆ ಎಂಬುದು ಹಬ್ಬಗಳಿಗಷ್ಟೆ ಸೀಮಿತವಾದುದಲ್ಲ. "ಸಂಸ್ಕೃತದ ಪರ್ವನ್ (ಪರ್ವ) ಶಬ್ದದ ತದ್ಭವವೇ ಹಬ್ಬ. ಪರ್ವನ್ ಶಬ್ದಕ್ಕೆ (a period, fixed time, the days of the four changes of the moon. i.e, the eighth and four teen day of each half month and the days of the full and new moon; A sacrifice performed on the occasion of a change of the moon. An eclipse of the sun or moon, a festival holiday, an occasion of joy- Apte Dic) ಕಾಲ ವಿಭಾಗ, ನಿಶ್ಚಿತ ಸಮಯ, ಚಾಂದ್ರಮಾಸದ ಅಷ್ಟಮೀ ಚತುರ್ದಶೀ ಪೂರ್ಣಿಮಾ ಅಮಾವಾಸ್ಯಾ ತಿಥಿಗಳು, ಚಂದ್ರಪರಿವರ್ತನ ಸಮಯದ ಯಜ್ಞಾದಿಗಳು, ಸೂರ್ಯ ಚಂದ್ರ ಗ್ರಹಣಗಳು, ಉತ್ಸವ ಸಮಾರಂಭ, ಸಂತೋಷದ ಪ್ರಸಂಗ..... ಮುಂತಾದ ಅರ್ಥಗಳಿವೆ. ಇವೆಲ್ಲವೂ ಬಹುಷ: ಕಾಲಾರ್ಥಗಳೇ ಎನ್ನಬಹುದು. ಕಾಲಮಾನವನ್ನು ಅನುಸರಿಸಿ ಮಾಡುವ

ಹಬ್ಬಗಳಿಗೆ ಪರ್ವ ಶಬ್ದ ಅನ್ವಯಿಸುತ್ತದೆ". ಆದರೆ ಆಚರಣೆಗೆ ಹಬ್ಬಕ್ಕಿಂತ ವಿಸ್ತೃತವಾದ ಅರ್ಥವಿದೆ. ಎಲ್ಲಾ ಹಬ್ಬಗಳಲ್ಲೂ ಆಚರಣೆಯಿದೆ; ಆದರೆ ಎಲ್ಲಾ ಆಚರಣೆಗಳೂ ಹಬ್ಬಗಳಾಗುವುದಿಲ್ಲ. ಉದಾಹರಣೆಗೆ ಅಂತ್ಯ ಸಂಸ್ಕಾರ ಇಲ್ಲವೆ ತಿಥಿ ಆಚರಣೆಗಳನ್ನು ಹಬ್ಬದ ಅರ್ಥದಲ್ಲಿ ಆಚರಿಸುವುದು ಉಚಿತವಾಗುವುದಿಲ್ಲ. ಆದಾಗ್ಯೂ ಕೆಲವೊಮ್ಮೆ ಹಬ್ಬ ಮತ್ತು ಆಚರಣೆ ಪದಗಳನ್ನು ಒಂದೇ ಅರ್ಥದಲ್ಲಿ ಪ್ರಯೋಗಿಸುವುದು ಕೂಡ ಕಂಡುಬರುತ್ತದೆ. ಹಾಗಾಗಿ ದೀಪಾವಳಿ, ಮಕರ ಸಂಕ್ರಮಣ, ಕೃಷ್ಣಾಷ್ಟಮಿ, ಗಣೇಶ ಚೌತಿ, ಶಿವರಾತ್ರಿ, ಭೂಮಿ ಹುಣ್ಣಿಮೆ ಇವುಗಳೆಲ್ಲ ಹಬ್ಬಗಳೂ ಹೌದು; ಆಚರಣೆಗಳೂ ಹೌದು. ಇದರರ್ಥ ಹಬ್ಬಗಳನ್ನು ಆಚರಿಸುವುದು, ವ್ರತ ನಿಯಮಗಳನ್ನು ನಡೆಸುವುದು, ಸಂಸ್ಕಾರ ಕರ್ಮವಿಧಿಗಳನ್ನು ನೆರವೇರಿಸುವುದು ಇತ್ಯಾದಿಗಳೆಲ್ಲವೂ ಆಚರಣೆಗಳಾಗುತ್ತವೆ. ಒಟ್ಟಿನಲ್ಲಿ ಹಬ್ಬಗಳಿಗೂ ಆಚರಣೆಗಳಿಗೂ ಸೂಕ್ಷ್ಮ ವ್ಯತ್ಯಾಸವಿದೆ. ಆದರೆ ಯಾವುದೇ ಹಬ್ಬಗಳು ಪರಿಪೂರ್ಣವಾಗುವುದು ಅವುಗಳನ್ನು ಆಚರಿಸಿದಾಗ ಮಾತ್ರ. ಹಾಗಾಗಿ ಹಬ್ಬ ಆಚರಣೆಯ ಕುರಿತಾದ ವಿವರಗಳು ಇಲ್ಲವೆ, ಹಿನ್ನೆಲೆಗಳು ಆಚರಣೆ ಕುರಿತಾದ ವಿವರ ಹಿನ್ನೆಲೆಗಳೇ ಆಗುತ್ತವೆ. ಆಚರಣೆ ಪದಕ್ಕೆ ಸಂವಾದಿಯಾಗಿ ಹಬ್ಬ ಪದವನ್ನು ಬಳಸುವುದು ರೂಢಿಯಾಗಿದೆ.

### ೨.೪: ಆಚರಣೆಯ ಆಶಯ

ಹಬ್ಬಗಳ ಆಚರಣೆಯಿಂದ ಸುಖ-ಶಾಂತಿ, ಸಮಾಧಾನ ಸಮೃದ್ಧಿಗಳು ಸಿಗುತ್ತವೆ ಎಂಬುದು ಮಾನವನ ಬಲವಾದ ನಂಬಿಕೆ. ಆದುದರಿಂದ ವಿಶ್ವದ ಯಾವುದೇ ದೇಶದ ಯಾವುದೇ ಜನಾಂಗದ ಜನರು ಹಬ್ಬಗಳನ್ನು ಆಚರಿಸುತ್ತಾರೆ. ಹಬ್ಬಹರಿದಿನ ಆಚರಣೆ ಉತ್ಸವಗಳು ಜನಾಂಗದ ಏಕತೆಗೆ ಹಿರಿಯ ಸಾಧನಗಳಾಗಿವೆ. ಊರಿನ ಜಾತ್ರೆ-ಉತ್ಸವ ಸಮಾರಂಭಗಳ ಸಮಯಗಳಲ್ಲಿ ಈ ಮಾತಿನ ಅನುಭವ ನಮಗಾಗುತ್ತದೆ. ಜಾತ್ರೆ ಉತ್ಸವಗಳ ದಿನಗಳಲ್ಲಿ ಊರಿನ ಮನೆಮನೆಗಳಲ್ಲಿಯೂ ನೆಂಟರಿಷ್ಟರು, ಬಂಧುಬಳಗದವರೆಲ್ಲ ಸೇರಿಕೊಳ್ಳುತ್ತಾರೆ. ಉತ್ಸವ ನಡೆಯುವ ಹೊತ್ತಿನಲ್ಲಿ ಜಾತಿ, ಮತ ಪಂಥಗಳ ಭೇದ ಭಾವವನ್ನು ಬಿಟ್ಟು ಊರವರೂ, ನೆರೆಹೊರೆಯವರೂ ಎಲ್ಲರೂ ಒಂದಾಗಿ ಸೇರುತ್ತಾರೆ. ದೊಡ್ಡ ದೊಡ್ಡ ಸಾಧು ಸಂತರ, ಸ್ವಾಮಿಗಳ, ಜಾಗೃತ ದೇವಸ್ಥಾನಗಳ ಜಾತ್ರೆಯ ಸಮಯಕ್ಕೆ ಪ್ರಾಂತ ಪರ ಪ್ರಾಂತಗಳ ಜನರೂ ಒಟ್ಟಾಗುತ್ತಾರೆ. ಕುಟುಂಬ ಸಂಸಾರದ ಲೌಕಿಕದ ನೋವು ನಲಿವುಗಳನ್ನು ಮರೆತು ಪ್ರಶಾಂತ ಮನಸ್ಕರಾಗುತ್ತಾರೆ. ಮೈಸೂರಿನ ದಸರಾ ಉತ್ಸವವನ್ನು ನೋಡಲು ದೇಶ

ವಿದೇಶಗಳ ಪ್ರವಾಸಿಗರೂ ಆಗಮಿಸುತ್ತಿದ್ದಾರೆ. ಇದರರ್ಥ ಹಬ್ಬ ಆಚರಣೆಗಳು ಪವಿತ್ರ ಪರಿಶುದ್ಧ ಸಂನಿವೇಶವೊಂದನ್ನು ನಿರ್ಮಾಣ ಮಾಡುತ್ತವೆ. ಹೀಗೆ ಹಬ್ಬಗಳ ಮಂಗಲ ಸಮಯದ ದಿವ್ಯ ದೃಶ್ಯಗಳಿಂದ ಎಲ್ಲರ ಹೃದಯಗಳೂ ಹಸನಾಗುತ್ತವೆ. ಹಳೆಯ ರಾಗ ದ್ವೇಷಾದಿ ಮನಸ್ತಾಪಗಳು ಎಲ್ಲಿಯೋ ಮಾಯವಾಗುತ್ತವೆ. ಪರಿಚಿತರಿರಲಿ, ಅಪರಿಚಿತರಿರಲಿ ಒಬ್ಬರ ಕೂಡೊಬ್ಬರು ಸ್ನೇಹ ಸಂಬಂಧಗಳನ್ನು ಬೆಳೆಸುತ್ತಾರೆ. ಇದರಿಂದ ಜನಾಂಗಗಳ ನಡುವೆ ಏಕತೆ ಸೌಹಾರ್ದತೆ ಮತ್ತಷ್ಟು ಭದ್ರವಾಗುತ್ತದೆ.

ಜನಾಂಗದ ಐಕ್ಯ, ಐಹಿಕ ಸುಖ ಸಾಧನೆಗೆ ನೆರವಾಗುವುದು ಹಬ್ಬದ ಒಂದು ಮುಖವಾದರೆ ಮತ್ತೊಂದು ಮುಖ ಅದು ಪರ ಲೋಕದ ಸುಖ ಪ್ರಾಪ್ತಿ ಅಥವಾ ಮುಕ್ತಿ ಸಾಧನೆ. ಈ ಕಾರಣದಿಂದಲೇ ಜಗತ್ತಿನ ಪ್ರತಿಯೊಂದು ಜನಾಂಗವೂ ದೇವರ ಪ್ರೀತ್ಯರ್ಥವಾಗಿಯೇ ಹಬ್ಬಗಳನ್ನು ಆಚರಿಸುತ್ತದೆ. ಹಿಂದುಗಳಂತೂ ವಿಶೇಷವಾಗಿ ಅಧ್ಯಾತ್ಮ ಜೀವಿಗಳು; ಇಹಕ್ಕಿಂತಲೂ ಪರದ ಕಡೆಗೇ ಕಣ್ಣಿಟ್ಟವರು. ಪ್ರತಿಯೊಂದು ಹಬ್ಬಕ್ಕೂ ಒಬ್ಬೊಬ್ಬ ಅಧಿದೇವತೆಯನ್ನು ಕಲ್ಪಿಸಿದ್ದಾರೆ. ಆ ದೇವ ದೇವತೆಗಳಿಗೆ ಸಂಬಂಧಪಟ್ಟ ಕತೆಗಳು ಎಲ್ಲ ಹಬ್ಬಗಳ ಹಿನ್ನೆಲೆಯಲ್ಲಿಯೂ ಸಾಮಾನ್ಯವಾಗಿ ಸಿಗುತ್ತವೆ. ಇವುಗಳನ್ನು ಆಚರಿಸುವುದೆಂದರೆ ಧರ್ಮಾಚರಣೆಯನ್ನು ಮಾಡಿದಂತೆ ಎಂಬ ನಂಬಿಕೆಯಿದೆ. ಈ ಕಾರಣದಿಂದಲೇ ನಿತ್ಯವೂ ತಪ್ಪಿದರೆ ಅಲ್ಪ ಸಮಯದ ಅಂತರದಿಂದಲಾದರೂ ಹಲವಾರು ಹಬ್ಬಗಳನ್ನು ಆಚರಿಸಿಕೊಂಡು ಬರುವ ಸಂಪ್ರದಾಯವನ್ನು ರೂಢಿಮಾಡಿಕೊಂಡಿದ್ದಾರೆ.

ಜನರು ಒಂದಾಗುವುದು, ಸುಖ ದುಖ ಪರಸ್ಪರ ಧೈರ್ಯ ಸಮಾಧಾನಗಳನ್ನು ಹಂಚಿಕೊಳ್ಳುವುದು, ಹಳೆಯ ದ್ವೇಷಾದಿಗಳನ್ನು ಕಳೆದು ಮತ್ತೆ ಸೌಹಾರ್ದ ಸ್ಥಾಪಿಸುವುದು, ದುಡಿಮೆಗೆ ವಿಶ್ರಾಂತಿ ಕೊಡುವುದು, ವಿಶೇಷ ತಿಂಡಿ ತಿನಸುಗಳನ್ನು ಸೇವಿಸುವುದು, ಆಟೋಟ ಕ್ರೀಡೆಗಳನ್ನು ನಡೆಸುವುದು ಮಾತ್ರವಲ್ಲ, ಅಧ್ಯಾತ್ಮ ಧ್ಯಾನದ ಮೂಲಕ ಮುಕ್ತಿ ಸಾಧನೆ ಮಾಡುವುದೇ ಮೊದಲಾದ ಉದ್ದೇಶಗಳು ಹಬ್ಬ ಆಚರಣೆಗಳಲ್ಲಿರುವುದು ಸ್ಪಷ್ಟವಾಗಿ ಕಂಡು ಬರುತ್ತದೆ.

## ೨.೫: ಆಚರಣೆಯ ಪ್ರಭೇದಗಳು

ಹಬ್ಬ ಆಚರಣೆಗಳ ಮೂಲ ಉದ್ದೇಶ ಒಂದೇ ಆಗಿದ್ದರೂ ಆಚರಣೆಯ ರೀತಿಗಳಲ್ಲಿ, ಆಚರಣೆಯ ಕಾಲಗಳಲ್ಲಿ ಇಲ್ಲವೆ, ಆಚರಣೆಯ ಹೆಸರುಗಳಲ್ಲಿ ವ್ಯತ್ಯಾಸಗಳಿವೆ. ಪ್ರಾದೇಶಿಕವಾದ

ಮತ್ತು ಮಳೆಬೆಳೆಗಳಿಗೆ ಸಂಬಂಧಿಸಿದಂತೆ ಕಾಲಮಾನದ ವ್ಯತ್ಯಾಸಗಳು ಇದಕ್ಕೆ ಮುಖ್ಯ ಕಾರಣವೆಂಬುದನ್ನು ಗುರುತಿಸಬಹುದಾಗಿದೆ. ಜೊತೆಗೆ ಜನಾಂಗೀಯವಾದ ವ್ಯತ್ಯಾಸಗಳೂ ಕಂಡುಬರುತ್ತವೆ.

ಮಾನವ ಶಾಸ್ತ್ರಜ್ಞರು ಆಚರಣೆಗಳನ್ನು ಮೂರು ಮುಖ್ಯ ವಿಭಾಗಗಳನ್ನಾಗಿ ಮಾಡಿಕೊಂಡಿರುವ ಬಗ್ಗೆ ಕನ್ನಡ ವಿಶ್ವಕೋಶದಲ್ಲಿ ವಿವರಣೆಯಿದೆ.[೧೩]

೧. ಧಾರ್ಮಿಕ ಆಚರಣೆ

೨. ಮಾಂತ್ರಿಕ ಆಚರಣೆ

೩. ಮಾಟ, ಮೋಡಿ ಇತ್ಯಾದಿ.

ಈ ಮೂರು ಬಗೆಗಳೂ ಒಂದೇ ಸಂಸ್ಕೃತಿಯಲ್ಲಿ ಕಂಡು ಬರಬಹುದು. ಜನತೆಯ ಜೀವನ ದೃಷ್ಟಿ, ನಂಬಿಕೆ, ಆಶೋತ್ತರಗಳು ಸ್ಪಷ್ಟವಾಗಿ ಈ ಆಚರಣೆಗಳಲ್ಲಿ ಕಂಡು ಬರುತ್ತವೆ.

ಆಚರಣೆಗಳ ಈ ಮೂರೂ ವಿಭಾಗಗಳನ್ನು ಮಾನವನ ಬದುಕಿಗೆ ಸಂಬಂಧಿಸಿದಂತೆ ಪುನಃ ನಾಲ್ಕು ವರ್ಗಗಳಲ್ಲಿ ಈ ಕೆಳಗಿನಂತೆ ವಿಭಾಗಿಸಿಕೊಳ್ಳಬಹುದೆಂದೂ ಕನ್ನಡ ವಿಶ್ವಕೋಶದಲ್ಲಿ ತಿಳಿಸಿರುವುದನ್ನು ಗಮನಿಸಬೇಕು.[೧೪]

ಅವುಗಳೆಂದರೆ

೧. ಮಾನವನ ಬದುಕಿಗೆ ಅವನ ಭಾವ ಪ್ರಪಂಚಕ್ಕೆ ಸಂಬಂಧಿಸಿದ ಆಚರಣೆಗಳು

೨. ನೈಸರ್ಗಿಕ ಕ್ರಿಯೆಗಳಿಗೆ ಸಂಬಂಧಿಸಿದ ಆಚರಣೆಗಳು.

೩. ಆರ್ಥಿಕ ಚಟುವಟಿಕೆಗೆ ಸಂಬಂಧಿಸಿದ ಆಚರಣೆಗಳು

೪. ಸಾಮಾಜಿಕ ರಚನೆಗೆ ಸಂಬಂಧಿಸಿದ ಆಚರಣೆಗಳು.

ಹೀಗೆ ಆಚರಣೆಗಳು ಹುಟ್ಟಿಕೊಳ್ಳಬಹುದಾದ ಬೇರೆ ಬೇರೆ ಮೂಲದ ಸಾಧ್ಯತೆಗಳನ್ನು ಗುರುತಿಸಬಹುದು.

ಹಾಗೆಯೇ "ಮಾನವ ಒಂದೇ ದೈವದ ಕಟ್ಟಿಗೆ ಒಳಗಾಗಬೇಕಾದ ಅಗತ್ಯವಿಲ್ಲ. ದೇವ ಮಹಾ ದೇವರುಗಳ ಸಾಲಿನಲ್ಲಿ ಅನೇಕ ಕ್ಷುದ್ರದೇವತೆಗಳನ್ನೂ ಶಕ್ತಿಗಳನ್ನೂ ಅರ್ಚಿಸುವ ಸ್ವಾತಂತ್ರ್ಯ ಅವನಿಗಿದೆ. ಈ ಸಂಬಂಧವಾದ ಅನೇಕ ಆಚರಣೆಗಳನ್ನು ಆತ ನಡೆಸುತ್ತಾನೆ. ಹರಸೇವೆ, ಹರಿಸೇವೆಗಳನ್ನು ಮಾಡುವಂತೆಯೇ ಸಣ್ಣ ಪುಟ್ಟ ದೇವತೆಗಳ ಹೆಸರಿನಲ್ಲಿ ಅನೇಕ ಆಚರಣೆಗಳನ್ನು ನಡೆಸುತ್ತಾನೆ. ಹರಕೆಯ ಕುರಿಗಳನ್ನು ಕಡಿಯುತ್ತಾನೆ. ಮಾನವ ಬಲಿಯೂ ಇದ್ದಿತೆನ್ನುವುದಕ್ಕೆ ಆಧಾರಗಳಿವೆ"[೧೫] ಎಂಬುದಾಗಿಯೂ ಇರುವ ವಿವರಣೆ ಗಮನಾರ್ಹವಾಗಿದೆ.

ಮುಂದುವರಿದು ಮಾನವನ ಬದುಕಿನಲ್ಲಿ ಹುಟ್ಟು, ಪ್ರೌಢಾವಸ್ಥೆ, ಮದುವೆ, ಮರಣಗಳಿಗೆ ಸಂಬಂಧಿಸಿದ ಹಾಗೂ ಪ್ರಕೃತಿ ವಿಸ್ಮಯಗಳಿಗೆ ಸಂಬಂಧಿಸಿದ ಆಚರಣೆಗಳೂ ಅನೇಕ ಬಗೆಯಲ್ಲಿವೆ ಎಂಬುದನ್ನು ಈ ರೀತಿ ವಿವರಿಸಲಾಗಿದೆ. ಬಸುರಿ, ಬಾಣಂತಿಯರಿಗೆ ನಡೆಸುವ ಶಾಸ್ತ್ರಗಳೆಲ್ಲ ಆಚರಣೆಗಳೇ. ಗುಣಿಗಿಕ್ಕುವ ಶಾಸ್ತ್ರ, ಹೆಸರಿಡುವ ಶಾಸ್ತ್ರಗಳಂತೆಯೇ ಋತುಮತಿಯಾದ ಹೆಣ್ಣು ಮಗಳಿಗೆ ಮಾಡುವ ಗುಡಿಲು ಕೂಡುವ ಶಾಸ್ತ್ರ, ಮದುವೆಯಲ್ಲಿ ನಡೆಯುವ ಶಾಸ್ತ್ರ, ನೀರು ತರುವ ಶಾಸ್ತ್ರ, ಭತ್ತ ಕುಟ್ಟುವ, ಭೂತ ಉಣ್ಣುವ, ಬಾಗಿಲು ತಡೆಯುವ, ಹೂವಿನ ಚೆಂಡಾಡುವ ಶಾಸ್ತ್ರಗಳೆಲ್ಲ ಬಗೆಬಗೆಯ ಆಚರಣೆಗಳೇ.

ಶವಸಂಸ್ಕಾರಗಳಲ್ಲೂ ಅನೇಕ ಆಚರಣೆಗಳನ್ನು ಕಾಣಬಹುದು. ಹೂಳುವ, ಸುಡುವ, ಕಲ್ಲಿಗೆಸೆಯುವ ಸಂಪ್ರದಾಯಗಳ ಹಿನ್ನೆಲೆಯಲ್ಲಿ ನಡೆಸುವ ಆಚರಣೆಗಳು ಅನೇಕವಾಗಿವೆ. ಮಳೆಯಾಗದಿದ್ದರೆ ಹೂತ ಹೆಣವನ್ನು ಹೊರ ತೆಗೆದು ನಡೆಸುವ ಕ್ರಿಯೆಗಳು, ಸುಟ್ಟ ಬೂದಿ, ಸತ್ತವರೊಡನೆ ಹೂತ ವಸ್ತ್ರ, ಆಭರಣ, ವಸ್ತು ವಿಶೇಷಗಳನ್ನು ಪಡೆಯುವ ಆಚರಣೆಗಳು ಜನಾಂಗದಿಂದ ಜನಾಂಗಕ್ಕೆ ಅನೇಕ ವಿಧವಾಗಿ ಹಬ್ಬಿವೆ.

ಕಾಡುಗೊಲ್ಲರು ಋತುಮತಿಯಾದ ಹೆಣ್ಣುಮಕ್ಕಳನ್ನು ಬಾಣಂತಿಯರನ್ನು ಹಟ್ಟಿಗೆ ದೂರವಾಗಿ ಬೆಟ್ಟದ ತಪ್ಪಲಲ್ಲಿ ಗುಡಿಸಲು ಹಾಕಿ ಬಿಡುವ ಆಚರಣೆ ವಿಚಿತ್ರವಾದುದು. ಅಂಥ ಹೆಣ್ಣಿಗೆ ಊಟವನ್ನು ಕೊಡಬೇಕಾದರೂ ದೊಡ್ಡ ಗಳುವಿನಿಂದ ಒಳಗೆ ನೂಕುವ ಪದ್ಧತಿಯಿದೆ. ಯುರೋಪಿನಲ್ಲಿ ಬಾಣಂತಿ ಗೊತ್ತಾದ ದಿನಗಳಲ್ಲಿ ಚರ್ಚಿಗೆ ಹೋಗಿ ಶುದ್ಧಳಾಗಿ ಬರದಿದ್ದರೆ ಅಪವಿತ್ರಳು. ಆ ಮಧ್ಯೆ ಅನೇಕ ಅನರ್ಥಗಳು ಸಂಭವಿಸಬಹುದು. ಕಿನ್ನರಿಯರು ಬಂದು ಅವಳನ್ನು ಹೊತ್ತುಕೊಂಡು ಹೋಗಬಹುದು. ಅವಳ ಮಗುವನ್ನು ಅಪಹರಿಸಿ ಮಾಯದ ಶಿಶುವನ್ನು ತೊಟ್ಟಿಲಲ್ಲಿ ಬಿಡಬಹುದು. ಹೀಗೆ ಬಿಟ್ಟರೆಂದು ಭಾವಿಸಲಾದ ಅನೇಕ ಸಂದರ್ಭಗಳಲ್ಲಿ ಪಸುಳೆಗಳಿಗೆ ಕ್ರೂರ ಹಿಂಸೆಯನ್ನು ಕೊಟ್ಟು ನ್ಯಾಯಾಲಯಕ್ಕೆ ದೂರು ಹೊತ್ತ ಪ್ರಸಂಗಗಳೂ ಇವೆ. ತಾಯಿ ಶುದ್ಧಳಾಗಲು ನಡೆಸುವ ಆಚರಣೆ ಬಹುಮುಖ್ಯವಾದುದು"[೧೬] ಎಂಬ ಆಚರಣೆಗಳಿಗೆ ಸಂಬಂಧಿಸಿದ ಸಂಗತಿಗಳು ಅತ್ಯಂತ ರೋಚಕವಾದುದು.

"ಮರ, ನೀರು, ಗಾಳಿ, ಆಕಾಶಗಳಲ್ಲಿ ಅನೇಕ ಶಕ್ತಿಗಳಿರಬಹುದು. ಸಾಂಸ್ಕೃತಿಕ ವೀರರು, ಧಾರ್ಮಿಕ ಪುರುಷರು, ಮಹಿಮಾವಂತರು, ಪ್ರಾಣಿ ವಿಶೇಷಗಳು ಅನೇಕ ವ್ಯಕ್ತಿ ವಿಶೇಷಗಳಿಗೆ ಸಂಬಂಧಿಸಿದಂತೆ ಆಚರಣೆಗಳು ನಡೆಯಬಹುದು. ಬಸವನ ಪೂಜೆ, ಸೀಗೆಗೌರಿ ಪೂಜೆ, ತಿಂಗಳು ಮಾವನ ಪೂಜೆ, ಕೊಂತಿ ಪೂಜೆಗಳು ವಿಶಿಷ್ಟ ಆಚರಣೆಗಳು. ಧಾರ್ಮಿಕ ಪುರುಷರು,

ಕೆಲವು ಪ್ರಭುಗಳು ಆಹಾರ, ಬದುಕು, ನಿದ್ರೆ, ಲೈಂಗಿಕಕ್ರಿಯೆ ಇವುಗಳಿಗೆ ಸಂಬಂಧಿಸಿದಂತೆ ಕ್ರಮ ಬದ್ಧ ಆಚರಣೆಗಳಿಗೊಳಪಡುತ್ತಾರೆ. ಕೆಲವರಿಗೆ ಸ್ವಾಭಾವಿಕ ಮರಣ ಇಲ್ಲ. ಕೆಲವರನ್ನು ಉತ್ತರಾಧಿಕಾರಿ ಕ್ರಮದಂತೆ ಕೊಲ್ಲಬಹುದು. ವಂಶ ಪಾರಂಪರ್ಯವಾಗಿ ನೇಮಕಗೊಂಡ ಕಟುಕರು ಆ ಕಾರ್ಯವನ್ನು ಮಾಡಬಹುದು. ಸಜೀವ ಸಮಾಧಿಯಾದ ಅನೇಕ ಧಾರ್ಮಿಕ ಪುರುಷರ ನಿದರ್ಶನಗಳು ಇಂದಿಗೂ ಇವೆ. ಈ ಕ್ರಿಯೆಗಳ ಹಿನ್ನೆಲೆಯಲ್ಲಿ ವಿಶಿಷ್ಟವಾದ ಆಚರಣೆಗಳಿವೆ.

ಬೇಟೆ, ಮೀನುಗಾರಿಕೆ, ವ್ಯವಸಾಯ, ತೋಟಗಾರಿಕೆ, ಕಟ್ಟಡ, ಯುದ್ಧ, ಕಳ್ಳತನ ಮುಂತಾದುವಕ್ಕೆ ಹೊರಡುವ ಸಂದರ್ಭದಲ್ಲಿ ಉತ್ತಮ ಆಚರಣೆಗಳಿವೆ. ಅತಿಮಾನುಷ ಶಕ್ತಿಗಳು ತಮ್ಮ ಕಾರ್ಯದಲ್ಲಿ ಜಯವನ್ನು ಕೊಡಲೆಂದು ಹರಸಿಕೊಳ್ಳುವುದೇ ಅಲ್ಲದೆ ಉತ್ತಮ ಆಚರಣೆಗಳನ್ನು ನಡೆಸುವ ಪದ್ಧತಿಯೂ ಇದೆ.

ಆಚರಣೆಯ ಸಂದರ್ಭದಲ್ಲಿ ಕತ್ತಿ, ಭಲ್ಲೆ, ಬೆತ್ತ, ತ್ರಿಶೂಲ. ಖಂಡೆಯ(ಕಂಡಾಯ) ಮುಂತಾದ ಗೊತ್ತಾದ ವಸ್ತುಗಳು ಆಯುಧ ವಿಶೇಷಗಳು ಹೌದು. ಆಚರಣೆಯ ಸಾಧನಗಳೂ ಹೌದು. ಅವನ್ನು ಪೂಜಿಸದೆ ಆ ಶಕ್ತಿಯ ಆವಿಷ್ಕಾರವಿಲ್ಲ. ಕಾಡುಗೊಲ್ಲರ ಗಣಿಯನ್ನು ನುಡಿಸಿದಾಗ ದೇವರು ಮೈದುಂಬುತ್ತಾರೆ. ಕೆಲವು ವಾದ್ಯಗಳನ್ನು ನುಡಿಸಿದಾಗ ವಿಶಿಷ್ಟ ಪೀಠಗಳನ್ನೇರಿದಾಗ ದೇವಿ ಮೈ ಮೇಲೆ ಬರಬಹುದು, ಇಲ್ಲವೆ ಕ್ರಮವತ್ತಾದ ಪೂಜೆ ಮಾಡಿದ್ದರೆ ಬಲಗಡೆ ಹೂ ಕೊಡಬಹುದು. ಮುಖವಾಡಗಳೂ ಈ ಸಂದರ್ಭದಲ್ಲಿ ಬಳಕೆಯಾಗುತ್ತವೆ"[೧೭] ಎಂದು ಆಚರಣೆಗಳ ಕುರಿತಾಗಿ ನೀಡಿರುವ ಇನ್ನಷ್ಟು ವಿವರಗಳು ಕುತೂಹಲಕರವಾಗಿವೆ.

ಧಾರ್ಮಿಕ, ಮಾಂತ್ರಿಕ, ಮಾಟ-ಮೋಡಿ ಎಂಬುದಾಗಿ ಮೂರು ಮುಖವಾಗಿ ನಡೆಯುವ ಆಚರಣೆಯಲ್ಲಿ

೧. ಪ್ರಾರ್ಥನೆ,

೨. ಅರ್ಪಣೆ, ಬಲಿ

೩. ದೈಹಿಕ ಸಂಜ್ಞೆಗಳು ಮತ್ತು ಇತರ ಕ್ರಿಯೆಗಳು

ಎಂಬ ಮೂರು ಮಜಲುಗಳನ್ನೂ ಕಾಣಬಹುದು ಎಂದು ವಿದ್ವಾಂಸರು ಪಡುವ ಅಭಿಪ್ರಾಯ ಅರ್ಥಪೂರ್ಣವಾಗಿದೆ.[೧೮]

"ಹಣ್ಣುಕಾಯಿ, ಬೇಟೆಯ ವಸ್ತು, ಕಳವಿನ ವಸ್ತು ಮುಂತಾದವು ದೈವಕ್ಕೆ ಅರ್ಪಿತವಾಗುವ ವಸ್ತುಗಳು. ನಾನಾ ರೀತಿಯ ನೃತ್ಯಗಳೂ ಆಚರಣೆಗೆ ಸಂಬಂಧಿಸಿದಂತೆ

ನಡೆಯಬಹುದು. ಭೂತ ನೃತ್ಯ, ಸೋಮನ ಕುಣಿತ, ಪಕ್ಷಿ ಕುಣಿತ, ರಂಗದ ಕುಣಿತ, ವೀರಗಾಸೆ, ಲಿಂಗದ ವೀರರ ಕುಣಿತ, ಗಡ್ಡುಗರ ಕುಣಿತ, ಗೊರವರ ಕುಣಿತ, ಪೂಜಾ ಕುಣಿತ, ಕರಗ ಕುಣಿತ–ಇವೆಲ್ಲವೂ ಈ ದೃಷ್ಟಿಯಿಂದ ಗಮನಾರ್ಹ ನೃತ್ಯಗಳು.

ಮಾಟ ಮೋಡಿಗಳು ಸಾಮಾನ್ಯವಾಗಿ ವಿರೋಧಿಗಳನ್ನು ದೃಷ್ಟಿಯಲ್ಲಿಟ್ಟು ನಡೆಸುವ ಆಚರಣೆಗಳು. ಅನೇಕ ಸಂದರ್ಭಗಳಲ್ಲಿ ಮಾಟ ತಿರುಗಿ ಮನೆ ಹಾಳಾದ ಪ್ರಸಂಗಗಳೂ ಇವೆ. ಮಾಟವನ್ನು ಮುರಿಯುವ ಆಚರಣೆಗಳೂ ವಿಶೇಷವಾಗಿವೆ.

ಅನಾರೋಗ್ಯ ಆಕಸ್ಮಿಕ ಮರಣಗಳಿಗೂ ಸಂಬಂಧಿಸಿದಂತೆ ಆಚರಣೆಗಳಿವೆ. ಅನೇಕ ರೋಗಗಳ ರೂಪದಲ್ಲಿ ಕೆಲವು ದೇವತೆಗಳು ಕಾಣಿಸಿಕೊಳ್ಳಬಹುದು. ರೋಗಗಳನ್ನು ತರುವ ಬಗೆ ಮೂರು ತೆರವಾಗಿದೆ.

೧. ರೋಗಿಯಿಂದಲೊ, ಅವನ ಬಂಧುವಿನಿಂದಲೊ ಏನೋ ತಪ್ಪು ನಡಾವಳಿಯಾಗಿರಬೇಕು.

೨. ಎರಡನೆಯ ವ್ಯಕ್ತಿ ತಾನೇ ದುಷ್ಟ ಶಕ್ತಿಗಳನ್ನು ಹರಿಯಬಿಟ್ಟಿರಬಹುದು.

೩. ಇನ್ನಾವುದೋ ಶಕ್ತಿಯ ಕೈವಾಡವಿರಬಹುದು.

ಹರಕೆಯನ್ನೊ ಪೂಜೆಯನ್ನೊ ನಿಲ್ಲಿಸಿರಬಹುದು. ಇಂಥ ಸಂದರ್ಭಗಳಲ್ಲಿ ದೇವತೆಗಳನ್ನು ಬಿಡಿಸಿಕೊಳ್ಳಲು ಅವರನ್ನು ಸಂತೃಪ್ತಿಗೊಳಿಸಲು ಅನೇಕ ಆಚರಣೆಗಳಿವೆ. ಪ್ಲೇಗಿನ ಮಾರಿ, ಕಾಲರಾ ಮಾರಿ, ಸಿಡುಬಿನ ಮಾರಿಯರಿಗೂ ಆಚರಣೆಗಳು ಹುಟ್ಟಿಕೊಂಡಿವೆ.

ಕ್ಷಾಮ ಡಾಮರಗಳನ್ನು ನಿವಾರಿಸಿಕೊಳ್ಳಲು ಗಡಿಯಿಂದ ಗಡಿಗೆ ಸಾಗಿರುವ ಬರಗಲ್ಲು, ಊರಿನ ಕೊಳೆ ಕಸವನ್ನೆಲ್ಲ ದೂರ ಸಾಗಿಸಲು ಉಡುಗೋಲಜ್ಜಿ–ಹೀಗೆ ಅನೇಕ ಬಗೆಯ ಆಚರಣೆಯನ್ನು ಗುರುತಿಸಬಹುದು.

ಮನೆಕಟ್ಟುವಿಕೆ, ವ್ಯಾಪಾರ, ವ್ಯವಸಾಯ ಮುಂತಾದವುಗಳಿಗೆ ಅಡಚಣೆಗಳು ಬರದಂತೆ ಅನೇಕ ಆಚರಣೆಗಳನ್ನು ನಡೆಸುತ್ತಾರೆ. ಆರ್ಥಿಕ ಹಿನ್ನೆಲೆಯ ಆಚರಣೆಗಳೆಂದು ಪರಿಗಣಿಸಲ್ಪಡುವ ಅಪಾರ ಸಂಖ್ಯೆಯ ಕ್ರಿಯೆಗಳು ಈಗಲೂ ಜೀವಂತವಾಗಿವೆ"[೧೯] ಎಂದು ಹೇಳಿರುವ ಈ ಮೇಲಿನ ವಿವರಗಳ ಮೂಲಕ ಆಚರಣೆಗಳ ಹುಟ್ಟು, ಬೆಳವಣಿಗೆ ಮತ್ತು ವ್ಯಾಪ್ತಿಯನ್ನು ಮನದಟ್ಟುಮಾಡಿಕೊಳ್ಳಬಹುದಾಗಿದೆ. ಆಚರಣೆಗಳು ಬೇರೆ ಬೇರೆ ನೆಲೆಗಳಲ್ಲಿ, ಬೇರೆ ಬೇರೆ ಸಂದರ್ಭಗಳಲ್ಲಿ ಮತ್ತು ಬೇರೆ ಬೇರೆ ಉದ್ದೇಶಗಳ ಈಡೇರಿಕೆಗಾಗಿ ಹುಟ್ಟಿಕೊಂಡಿವೆ ಮತ್ತು ಹುಟ್ಟಿಕೊಳ್ಳುತ್ತವೆ ಎಂಬುದು ಇದರಿಂದ ಬಹಳಷ್ಟು ಸ್ಪಷ್ಟವಾಗುತ್ತದೆ.

ಒಟ್ಟಿನಲ್ಲಿ ಮನುಷ್ಯ ರೂಢಿಸಿಕೊಂಡು ಬಂದಿರುವ ಎಲ್ಲ ರೀತಿಯ ಆಚರಣೆಗಳ ಸ್ವರೂಪವನ್ನು ಕ್ರೋಢೀಕರಿಸಿ ಸ್ಥೂಲವಾಗಿ ಹೇಳುವುದಾದರೆ ಆಚರಣೆಗಳನ್ನು ಮುಖ್ಯವಾಗಿ ಮೂರು ರೀತಿಯಲ್ಲಿ ವರ್ಗೀಕರಿಸಬಹುದಾಗಿದೆ.

ಮೊದಲನೆಯದಾಗಿ **ಜೀವನಾವರ್ತನ ಆಚರಣೆಗಳು**

ಎರಡನೆಯದಾಗಿ **ವಾರ್ಷಿಕಾವರ್ತನದ ಆಚರಣೆಗಳು**

ಮೂರನೆಯದಾಗಿ **ಸಾಂದರ್ಭಿಕ ಆಚರಣೆಗಳು**

ಜೀವನಾವರ್ತನ ಆಚರಣೆಗಳೆಂದರೆ ಮುಖ್ಯವಾಗಿ ವ್ಯಕ್ತಿಯ ಹುಟ್ಟಿನಿಂದ ಸಾವಿನವರೆಗಿನ ಜೀವಮಾನದ ಉದ್ದಕ್ಕೂ ಆಚರಿಸುವ ಆಚರಣೆಗಳು. ಉದಾಹರಣೆಗೆ–ನಾಮಕರಣ, ಉಪನಯನ, ವಿವಾಹ, ಅಂತ್ಯಸಂಸ್ಕಾರ ಇತ್ಯಾದಿಗಳು.

ವಾರ್ಷಿಕಾವರ್ತನದ ಆಚರಣೆಗಳೆಂದರೆ ಪ್ರತಿವರ್ಷ ಪುನರಾವರ್ತನೆಯ ನೆಲೆಯಲ್ಲಿ ಆಚರಿಸುವಂತಹವುಗಳು. ಉದಾಹರಣೆಗೆ–ನಾಗರಪಂಚಮಿ, ಮಕರ ಸಂಕ್ರಮಣ, ದೀಪಾವಳಿ, ಗಣೇಶ ಚತುರ್ಥಿ, ಶಿವರಾತ್ರಿ, ಕೃಷ್ಣಾಷ್ಟಮಿ – ಹೀಗೆ ಬೇರೆ ಬೇರೆ ನೆಲೆಗಳಲ್ಲಿ ನೂರಾರು ಆಚರಣೆಗಳನ್ನು ಗುರುತಿಸಬಹುದಾಗಿದೆ.

ಸಾಂದರ್ಭಿಕ ಆಚರಣೆಗಳೆಂದರೆ ಈಗಾಗಲೇ ತಿಳಿಸಿದ ಹಾಗೆ ಮನೆಕಟ್ಟುವಾಗ, ವ್ಯಾಪಾರಕ್ಕೆ ಇಳಿಯುವಾಗ, ಕ್ಷಾಮ ಡಾಮರುಗಳು ಬಂದಾಗ, ರೋಗ ರುಜಿನಗಳು ಬಂದಾಗ, ಮಾಟ ಮೋಡಿ ಮಾಡಬೇಕೆಂದಾಗ–ಹೀಗೆ ಯಾವಾಗಲಾದರೂ ಸಂದರ್ಭ ಬಂದಾಗ ಮಾಡುವ ಆಚರಣೆಗಳು. ಈ ನೆಲೆಯ ಆಚರಣೆಗಳನ್ನು ಪರಂಪರೆಯ ನೆಲೆಯಿಂದ ಅನಿವಾರ್ಯವಾಗಿ ಆಚರಿಸಬೇಕಾದ ಅಗತ್ಯ ಇರುವುದು ಕಂಡು ಬರುವುದಿಲ್ಲ.

ಕನ್ನಡ ವಿಶ್ವಕೋಶದಲ್ಲಿ ಆಚರಣೆಗೆ ನೀಡಿರುವ ವಿಸ್ತೃತ ಅರ್ಥ ವಿವರಣೆಗಳನ್ನು ಗಮನದಲ್ಲಿಟ್ಟುಕೊಂಡು ಹೇಳುವುದಾದರೆ ನಾವು ಬಳಸುವ ಸಾಕಷ್ಟು ವಸ್ತು ಪರಿಕರಗಳೂ ಸಾಧನ ಸಲಕರಣಗಳೂ 'ಪವಿತ್ರ ವಸ್ತು' ಎಂಬರ್ಥದಲ್ಲಿ ಆಚರಣೆಗಳಲ್ಲಿ ಒಳಗಾಗುವುದು ತಿಳಿಯುತ್ತದೆ. ಇದರರ್ಥ ಹೆಚ್ಚಿನ ಆಚರಣೆಗಳು ಧಾರ್ಮಿಕ ಉದ್ದೇಶದ ಸಾಧನೆಗಾಗಿಯಾದರೂ ಇದನ್ನು ಸಾಧಿಸಿಕೊಳ್ಳುವಲ್ಲಿ ಲೌಕಿಕ ಜಗತ್ತಿನ ವಸ್ತು ಪರಿಕರಗಳಲ್ಲಿ ಕಂಡು ಕೊಳ್ಳುವ ಒಂದು ಪ್ರಯತ್ನ ಗಮನಾರ್ಹವಾದುದು. ಅದು ಗಿಡ ಮರಗಳಿರಬಹುದು, ಪ್ರಾಣಿ ಪಕ್ಷಿಗಳಿರಬಹುದು, ನೆಲ, ನೀರು, ಗಾಳಿ, ಬೆಂಕಿಗಳಿರಬಹುದು, ಬೇಟೆಯ ವಸ್ತುಗಳು, ಉಳುಮೆಯ ಸಾಧನಗಳು, ತಿಂಡಿ ತಿನಿಸುಗಳು, ಅಡುಗೆ ಪದಾರ್ಥಗಳಿರಬಹುದು, ಇಲ್ಲವೆ ಪಾತ್ರೆ ಪಗಾರಗಳಿರಬಹುದು–

ಹೀಗೆ ಆಚರಣೆಗಳಲ್ಲಿ ಪ್ರಕೃತಿ ಸಹಜವಾದವು ಮತ್ತು ಮನುಷ್ಯ ಸೃಜನವಾದವುಗಳು ಎಲ್ಲವೂ ಬಳಕೆಯಾಗುವುದು ಕಂಡುಬರುತ್ತದೆ.

ಆಚರಣೆಗಳು ಕೇವಲ ಆರಾಧನೆಯ ರೂಪದಲ್ಲಿ ಮಾತ್ರ ಇರುವುದಲ್ಲ. ಬದಲಾಗಿ ಆಚರಣೆಗಳನ್ನು ನೃತ್ಯ ಕುಣಿತ ರೂಪದಲ್ಲೂ ಅಭಿವ್ಯಕ್ತಪಡಿಸುವುದು ಸ್ಪಷ್ಟವಾಗುತ್ತದೆ. ಇದೇ ವೇಳೆ ಆಚರಣೆಗೆ ಸಂಬಂಧಿಸಿದಂತೆ ಹಾಡು, ಪ್ರಾರ್ಥನೆ, ಹರಕೆ, ನುಡಿಕಟ್ಟುಗಳನ್ನು ಹೇಳುವುದೂ ಆಚರಣೆಯ ಮತ್ತೊಂದು ರೂಪವಾಗಿ ಮಾನವ ಸಾಮಾಜದಲ್ಲಿ ಕಂಡುಬರುತ್ತದೆ.

ಸಂಸ್ಕೃತದ ಪರ್ವ ಶಬ್ದದ ತದ್ಭವ ರೂಪವೇ ಹಬ್ಬ ಎಂದು ಮೇಲೆ ಹೇಳಿದೆ. ಅಂತೆಯೇ "ಹವ್ಯ ಶಬ್ದದ ತದ್ಭವ ಹಬ್ಬ ಎಂದೂ ಆಗಬಹುದಾಗಿದೆ. ಹವ್ಯ ಎಂದರೆ – (To be offered in an oblation. An oblation or offering to the Gods,- Apte Dic.) ದೇವತೆಗಳ ಮತ್ತು ಪಿತೃಗಳ ಪ್ರೀತ್ಯರ್ಥವಾಗಿ ಕೊಡುವ ಬಲಿ, ನೈವೇದ್ಯ, ಸಮರ್ಪಣೆ ಎಂದು ಅರ್ಥ. ವ್ರತ, ನಿಯಮ, ಉಪವಾಸ, ದಾನ–ಧರ್ಮ ಮುಂತಾದ ಆಚರಣೆಗಳೆಲ್ಲ ಈ ಬಗೆಯ ಹಬ್ಬಗಳು"[೨೦] ಎಂದು ಹೇಳಲಾಗುತ್ತದೆ.

## ೨.೬: ಭಾರತದಲ್ಲಿ ಆಚರಣೆಗಳು

ಭಾರತೀಯರಲ್ಲಿ ಎಲ್ಲ ಜನಾಂಗಗಳ ಹಬ್ಬಗಳಲ್ಲಿಯೂ ಪರ್ವ ಮತ್ತು ಹಬ್ಬ ಸಂಬಂಧವಾದ ಆಚರಣೆಗಳು ಕಂಡುಬರುತ್ತವೆ. ಇವೆರಡನ್ನೂ ಒಟ್ಟಾಗಿಸಿದರೆ–ಕಾಲಮಾನ, ಋತುಮಾನ, ಉದ್ಯೋಗ, ವ್ಯವಸಾಯ, ಬೇಸಾಯ, ಭೂತ ಪಿಶಾಚಿಗಳು, ಪಿತೃಗಳು, ಪುರಾಣ ಪ್ರಸಿದ್ಧ ಪುರುಷರು ಮುಂತಾದವುಗಳನ್ನು ಕುರಿತು ಭಾರತೀಯ ಹಬ್ಬಗಳು ಹುಟ್ಟಿಕೊಂಡಿರುವಂತೆ ಕಂಡುಬರುತ್ತದೆ. ಮನುಷ್ಯನ ಮೇಲಿರುವ ದೇವಋಣ, ಪಿತೃಋಣ, ಋಷಿಋಣಗಳನ್ನು ತೀರಿಸುವ ವಿಧಾನಗಳೇ ಈ ಹಬ್ಬಗಳ ಆಚರಣೆ ಮತ್ತು ಅಣುರೇಣು, ತೃಣಕಾಷ್ಠ, ತಿರ್ಯಗ್ಜಂತು, ಪಶುಪಕ್ಷಿ, ಪ್ರಾಣಿ– ಇವೆಲ್ಲವುಗಳಲ್ಲಿಯೂ ದೇವತ್ವವನ್ನು ಕಲ್ಪಿಸಿರುವುದು ಪೂರ್ವಜರ ಬುದ್ಧಿ ವಿಶೇಷ ಎಂಬುದು ವಿದ್ವಾಂಸರ ಅಭಿಪ್ರಾಯ.[೨೧] ಭಾರತೀಯರ, ಅದರಲ್ಲಿಯೂ ವೈದಿಕ ಧರ್ಮಾನುಯಾಯಿಗಳ ಅನೇಕ ಹಬ್ಬಗಳು ಇತಿಹಾಸ ಪೂರ್ವಕಾಲದವು. ಇವುಗಳ ಹಿನ್ನೆಲೆಯಲ್ಲಿ ಪ್ರತಿಯೊಂದು ಪರ್ವಕ್ಕೂ ಒಂದೊಂದು ಬಗೆಯ ಕತೆಯಿದೆ. ಅದರ ಗರ್ಭ ಮಾತ್ರ ಯಾವುದೋ ತಾತ್ವಿಕ ವಿಚಾರದಿಂದ ತುಂಬಿರುತ್ತದೆ. ಶಾಸ್ತ್ರ ಪುರಾಣಗಳು ಇಂತಹ ಕತೆಗಳ ಸಂಕಲನವಾಗಿವೆ. ಅಂತೆಯೇ ಜಾನಪದ ಹಬ್ಬ ಆಚರಣೆಗಳೂ

ಇತಿಹಾಸ ಪೂರ್ವಕಾಲದವು ಎಂಬುದರಲ್ಲಿ ಅನುಮಾನವಿಲ್ಲ. ಇತಿಹಾಸ ಆರಂಭವಾದ ಮೇಲೆ ವೀರಪೂಜೆಗಳು ಭಾರತೀಯ ಹಬ್ಬಗಳಲ್ಲಿ ಸೇರಿಕೊಂಡವು. ವೀರರೆಂದರೆ ಕೇವಲ ಕಾದಾಳುಗಳಲ್ಲ; ದಾನವೀರ, ಧರ್ಮವೀರ, ತ್ಯಾಗವೀರ, ಸಮರವೀರ ಮುಂತಾಗಿ ಮಹಾಪುರುಷರ ಜಯಂತಿ – ಪುಣ್ಯತಿಥಿಗಳ ಆಚರಣೆ ಆರಂಭವಾದುದು ಈ ಕಾಲದಿಂದಲೇ. ಪುರಾಣದ ಕಾಲದ ಗೋಕುಲಾಷ್ಟಮಿ, ರಾಮ ನವಮಿಗಳಂತೆ, ಬುದ್ಧಜಯಂತಿ, ಮಹಾವೀರ ಜಯಂತಿ, ಶಂಕರ ಜಯಂತಿ, ಟೀಕಾಚಾರ್ಯರ ಪುಣ್ಯತಿಥಿ, ಪೈಗಂಬರ ಜಯಂತಿ, ಕ್ರಿಸ್ತ ಜಯಂತಿ, ಇತ್ತೀಚೆಗೆ ಗಾಂಧಿ ಜಯಂತಿ, ಲೋಕಮಾನ್ಯರ ಪುಣ್ಯತಿಥಿ ಇತ್ಯಾದಿಗಳೆಲ್ಲ ವೀರ ಸ್ಮಾರಕ ಪರ್ವಗಳು. ಭಾರತೀಯ ಸ್ವರಾಜ್ಯ ಪ್ರಾಪ್ತಿಯ ದಿನ, ಗಣರಾಜ್ಯದಿನ, ಮಹತ್ವದ ಘಟನೆಗಳು. ಸ್ಮಾರಕ ಉತ್ಸವಗಳು. ಇವೆಲ್ಲ ಆಧುನಿಕ ಐತಿಹಾಸಿಕ ಹಬ್ಬಗಳು. ಇವುಗಳೆಲ್ಲವುಗಳ ಸಾರವನ್ನು ನೋಡಿದರೆ, ಇಹದಲ್ಲಿ ಸವಿಬದುಕು, ಪರದಲ್ಲಿ ಸತ್ಯ ಸುಖ ಇವೆರಡೇ ಹೆಗ್ಗುರಿಗಳಾಗಿವೆ. ಈ ಗುರಿಗಳು ಮಾನವ ಪ್ರಾಣಿಗಳೆಲ್ಲರ ಕಣ್ಣೆದುರಿಗೆ ಪ್ರತಿ ದಿನವೂ ಇರುವುದು ಅಗತ್ಯವಾಗಿದೆ. ನಿತ್ಯವೂ ಸಣ್ಣ ದೊಡ್ಡ ದೇವತಾ ಪ್ರಸಂಗಗಳನ್ನು ಪ್ರಾಚೀನರು ಕಲ್ಪಿಸಿದ್ದಾರೆ. ಯಾವ ಭಾರತೀಯನೂ ನಿತ್ಯವೂ ಒಂದಿಲ್ಲೊಂದು ರೀತಿಯಲ್ಲಿ ದೇವರ ನಾಮಸ್ಮರಣೆಯನ್ನು ಮಾಡುತ್ತಲೇ ಬಂದಿದ್ದಾನೆ. ಹಿಂದುಗಳ ದೇವಪೂಜೆ, ಮಹಮ್ಮದೀಯರ ನಮಾಜ, ಕ್ರೈಸ್ತರ ಪ್ರಾರ್ಥನೆ ಇವೆಲ್ಲವೂ ಅವರವರ ಭಾವ ಭಕುತಿಗೆ ಸಂಬಂಧಿಸಿದಂತೆ ರೂಪಿಸಿಕೊಂಡ ನಿಯಮಗಳು.

## ೨.೭: ಆಚರಣೆಗಳ ಚಲನಶೀಲತೆ

ಈಗಾಗಲೇ ಹೇಳಿದಂತೆ ಎಲ್ಲ ಆಚರಣೆಗಳು ಹಬ್ಬಗಳಲ್ಲ ಎಂದಾದರೂ ಹೆಚ್ಚಿನ ಆಚರಣೆಗಳಲ್ಲಿ ಹಬ್ಬದ ಅಂಶಗಳು ಕಂಡುಬರುತ್ತವೆ. ಮಾತ್ರವಲ್ಲ, ಆಚರಣೆಗಳು ಚಲನಶೀಲ ಪ್ರವೃತ್ತಿಯವು ಎಂಬುದೂ ಸ್ಪಷ್ಟವಾಗುತ್ತದೆ. ಪರಿವರ್ತನೆ ಜಗದ ನಿಯಮ ಎಂಬಂತೆ ಆಚರಣೆಗಳೂ ಕೂಡಾ ಕಾಲದಿಂದ ಕಾಲಕ್ಕೆ ಮನುಷ್ಯನ ನಾಗರೀಕತೆಯ ಅವಸ್ಥೆಗಳನ್ನು ಅನುಸರಿಸಿಕೊಂಡು ಬದಲಾಗುತ್ತಿರುವುದು ಕಂಡುಬರುತ್ತದೆ. ಇವೆಲ್ಲ ಈ ಆಚರಣೆ–ಆರಾಧನೆ–ಉತ್ಸವ– ಸಮಾರಂಭಗಳು ಅತಿ ಪ್ರಾಚೀನ ಕಾಲದಿಂದಲೂ ಬಳಕೆಯಲ್ಲಿದ್ದವೆಂದೇ ಹೇಳಬಹುದು. ಅತ್ಯತಿ ಪ್ರಾಚೀನ ಕಾಲದಲ್ಲಿ ಮಾನವಪ್ರಾಣಿ ಹೊಟ್ಟೆಯ ಹೋರಾಟದ ಎರಡು ಕಾಲಿನ ಪ್ರಾಣಿಯಷ್ಟೆ ಆಗಿದ್ದ. ಮುಂದೆ ಜೀವನ ಸೌಕರ್ಯಗಳೊದಗಿದಂತೆ, ಅವುಗಳಿಗೆ

ಕಾರಣವಾದ ನೀರು, ನೆಲ-ಬೆಂಕಿಗಳ ಬಗೆಗೆ ಅವನಲ್ಲಿ ಕೃತಜ್ಞತೆ ಮೂಡಿರುವುದು ಸಹಜ. ಕೃತಜ್ಞತೆಗಿಂತ ಭಯದ ಪ್ರಭಾವವೇ ಅವನ ಮೇಲೆ ಹೆಚ್ಚಾಗಿ ಆದಂತೆ ಕಾಣುತ್ತದೆ. ಆ ಭಯ ನಿವಾರಣೆಗಾಗಿ ಅಂತಹ ಶಕ್ತಿಗಳನ್ನು ಪ್ರಾಣಿಗಳನ್ನು ದೇವರೆಂದು ಪೂಜಿಸತೊಡಗಿದನು. ಮೊತ್ತ ಮೊದಲಿನ ಅತಿ ಪ್ರಾಚೀನ ಕಾಲದಲ್ಲಿ ಇಲ್ಲಿಂದಲೇ ದೇವರ ಕಲ್ಪನೆ ಆರಂಭವಾಯಿತೆಂದು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ. ಮಾರಿ, ಮಸಣಿ, ಭೂತ, ಬೇತಾಳ ಮುಂತಾದ ಅದೃಶ್ಯ ಶಕ್ತಿಗಳೂ, ಹಾವು, ಹುಲಿ, ಸಿಂಹ ಇತ್ಯಾದಿ ಘಾತಕ ಪ್ರಾಣಿಗಳೂ ಇಂತಹದೇ ಬೇರೆ ದುಷ್ಟ ವಿಷಯಗಳೂ ಅಂದಿನವರ ಆರಾಧ್ಯ ದೇವತೆಗಳಾದವು. ಇಂದಿಗೂ ತೀರ ಗುಡ್ಡ ಗಾಡುಗಳಲ್ಲಿಯ ಜನರ ಹಬ್ಬಗಳ ರೀತಿನೀತಿಗಳಿಂದ ಈ ಮಾತುಗಳನ್ನು ಹೇಳಬಹುದಾಗಿದೆ. ಮುಂದೆ ಸೌಲಭ್ಯಗಳನ್ನು ಕಂಡುಕೊಂಡ ಮಾನವನಿಗೆ ಅವುಗಳನ್ನು ಒದಗಿಸಿದ ಸೃಷ್ಟಿ ಶಕ್ತಿಗಳೂ, ಪ್ರಾಣಿಗಳೂ, ಭೂಮಿ, ಮಳೆ ಮೊದಲಾದವು ಕೃತಜ್ಞತೆಯ ಪಾತ್ರಗಳಾಗಿ, ಮುಂಬರಿದ ಮಾನವನ ದೇವತೆಗಳಾಗಿರಬೇಕು. ತನ್ನ ಇಚ್ಛೆ ಅಭಿರುಚಿಗಳಿಗೆ ತಕ್ಕಂತೆ ಅವುಗಳನ್ನು ಆರಾಧಿಸುವುದೇ ಅವನ ಹಬ್ಬದ ಆಚರಣೆಗಳಾದವು.

ಹೀಗೆಯೇ ಅದೆಷ್ಟೋ ಕಾಲ ಕಳೆದ ಬಳಿಕ ಮಾನವ ಜೀವನದಲ್ಲಿ ಅದೆಷ್ಟೋ ಮಾರ್ಪಾಟುಗಳಾದವು. ಸುಖಜೀವನದ ಲಾಲಸೆ ಅವನಲ್ಲಿ ಹಿರಿದಾಯಿತು. ಆರಾಧ್ಯ ದೇವತೆಗಳ ಸಂಖ್ಯೆ ಇನ್ನೂ ಬೆಳೆಯಿತು. ಮುಂದೆ ಆರ್ಯ ದ್ರಾವಿಡರ ಇತಿಹಾಸ ಕಾಲ ಮೊದಲಾಯಿತು.

ಆರ್ಯರು ಮತಿವಂತಿಕೆಯಲ್ಲಿ ಮುಂದುವರಿದವರು. ಅವರಿಗೆ ಸುಸಂಸ್ಕೃತ ದ್ರಾವಿಡರ ಜೊತೆಯೂ ಆಯಿತು. ಮೊದಲಿನ ಯುಗಗಳ ಹಿನ್ನೆಲೆಯಲ್ಲಿ ಕತೆಗಳನ್ನೇ ಕಟ್ಟಿದರು. ಅವುಗಳನ್ನು ಭಕ್ತಿರೂಪದಿಂದ ಜನಸಾಮಾನ್ಯರ ತಲೆಯಲ್ಲಿ ತುಂಬಿದರು. ಆ ಕಟ್ಟು ಕತೆಗಳೇ ಅನೇಕ ಪುರಾಣಗಳಾಗಿರಬೇಕು.

ಆರ್ಯರು ಸುಮೇರು, ನೈಲ ಸಂಸ್ಕೃತಿಗಳ ಪರಿಚಯವುಳ್ಳವರು. ಗ್ರೀಕ ಸಂಸ್ಕೃತಿಯನ್ನೂ ಅಳವಡಿಸಿಕೊಂಡಿದ್ದರು. ಇವೆಲ್ಲವುಗಳ ಪರಿಣಾಮವಾಗಿ ಅವರು ಭೂಗೋಲ-ಖಗೋಲ ಇವೆರಡನ್ನೂ ಆಳವಾಗಿ ಅರಿಯಲು ಪ್ರಯತ್ನಿಸಿದರು. ಅರಿವು ಹೆಚ್ಚಾದಂತೆ ದೇವ-ಧರ್ಮಗಳ ಕಲ್ಪನೆಗಳಲ್ಲಿ ಮಾರ್ಪಾಟುಗಳೂ ಆಗಿರಬೇಕು.

ಇಂದ್ರ, ಅಗ್ನಿ, ವರುಣ, ಸೂರ್ಯ ಮುಂತಾಗಿ ಮೊತ್ತಮೊದಲಿನ ದೇವತೆಗಳು. ಮಾನವನ ಕೃತಜ್ಞತೆಯೇ ಇವುಗಳ ಸೃಷ್ಟಿಗೆ ಕಾರಣ. ಮುಂದೆ ಬ್ರಹ್ಮ, ಹರಿ, ಹರ, ಕಾರ್ತಿಕೇಯ ದೇವರುಗಳಿಗೆ ಪ್ರಾಮುಖ್ಯತೆ ದೊರೆಯಿತು. ಸೃಷ್ಟಿ, ಸ್ಥಿತಿ, ಲಯ ಯುದ್ಧಗಳಿಗೆ ಅವರು

ಅಧಿದೇವತೆಗಳಾದರು. ಈ ದೇವರುಗಳ ಹೆಂಡತಿಯರಾಗಿ ಸರಸ್ವತಿ, ಲಕ್ಷ್ಮಿ, ಪಾರ್ವತಿಯರ ಕಲ್ಪನೆಯಾದುದು. ಆಮೇಲೆ ಬ್ರಹ್ಮ- ಸರಸ್ವತಿ ವಿದ್ಯಾಧಿದೇವತೆಗಳು; ಹರಿ-ಲಕ್ಷ್ಮಿ ಸ್ಥಿತಿಸಂಪತ್ತುಗಳ ಸಂವರ್ಧಕರು; ಹರ -ಪಾರ್ವತಿಯರು ರುದ್ರ ಮೂರ್ತಿಗಳು-ಲಯಕರ್ತರು. ಈ ಕಾರಣದಿಂದಲೇ ಪಾರ್ವತಿದೇವಿಯನ್ನು ದುರ್ಗಾಭದ್ರಕಾಲೀ ಮುಂತಾದ ಭೀಕರ ರೂಪದಲ್ಲಿ ಚಿತ್ರಿಸಿದರು. ಈ ದೇವಿಯರ ಪೂಜೆಗಳೂ ಹಬ್ಬಗಳೂ ಕಾಲಾಂತರದಲ್ಲಿ ಬಳಕೆಯಲ್ಲಿ ಬಂದುವು. ಭವ್ಯ ದೇವಾಲಯಗಳು ಈ ಎಲ್ಲ ದೇವ ದೇವತೆಗಳ ಸಲುವಾಗಿ ನಿರ್ಮಿತವಾಗಿವೆ.

ಆರಂಭದಲ್ಲಿ ಇಂದ್ರ, ಬ್ರಹ್ಮ, ಸೂರ್ಯರಿಗೂ ದೇವ ಮಂದಿರಗಳಿದ್ದ ಬಗ್ಗೆ ಉಲ್ಲೇಖಗಳು ಸಿಗುತ್ತವೆ. ಬರಬರುತ್ತ ಅವೇಕೋ ಮಾಯವಾದವು. ಆದರೂ ಅವುಗಳ ಬಯಲು ಪೂಜೆ ಇಂದಿಗೂ ನಡೆಯುತ್ತಿದೆ. ಸೂರ್ಯನಿಗೆ ಅರ್ಘ್ಯ ಪ್ರದಾನ ನಿತ್ಯವೂ ನಡೆಯುವ ಸೇವೆ. ಗೋಕುಲದಲ್ಲಿ ಇಂದ್ರನ ಪೂಜೆಯನ್ನು ಕೃಷ್ಣ ತಪ್ಪಿಸಿದನೆಂದು ಪುರಾಣದ ಆಖ್ಯಾಯಿಕೆ. ಗೋಕುಲದ ಗೋಪಾಲರು ಗೋ-ಸಂಪತ್ತಿನಿಂದಲೇ ಬದುಕುವವರು. ಗೋವರ್ಧನ ಪರ್ವತ ಅವರ ಗೋವುಗಳ ಹುಲ್ಲುಗಾವಲು. ಇಂದ್ರನ ದಯೆಯಿಂದ ಮಳೆ ಸುರಿಯುತ್ತದೆ; ಅದರಿಂದ ಹುಲ್ಲುಗಾವಲು ಸಮೃದ್ಧವಾಗುತ್ತದೆ-ಎಂಬ ಕಾರಣದಿಂದ ಗೋಪಾಲರು ಪ್ರತಿ ವರ್ಷ ಇಂದ್ರನನ್ನು ಪೂಜಿಸುತ್ತಿದ್ದರು. ಕೃಷ್ಣನಿಗೆ ಇದು ಸರಿಬರಲಿಲ್ಲ. ಇಂದ್ರನ ಬದಲು ಗೋವರ್ಧನವನ್ನೇ ಪೂಜಿಸುವಂತೆ ಮಾಡಿದ. ಇದರಿಂದ ಇಂದ್ರನಿಗೆ ವಿಪರೀತ ಕೋಪ ಬಂದಿತು. ಗೋಕುಲದ ಮೇಲೆ ಮುಸಲಧಾರೆಯಾಗಿ ಮಳೆಗರೆದ. ಕೃಷ್ಣ ಕಿರುಬೆರಳಿನಿಂದ ಗೋವರ್ಧನವನ್ನು ಎತ್ತಿ ಹಿಡಿದ. ಗೋಪಾಲಕರನ್ನು ಕಾಪಾಡಿದ. ಇದೇ ರೀತಿಯಲ್ಲಿ ಪರ್ವತ ಮೊದಲಾದವುಗಳ ಪೂಜೆ ಆರಂಭವಾಗಿರಬೇಕು. ಹಳೆಯ ಹಬ್ಬಗಳು ಕಣ್ಮರೆಯಾಗಿ ಅವುಗಳಿಗೇ ಹೊಸ ರೂಪಗಳು ಹೀಗೆ ಬಂದಿರಬೇಕು. ದೇವರುಗಳ ಕಲ್ಪನೆ- ಆಚರಣೆಗಳು ಹೀಗೆ ಬದಲಾಗುತ್ತ ಬಂದಿರಬೇಕು ಎಂದು ವಿದ್ವಾಂಸರು ಊಹಿಸುತ್ತಾರೆ. ಅಂದರೆ ಆಚರಣೆಗಳು ಮನುಷ್ಯನ ಜೀವನ ವಿಧಾನದ ಬದಲಾವಣೆಯನ್ನು ಹೊಂದಿಕೊಂಡು ಬದಲಾಗುತ್ತ ಬಂದಿವೆ. ಅಂತೆಯೇ ಮುಖ್ಯವಾಗಿ ಧಾರ್ಮಿಕ ನಂಬಿಕೆಗಳು ಆಚರಣೆಗಳ ಹಿಂದೆ ಕೆಲಸ ಮಾಡುವುದು ಕಂಡುಬರುತ್ತದೆ.

ಈ ಹಿನ್ನೆಲೆಯಲ್ಲಿ "ದೈಹಿಕ ಆವಶ್ಯಕತೆಗಳಿಗನುಗುಣವಾಗಿ ನಡೆಸುವ ನೈಸರ್ಗಿಕ ಕ್ರಿಯೆಗಳು ಆಚರಣೆಗಳಾಗುವುದಿಲ್ಲ. ದೇಹಶುದ್ಧಿಗಾಗಿ ಮೀಯುದಕ್ಕೂ ಪವಿತ್ರ ಉದ್ದೇಶಕ್ಕಾಗಿ ಮಾಡುವ ದಿವ್ಯಸ್ನಾನಕ್ಕೂ ಅಂತರವನ್ನು ಗುರುತಿಸಿ ಧಾರ್ಮಿಕ ಆಚರಣೆಯನ್ನು

ಸ್ಪಷ್ಟಪಡಿಸಿಕೊಳ್ಳಬಹುದು”[೨೨] ಎಂಬ ಮಾತನ್ನು ಲಕ್ಷಿಸಬಹುದು. ಇದರರ್ಥ ದಿನನಿತ್ಯದ ಚಟುವಟಿಕೆಗಳು ಆಚರಣೆಗಳಾಗುವುದಿಲ್ಲ. ಬದಲಾಗಿ ಆಚರಣೆಗಳು ಪವಿತ್ರವಾದ ಉದ್ದೇಶವನ್ನು ಹೊಂದಿದ್ದು ನಿರ್ದಿಷ್ಟ ಕಾಲ ಸಂದರ್ಭದಲ್ಲಿ ಮಾತ್ರ ಆಚರಿಸುವಂತದ್ದಾಗಿರಬೇಕು. ಅಂತಹ ಚಟುವಟಿಕೆಗಳು ಆಚರಣೆಗಳೆಂದು ಗುರುತಿಸಲ್ಪಡುತ್ತವೆ. ಅಂದರೆ “ಆಚರಣೆಗಳು ಕ್ರಿಯಾರೂಪಿಗಳಾಗಿರುತ್ತವೆಯಾದರೂ ಮನುಷ್ಯನೆಸಗುವ ಪ್ರತಿಯೊಂದು ಕ್ರಿಯೆಯನ್ನು ಆಚರಣೆಯೆನ್ನಲಾಗುವುದಿಲ್ಲ”[೨೩] ಎಂಬ ಮಾತು ಅರ್ಥವತ್ತಾಗಿದೆ.

ಆಧುನಿಕ ಮತಧರ್ಮಗಳು, ಪರಂಪರಾಗತ ನಂಬಿಕೆ ಮತ್ತು ಆಚರಣೆಗಳ ಮೇಲೆಯೇ ತಮ್ಮ ಅಸ್ತಿತ್ವವನ್ನು ಉಳಿಸಿಕೊಂಡಿರುವ ಬಗ್ಗೆ ವಿಶ್ವಕೋಶದಲ್ಲಿ ಸಮ್ಮತವಾಗುವ ವಿವರ ಈ ರೀತಿಯಿದೆ–“ಹಳೆಯ ಮತಗಳಲ್ಲಿ ಪುರಾಣಗಳು, ಐತಿಹ್ಯಗಳು ನಂಬಿಕೆಯ ಸ್ಥಾನದಲ್ಲಿ ನಿಲ್ಲುತ್ತವೆ. ಆಚರಣೆಗಳು ಒಂದು ರೀತಿಯಲ್ಲಿ ಪುರಾಣಗಳ ಹುಟ್ಟಿಗೆ ಮೂಲ ಕಾರಣವೆನಿಸಿದರೆ, ಅನೇಕ ಪುರಾಣಗಳ ಆಧಾರದ ಮೇಲೆ ಆಚರಣೆಗಳು ಹುಟ್ಟಿಕೊಳ್ಳಬಹುದು. ವೈಯಕ್ತಿಕವಾಗಿ ನಡೆಸುವ ಆಚರಣೆಗಳು ಕೆಲವಾದರೆ ಸಾಮೂಹಿಕವಾಗಿ ನಡೆಸುವ ಆಚರಣೆಗಳೂ ಇವೆ. ಧಾರ್ಮಿಕ ಮುಖಂಡರಿಂದ ಪೂಜಾರಿ ಪುರೋಹಿತರಿಂದ ವಂಶ ಪಾರಂಪರ್ಯವಾದ ಹಕ್ಕನ್ನು ಪಡೆದವರಿಂದ ನಡೆಸುವ ಆಚಾರಗಳೂ ಕೆಲವಿವೆ. ಧಾರ್ಮಿಕ ಪಾವಿತ್ರ್ಯದ ಜೊತೆಗೆ ಅಮಾನುಷ ಶಕ್ತಿಗಳ ಭಯವೂ ಮಿಗಿಲಾದುದೇ. ಆದುದರಿಂದ ಆಚರಣೆಗಳನ್ನು ಅತ್ಯಂತ ಶ್ರದ್ಧೆಯಿಂದ ನಡೆಸಲಾಗುತ್ತದೆ. ನುಡಿಯಲ್ಲಿ ನಡೆಯಲ್ಲಿ ಸಣ್ಣ ತಪ್ಪಾದರೂ ಅನರ್ಥವಾದೀತೆಂಬ ಅಂಜಿಕೆ ಪ್ರತಿಯೊಂದು ಆಚರಣೆಯ ಹಿನ್ನೆಲೆಯಲ್ಲೂ ಇದ್ದೇ ಇರುತ್ತದೆ. ಉಪವಾಸವಿರುವುದು, ಮೀಸಲು ವಸ್ತುಗಳನ್ನು ತೆಗೆದಿಡುವುದು, ಹಿಂದಿನಿಂದ ನಡೆದು ಬಂದ ಪದ್ಧತಿಯಲ್ಲಿ ಸ್ವಲ್ಪವೂ ಲೋಪ ಬರದಂತೆ ಎಚ್ಚರ ವಹಿಸುವುದು, ಸಂಬಂಧ ಪಟ್ಟ ವ್ಯಕ್ತಿಯಿಂದಲೇ ಕ್ರಿಯೆಗಳನ್ನು ನಡೆಸುವುದು ಈ ಮುಂತಾದ ಕ್ರಮಗಳನ್ನು ಗಮನಿಸಿದಾಗ ಮತದ ಬಾಹ್ಯಾಚರಣೆಗಳಾದ ಇವು ಬದುಕಿನಲ್ಲಿ ಎಷ್ಟು ಪ್ರಮುಖ ಪಾತ್ರ ವಹಿಸುತ್ತವೆ ಎಂಬುದು ವೇದ್ಯವಾಗುತ್ತದೆ.

ವೈಯಕ್ತಿಕವಾಗಿ ನಡೆಸುವ ಧ್ಯಾನ, ತಪಸ್ಸುಗಳೇ ಬೇರೆ. ಇತರರಂತೆ ನಡೆಸುವ ಬಾಹ್ಯವಾದ ಆಚರಣೆಗಳೇ ಬೇರೆ. ದೈವದ ಪ್ರತಿನಿಧಿಗಳು ನಿಂತು ನಡೆಸುವ ಆಚರಣೆಗಳೇ ಬೇರೆ. ಅನಂತರ ಒಂದೊಂದು ಧರ್ಮಕ್ಕೂ, ಮತಕ್ಕೂ, ಪಂಥಕ್ಕೂ ಇಂಥ ಪರಿಕಾರರು ಕಾಣಿಸಿಕೊಳ್ಳುತ್ತಾರೆ. ನೀಲಗಾರರು, ಗುಡ್ಡರು, ಗೊಂದಲಿಗರು, ಗೊರವರು, ದಾಸಯ್ಯಗಳು, ಜೋಗಿಗಳು ಹುಟ್ಟಿಕೊಂಡದ್ದು ಹೀಗೆ. ಆಯಾ ದೈವಕ್ಕೆ ಸಂಬಂಧಿಸಿದ ಆಚರಣೆಗಳನ್ನು

ಗೊತ್ತಾದ ಭಕ್ತರೇ ನಡೆಸಬೇಕು. ಅದಕ್ಕೆ ಸಂಬಂಧಪಟ್ಟಂಥ ವಿಶಿಷ್ಟ ಸಾಧನ, ಹಾಡು, ಕಥೆ, ಮಂತ್ರಗಳೆಲ್ಲ ಉಂಟು. ದಾಸಯ್ಯನ ಜಾಗಟೆ, ಭವನಾಶಿ, ಶಂಖ, ಗರುಡಗಂಬಗಳು, ಜೋಗಿಯ ಸಿಂಗನಾದ, ಗುಡ್ಡನ ಕಂಸಾಳೆ, ಗೊರವನ ಡಮರುಗ, ಗೊಂದಲಿಗನ ಚೌಟಿಕೆ ಇವೆಲ್ಲ ಪವಿತ್ರ ವಸ್ತುಗಳು, ಅವರು ನಡೆಸುವ ಆಚರಣೆಯ ಸಾಧನ ಸಲಕರಣೆಗಳು, ದಾಳ ಹಾಕುವುದು, ಮಣೀವು ಹಾಕುವುದು, ಗೊಂದಲ ಹಾಕುವುದು, ಕೋಲು ಪೂಜುವುದು ಮುಂತಾದವು ಪವಿತ್ರ ಆಚರಣೆಗಳು.

ವೈಯಕ್ತಿಕವಾಗಿ ನಡೆಸುವ ಆಚರಣೆಗಳಿಗೆ ಈ ಪ್ರತಿನಿಧಿಗಳ ಅವಶ್ಯಕತೆಯಿಲ್ಲ. ಮನೆಯಲ್ಲಿ, ಹೊಲದಲ್ಲಿ, ಬಯಲಲ್ಲಿ ನಡೆಸುವ ಕ್ರಿಯೆಗಳಲ್ಲಿ ಧಾರ್ಮಿಕ ವಸ್ತುಗಳನ್ನು ಮಾತ್ರ ಬಳಸಬಹುದು. ಇಂಥ ಸಾಧನ ಸಲಕರಣಗಳು ಸಾಮಾನ್ಯವಾಗಿ ನಿತ್ಯೋಪಯೋಗಕ್ಕೆ ಬಳಸಲು ಬಾರದ ರೀತಿಯಲ್ಲೇ ಸಿದ್ಧವಾದವು. ಆದರೆ ಕಲಾತ್ಮಕವಾಗಿ ರಚಿತವಾಗಿ ಆಕರ್ಷಕವಾಗಿರಬಹುದು. ಕಂಚಿನ ಕಳಸಗಳೂ ಧೂಪ ದೀಪಾರತಿಯ ಸಾಧನಗಳೂ ಮಂಗಳಾರತಿಯ ತಟ್ಟೆಗಳೂ ಈ ದೃಷ್ಟಿಯಿಂದ ಗಮನಾರ್ಹವಾದುವು"[೨೪] ಎಂಬ ಈ ವಿವರಣೆಯಲ್ಲಿ ನಂಬಿಕೆ, ಆಚರಣೆ, ಪುರಾಣ, ಐತಿಹ್ಯ ಮೊದಲಾದ ವಿಚಾರಗಳು ಬಂದಿವೆ. ಅಂದರೆ ಆಚರಣೆಗಳು ಬೇರೆ ಬೇರೆ ಹಿನ್ನೆಲೆಯಲ್ಲಿ ಅಸ್ತಿತ್ವಕ್ಕೆ ಬಂದವುಗಳೆಂಬುದು ಇನ್ನಷ್ಟು ಸ್ಪಷ್ಟವಾಗುತ್ತದೆ. ಅಂತೆಯೇ ಆಚರಣೆಗಳಲ್ಲಿ ವೈಯಕ್ತಿಕ ಮತ್ತು ಸಾಮೂಹಿಕ ಮಹತ್ವದ ಆಚರಣೆಗಳು ಇರುವ ಬಗ್ಗೆ ವಿವರಣೆಗಳಿದ್ದು ಆಚರಣೆಗಳು ವಂಶಪಾರಂಪರ್ಯವಾಗಿ ನಡೆದುಕೊಂಡು ಬಂದವುಗಳಾಗಿವೆ ಮತ್ತು ಹಾಗೆ ಪರಂಪರೆಯಿಂದ ಬಂದ ಆಚರಣೆಗಳಲ್ಲಿ ತಪ್ಪುಗಳಾಗಬಾರದೆಂಬ ಬಲವಾದ ಮತ್ತು ಭಯದಿಂದ ಕೂಡಿದ ನಂಬಿಕೆಗಳೂ ಇರುವುದು ಆಚರಣೆಗಳ ಹುಟ್ಟು ಮತ್ತು ಮಹತ್ವದ ಬಗ್ಗೆ ಅರಿವನ್ನುಂಟು ಮಾಡುತ್ತದೆ.

ಭಾರತೀಯ ಸಂಸ್ಕೃತಿಯಲ್ಲಿ ಹಬ್ಬಹರಿದಿನಗಳಿಗೆ ಬಹಳ ಮಹತ್ವವಿದೆ. ಭಾರತ ಹಲವಾರು ಮತ ಧರ್ಮಗಳ ನೆಲೆವೀಡು. ಆದುದರಿಂದಲೇ ಜಗತ್ತಿನಲ್ಲಿ ಅತ್ಯಧಿಕ ಹಬ್ಬಗಳು ಆಚರಿಸಲ್ಪಡುವುದು ಭಾರತದಲ್ಲಿ. ಇಲ್ಲಿ ಹಲವಾರು ಕಾರಣಗಳಿಗಾಗಿ ಹಬ್ಬಗಳು ಆಚರಿಸಲ್ಪಡುತ್ತವೆ. ಹಬ್ಬ ಸಂತೋಷದ ದ್ಯೋತಕವಾದ ಆಚರಣೆ. ಮಾನವ ತನ್ನ ಸಾಧನೆಗಳಲ್ಲಿ ಸಫಲತೆಯನ್ನು ಕಂಡಾಗ ಸಂತೋಷಪಟ್ಟು, ಅದನ್ನು ಆಚರಣೆಯ ಮೂಲಕ ಪ್ರದರ್ಶಿಸಿದಾಗ ಅದು ಹಬ್ಬವಾಯಿತು. ಕೆಲವೊಂದು ಹಬ್ಬಗಳು ದುಷ್ಟ ಶಕ್ತಿಗಳನ್ನು ದಮನ ಮಾಡಿದುದರ ಜ್ಞಾಪಕಾರ್ಥವಾಗಿ ಆಚರಣೆಯಲ್ಲಿ ಬಂದಿರಬಹುದು; ವಿಜಯೋತ್ಸವಗಳಾಗಿರಬಹುದು;

ಮಹಾಪುರುಷರ ಹುಟ್ಟು ಹಬ್ಬಗಳಾಗಿರಬಹುದು; ಈ ಹಬ್ಬಗಳಿಗೆಲ್ಲ ಒಂದೊಂದು ಐತಿಹ್ಯವಿದೆ. ಪುರಾಣಕತೆಗಳ ಆಧಾರವಿದೆ. ಕಾಲಕ್ರಮೇಣ ಐತಿಹ್ಯಗಳು ಮರೆತು ಹೋಗುತ್ತವೆ. ಆಗ ಅನುಕರಣೆಯಿಂದ ಹಬ್ಬಗಳ ಆಚರಣೆ ಮುಂದುವರಿಯುತ್ತದೆ. ನಮ್ಮ ಆಚರಣೆಯಲ್ಲಿ ಎಲ್ಲವೂ ಹಬ್ಬಗಳಲ್ಲ. ಕೆಲವೊಂದು ವ್ರತಗಳೂ ಹಬ್ಬಗಳೆಂದೇ ಭಾವಿಸಲ್ಪಡುತ್ತವೆ. ವ್ರತದ ಅವಧಿ ಮುಗಿದ ನಂತರ ಹಬ್ಬ ಆಚರಿಸಲ್ಪಡುತ್ತದೆ. ವೈಷ್ಣವ ಸಂಪ್ರದಾಯದ ಬಹಳ ಪ್ರಾಮುಖ್ಯವಾದ ವ್ರತ ಏಕಾದಶಿ. ಏಕಾದಶಿಯನ್ನು ಆಚರಿಸಿದ ಬಳಿಕ ದ್ವಾದಶಿಯನ್ನು ಆಚರಿಸಲಾಗುತ್ತದೆ. ಮಾವಿನ ತಳಿರು ತೋರಣಗಳಿಂದ ಮನೆಯನ್ನು ಅಲಂಕರಿಸುವುದು ಪೂಜೆ ಪುರಸ್ಕಾರಗಳನ್ನು ನಡೆಸುವುದು. ವಿಶೇಷ ತಿಂಡಿಗಳನ್ನು ಮಾಡಿ ಮನೆಯವರೆಲ್ಲ ಒಟ್ಟು ಸೇರಿ ಊಟ ಮಾಡುವುದು ಇದು ಹಬ್ಬದ ವೈಶಿಷ್ಟ್ಯ. ಹೀಗೆ "ಹಬ್ಬದ ಆಚರಣೆಯಲ್ಲಿ ಕಲೋಪಾಸನೆಗೂ, ಸೌಂದರ್ಯ ಪ್ರಜ್ಞೆಗೂ, ರಸಿಕತೆಗೂ, ಸಾಮಾಜಿಕ ಚೈತನ್ಯದ ಜಾಗೃತಿಗೂ ಸಾಕಷ್ಟು ಅವಕಾಶಗಳು ದೊರೆತಿವೆ"[೨೫] ಎಂಬುದಾಗಿ ವಿದ್ವಾಂಸರು ಹೇಳುವ ಮಾತಲ್ಲಿ ಸತ್ಯಾಂಶವಿದೆ. ಹಬ್ಬಗಳ ಬಗ್ಗೆ ನೀಡಿರುವ ಮೇಲಿನ ವಿವರಗಳಲ್ಲಿ ಹಲವು ಅಂಶಗಳು ಆಚರಣೆಗಳ ಹಿನ್ನೆಲೆಯಲ್ಲಿ ಗಮನಾರ್ಹವಾದದ್ದು. ಹಬ್ಬಗಳು ಜಗತ್ತಿನಾದ್ಯಂತ ಆಚರಿಸಲ್ಪಡುತ್ತವೆ; ಮತ್ತು ಬೇರೆ ಬೇರೆ ಹಬ್ಬ ಆಚರಣೆಗಳ ಹುಟ್ಟಿಗೆ ಹಲವಾರು ಕಾರಣಗಳಿರುತ್ತವೆ ಎಂಬುದು ಆಚರಣೆಗಳ ಕುರಿತಾದ ಚರ್ಚೆಗೆ ಪೂರಕವಾಗಿವೆ. ಜೊತೆಗೆ ಹಬ್ಬ ಆಚರಣೆಗಳಲ್ಲಿ ಮನುಷ್ಯನ ಮಾನಸಿಕ ಅಭಿಲಾಷೆಗಳು, ಸಾಮಾಜಿಕ ಅಗತ್ಯಗಳು ಪೂರೈಸುವ ವಿಚಾರಗಳು ಇರುತ್ತವೆ ಎಂಬ ಅಂಶಗಳು ವಿಚಾರಯೋಗ್ಯವಾದುವು.

## ೨.೮: ಆಚರಣೆ ಮತ್ತು ಧಾರ್ಮಿಕತೆ

ಹಬ್ಬ ಆಚರಣೆಗಳಿರಬಹುದು ಅಥವಾ ಇತರ ಯಾವುದೇ ಆಚರಣೆಗಳಿರಬಹುದು; ಈ ಆಚರಣೆಗಳ ಹಿಂದೆ ಒಂದು ನಂಬಿಕೆ ಕೆಲಸ ಮಾಡುತ್ತದೆ ಎಂಬ ಬಗ್ಗೆ ಈಗಾಗಲೇ ಚರ್ಚಿಸಲಾಗಿದೆ. ಈ ನಂಬಿಕೆ ಎನ್ನುವುದು ಧಾರ್ಮಿಕ ಹಿನ್ನೆಲೆಯದ್ದು ಎಂಬುದು ಮಹತ್ವದ ಸಂಗತಿ. ಹಾಗಾಗಿಯೇ ಬಹುತೇಕ ಆಚರಣೆಗಳು ಧಾರ್ಮಿಕ ಆಚರಣೆಗಳು ಎಂಬುದು ಸುಸ್ಪಷ್ಟ. ಅಂದರೆ "ಧರ್ಮ ಮತ್ತು ಹಬ್ಬಗಳಿಗೆ ನಿಕಟ ಸಂಬಂಧವಿದೆ. ಹಬ್ಬಗಳು ಧರ್ಮದ ಒಂದು ಅಂಗ ಭಾಗವಾಗಿಯೇ ಪರಿಗಣಿಸಲ್ಪಡುತ್ತವೆ. ಪುರಾಣ ಪುರುಷರಿಗೆ, ಸಂಬಂಧಪಟ್ಟಂತೆ, ಅವರ ಜೀವನ ಘಟನೆಗಳಿಗೆ ಐತಿಹ್ಯಗಳಿಗೆ ಸಂಬಂಧಪಟ್ಟಂತೆ ಆಚರಣೆಗೆ ಬಂದ ಹಬ್ಬಗಳನ್ನು ಬಿಟ್ಟರೆ

ಇನ್ನುಳಿದ ಹಬ್ಬಗಳೆಲ್ಲ ಜನಪದ ಧರ್ಮಕ್ಕೆ ಸಂಬಂಧಪಟ್ಟವುಗಳು. ಜನಪದ ಧರ್ಮ ಎನ್ನುವುದು ವಿಶಾಲಾರ್ಥದಲ್ಲಿ ಪ್ರಾದೇಶಿಕ ಮತ್ತು ಜನಾಂಗ ಬದ್ಧವಾದ ಬೇರೆ ಬೇರೆ ಜನಪದ ಜಗತ್ತುಗಳ ಆಲೋಚನೆಯ ಕ್ರಮಗಳನ್ನು, ಕ್ರಿಯೆ- ಪ್ರಕ್ರಿಯೆಗಳ ಒಟ್ಟು ಮೊತ್ತವನ್ನು ಒಳಗೊಳ್ಳುತ್ತದೆ. ಹೀಗೆ ನೋಡಿದರೆ ಹಾಡು, ಲಾವಣಿ, ಪಾಡ್ದನ, ಕವಿತೆ, ಗಾದೆ, ಒಗಟು ಈ ರೀತಿಯ ಸಾಮಾಜಿಕ ಆಚರಣೆಗಳಲ್ಲಿಯೂ, ಕುಣಿತ ಅಭಿನಯಗಳ ರಂಗ ಸಂಪ್ರದಾಯಗಳಲ್ಲಿಯೂ ಜನಪದರು ಬದುಕಿನ ಕುರಿತಂತೆ ನಡೆಸಿರುವ ಚಿಂತನೆಯಿದ್ದು ಎಲ್ಲವೂ ಜನಪದ ಧರ್ಮದ ಭಾಗಗಳೇ ಆಗುತ್ತವೆ".[೨೬] ಆಚರಣೆಗಳು ಮೂಲತಃ ಧರ್ಮದ ತಳಹದಿಯಲ್ಲಿ ಸೃಷ್ಟಿಯಾದವುಗಳು ಎಂಬುದನ್ನು ಇನ್ನಷ್ಟು ಸ್ಪಷ್ಟ ಪಡಿಸುವುದಾದರೆ ಅವು ಜನಪದ ಧರ್ಮದ ತಳಹದಿಯೆಂಬುದು ಅರ್ಥವತ್ತಾದುದು. ಇಂದು ನಾವು ಆಚರಿಸುತ್ತಿರುವ ಅದ್ಯಾವುದೇ ಹಬ್ಬ ಹರಿದಿನಗಳಿರಬಹುದು; ಜಾತ್ರೆ-ಉತ್ಸವಗಳಿರಬಹುದು; ಇವೆಲ್ಲ ಆಚರಣೆಗಳಿಗೆ ಮೂಲ ನಾಗರಿಕತೆಯ ಪೂರ್ವಕಾಲದ ಅಪ್ಪಟ ಜಾನಪದ ಯುಗದ ಆಲೋಚನೆಗಳಿಂದ ಹುಟ್ಟಿಕೊಂಡ ಆಚರಣೆಗಳೇ ಎಂಬುದನ್ನು ಅರಿತುಕೊಳ್ಳಬೇಕಾಗುತ್ತದೆ.

ಒಟ್ಟಿನಲ್ಲಿ ಆಚರಣೆಗಳು ಮಾನವ ಸಂಸ್ಕೃತಿಯ ಬೇರ್ಪಡಿಸಲಾರದ ಬಹುಮುಖ್ಯ ಘಟಕ. ಆದುದರಿಂದ ಸಂಸ್ಕೃತಿಯೊಂದರ ಪ್ರಾಚೀನತೆಯನ್ನು ತಿಳಿಯುವಲ್ಲಿ ಆಚರಣೆಗಳೂ ಬಹುಮುಖ್ಯ ಪಾತ್ರವಹಿಸುತ್ತವೆ. ಇವುಗಳನ್ನು ಜಾನಪದ ಚರಿತ್ರೆಗಳೆಂದೇ ಕರೆಯಬಹುದು. ಈ ಆಚರಣೆಗಳೂ ಮಾನವನ ಉಗಮದೊಂದಿಗೆ ಹುಟ್ಟಿಕೊಂಡು ಅವನ ಜೀವನ ವಿಧಾನ ವಿಕಾಸಗೊಂಡಂತೆ, ನಾಗರಿಕತೆ ಬದಲಾದಂತೆ ಆಚರಣೆಗಳ ಸ್ವರೂಪವೂ ಕಾಲ-ದೇಶ ಬದ್ಧವಾಗಿ ಬದಲಾಗುತ್ತಾ ಬಂದಿರಬೇಕು. ಜಾನಪದ ಸ್ವರೂಪದ ಮೂಲ ತಳಹದಿಯಲ್ಲಿ ಶಿಷ್ಟ ಸ್ವರೂಪವನ್ನು ಪಡೆದುಕೊಂಡು ಆಚರಣೆಗಳು ಇಂದಿನ ಈ ವಿಜ್ಞಾನಯುಗದಲ್ಲಿ ತಮ್ಮ ಅಸ್ತಿತ್ವವನ್ನು ತಕ್ಕಮಟ್ಟಿಗಾದರೂ ಉಳಿಸಿಕೊಂಡು ಬಂದಿರುವುದನ್ನು ಗಮನಿಸಬಹುದು.

---

ಅಡಿ ಟಿಪ್ಪಣಿ

೧. **ಕನ್ನಡ ಜಾನಪದ ವಿಶ್ವಕೋಶ:** ಸಂಪುಟ-೧: ೧೯೮೫: (ಸಂ.)ಚಂದ್ರಶೇಖರ ಕಂಬಾರ: ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು: ಪುಟ-೧೧೪

೨. **ಕನ್ನಡ ರತ್ನ ಕೋಶ:** ೧೯೮೪: ಪುಟ-೨೧

೩. **ಕನ್ನಡ-ಕನ್ನಡ-ಇಂಗ್ಲಿಷ್ ನಿಘಂಟು: ಐಬಿಎಚ್:** ೧೯೯೭: ಪುಟ-೬೭

೪. **ಕನ್ನಡ-ಕನ್ನಡ ಶಬ್ದಕೋಶ:** ೧೯೯೫: ಸಂಕೇಶ್ವರ ಪ್ರಿಂಟರ್ಸ್, ಪ್ರೈ.ಲಿ.: ಪುಟ-೫೦

೫. **ಸಂಕ್ಷಿಪ್ತ ಕನ್ನಡ ನಿಘಂಟು:** ೧೯೭೫: ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು: ಪುಟ-೭೬

೬. **ತುಳು ನಿಘಂಟು:** ಸಂಪುಟ-೧: ೧೯೮೮: ಪುಟ-೨೨೩

೭. **A Kannada-English Dictionary:** 1893: Rev. F. Kittel: Basel Mission Press, Mangalore: Page No.- 148

೮. **Bucher's Kannada-English Dictionary:** Second Edition-1994: Rev. J. Bucher: Asian Educational Services, Newdelhi: Page No.- 53

೯. **The Practical Sanskrit-English Dictionary:** Second Edition-2003: Motilal Banarsidass Publishers Private Limited, Delhi: Page No.-317

೧೦. **ಸ್ತ್ರೀ ಸಂವೇದನೆ:** ೨೦೦೭: ಶಾಂತಿ ನಾಯಕ: ಜಾನಪದ ಪ್ರಕಾಶನ, ಹೊನ್ನಾವರ: ಪುಟ-೪೧

೧೧. **ಕನ್ನಡ ಜಾನಪದ ವಿಶ್ವಕೋಶ:** ಸಂಪುಟ-೧: ೧೯೮೫: ಪೂರ್ವೋಕ್ತ: ಪುಟ-೧೧೪, ೧೧೫

೧೨. **ಭಾರತೀಯ ಹಬ್ಬಗಳು:** ೧೯೯೬: ಪಂಡಿತ ಚೆ.ಎ.ಕವಲಿ: ರಾಮಾಶ್ರಯ ಪಬ್ಲಿಕೇಶನ್ಸ್, ಧಾರವಾಡ: ಪುಟ-೨೩

೧೩. **ಕನ್ನಡ ವಿಶ್ವಕೋಶ: ಸಂಪುಟ:** ೧: ೧೯೬೯: ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ: ಪುಟ-೭೦೪, ೭೦೫

೧೪. **ಅದೇ:** ಪೂರ್ವೋಕ್ತ: ಪುಟ-೭೦೪

೧೫. **ಅದೇ:** ಪೂರ್ವೋಕ್ತ: ಪುಟ-೭೦೪

೧೬. **ಅದೇ:** ಪೂರ್ವೋಕ್ತ: ಪುಟ-೭೦೪

೧೭. **ಅದೇ:** ಪೂರ್ವೋಕ್ತ: ಪುಟ-೭೦೪

೧೮. **ಅದೇ:** ಪೂರ್ವೋಕ್ತ: ಪುಟ-೭೦೪

೧೯. **ಅದೇ:** ಪೂರ್ವೋಕ್ತ: ಪುಟ-೭೦೪, ೭೦೫

೨೦. **ಭಾರತೀಯ ಹಬ್ಬಗಳು:** ೧೯೯೬: ಪಂಡಿತ ಚೆ.ಎ.ಕವಲಿ: ಪೂರ್ವೋಕ್ತ: ಪುಟ-೨೩

೨೧. **ಅದೇ:** ಪೂರ್ವೋಕ್ತ: ಪುಟ-೨೪,೨೫

೨೨. **ಕನ್ನಡ ವಿಶ್ವಕೋಶ:** ಸಂಪುಟ-೧: ೧೯೬೯: ಪೂರ್ವೋಕ್ತ: ಪುಟ-೭೦೪

೨೩. **ಸ್ತ್ರೀ ಸಂವೇದನೆ:** ೨೦೦೭: ಶಾಂತಿ ನಾಯಕ: ಜಾನಪದ ಪ್ರಕಾಶನ, ಹೊನ್ನಾವರ: ಪುಟ-೪೧

೨೪. **ಕನ್ನಡ ವಿಶ್ವಕೋಶ:** ಸಂಪುಟ: ೧: ೧೯೬೯: ಪೂರ್ವೋಕ್ತ: ಪುಟ-೭೦೪

೨೫. **ಜಾನಪದ ಮಿನದನ:** ೧೯೯೭: ಪಾಲ್ತಾಡಿ ರಾಮಕೃಷ್ಣ ಆಚಾರ್: ಸುಪ್ರಿಯಾ ಪ್ರಕಾಶನ, ಪುತ್ತೂರು: ಪುಟ-೫೬

೨೬. **ಅದೇ:** ಪೂರ್ವೋಕ್ತ: ಪುಟ-೫೬,೫೭

■■■

# ಅಧ್ಯಾಯ–೩

## ತುಳುನಾಡ ಸಂಸ್ಕೃತಿ ಮತ್ತು ವಾರ್ಷಿಕ ಆವರ್ತನದ ಸ್ವರೂಪ

೩.೧: 'ಸಂಸ್ಕೃತಿ'–ಪದಾರ್ಥ ವಿವೇಚನೆ

೩.೨: ತುಳುನಾಡಿನ ಸಾಂಸ್ಕೃತಿಕ ಸ್ವರೂಪ

೩.೩: ತುಳುನಾಡಿನ ಋತು ಆವರ್ತನ ಮತ್ತು ಭತ್ತ ಬೇಸಾಯ ಸಂಸ್ಕೃತಿ

೩.೪: ತುಳುನಾಡಿನ ಆವರ್ತನದ ಆಚರಣೆಗಳು

# ಅಧ್ಯಾಯ–೩

# ತುಳುನಾಡ ಸಂಸ್ಕೃತಿ ಮತ್ತು ವಾರ್ಷಿಕ ಆವರ್ತನದ ಸ್ವರೂಪ

## ೩.೧: ಸಂಸ್ಕೃತಿ–ಪದಾರ್ಥ ವಿವೇಚನೆ

'ಸಂಸ್ಕೃತಿ' ಇದು ಸಂಸ್ಕೃತ ಭಾಷೆಯ ಪದ. 'ಸಮ್ಯಕ್' ಮತ್ತು 'ಕೃತಿ' ಎಂಬೆರಡು ಪದಗಳು ಸೇರಿಕೊಂಡ ಒಂದು ಸಂಯುಕ್ತಪದ. ಅಂದರೆ ಒಳ್ಳೆಯ ಕೆಲಸ ಎಂದರ್ಥವಾಗುತ್ತದೆ. ಸಂಸ್ಕೃತಿ ಪದಕ್ಕೆ ಅರ್ಥಕೋಶದಲ್ಲಿ ಮನಸ್ಸಿನ ಪಕ್ವತೆ; ನಾಗರಿಕತೆಯ ಭೌದ್ಧಿಕ ಸಾಧನೆ ಎಂಬರ್ಥಗಳಿವೆ.[೧] ಇಂಗ್ಲೀಷಿನ 'culture' ಎಂಬುದಕ್ಕೆ ಸಂವಾದಿಯಾಗಿ 'ಸಂಸ್ಕೃತಿ' ಎಂಬ ಶಬ್ದವನ್ನು ಉಪಯೋಗಿಸಲಾಗುತ್ತಿದೆ. 'culture' ಎಂಬುದರ ಮೂಲ ಪದ 'cult' ಅಥವಾ 'cultμ' ಎಂಬುದು. ಗೌರವಿಸು, ಆರಾಧಿಸು, ಸೇವೆಮಾಡು ಮೊದಲಾದ ಅರ್ಥಗಳನ್ನು ಇದು ಕೊಡುತ್ತದೆ. ದೈವಭಕ್ತಿ ಎಂಬ ಅರ್ಥವನ್ನು ಒಂದು ಕಡೆ ಇದು ಪಡೆದರೆ, ಇನ್ನೊಂದು ಕಡೆ ಭೂದೇವಿಯ ಆರಾಧನೆ, ಅಂದರೆ ಕೃಷಿ ಎಂಬ ಅರ್ಥವನ್ನು ಪಡೆಯಿತು. ಈ ಎರಡನೆಯ ಅರ್ಥದಿಂದಲೇ ಬಂದುದು 'Agriculture' ಎಂಬ ಶಬ್ದ. culture ಎಂಬುದೂ ಒಂದು ಬಗೆಯ ವ್ಯವಸಾಯವೇ. ಭೂಮಿಯನ್ನು ಉತ್ತು ಬಿತ್ತಿ, ನೀರು ಗೊಬ್ಬರ ಹಾಕಿ ಹಸನು ಮಾಡುವಂತೆ, ಮನುಷ್ಯನಲ್ಲಿರುವ ವಿಶೇಷವಾದ ಶಕ್ತಿಗಳು ಮೊಳಕೆಯೊಡೆದು ಬೆಳೆಯುವುದಕ್ಕಾಗಿ ಮಾಡಬೇಕಾದ ಅಂತರಂಗದ ವ್ಯವಸಾಯ ಸಂಸ್ಕೃತಿ."[೨] ಆದರೆ 'ಸಂಸ್ಕೃತಿ' ಎಂಬ ಶಬ್ದ ಈಚೆಗೆ ಬಹುಮುಖವಾದ ಅರ್ಥವನ್ನು ಪಡೆದು ಬೆಳೆಯುತ್ತಾ ಬಂದಿದೆ. ಮಾನವ ಸಮುದಾಯದ ಸಂಪ್ರದಾಯಗಳಿಂದ ಹಿಡಿದು, ವೈಯಕ್ತಿಕವಾದ ಆಚರಣೆಗಳವರೆಗೂ ಅದರ ವ್ಯಾಪ್ತಿ ಹಬ್ಬಿದೆ. ಮಾನವ ಜನಾಂಗಗಳ ಇತಿಹಾಸವನ್ನು ಚಿತ್ರಿಸುವಾಗ ಬಳಸುವ ಇನ್ನೊಂದು ಪದ 'ನಾಗರಿಕತೆ' ಎಂಬುದು. ಆಂಗ್ಲಭಾಷೆಯಲ್ಲಿ ಅವುಗಳನ್ನು "culture" ಮತ್ತು "civilization" ಎಂದು ಕರೆಯಲಾಗಿದೆ."[೩] "ಆಯಾ ಪ್ರದೇಶದ, ಆಯಾ ಭಾಷೆಯ, ಆಯಾ ಧರ್ಮದ ಜನಗಳು ತಮ್ಮ ಬಹುಮುಖ ಸಮಸ್ಯೆಗಳಿಗೆ ಉತ್ತರವನ್ನು ಕಾಣಬಯಸುವ ಅಂತರಂಗದ ಸಾಧನೆಯೇ ಸಂಸ್ಕೃತಿಯ ಮೂಲ ಸಾಮಗ್ರಿಯಾಗುತ್ತದೆ. ಜೀವನದ ಬಹಿರಂಗದ ಸಮಸ್ಯೆಗಳನ್ನು ಎದುರಿಸಿ ಅವುಗಳಿಗೆ ಸೌಲಭ್ಯಗಳನ್ನು ಕಂಡುಹಿಡಿದುಕೊಳ್ಳುತ್ತದೆ ನಾಗರಿಕತೆ."[೪] ಅಂದರೆ ಮನುಷ್ಯ ಸಮಾಜದ ಆಂತರಿಕ ವಿಷಯಗಳನ್ನು ಸಂಸ್ಕೃತಿ ಎಂದು ಗುರುತಿಸುತ್ತೇವೆ. ನಾಗರಿಕತೆ ಬಾಹ್ಯ

ವಿಷಯವಾಗುತ್ತದೆ. ನಮ್ಮ ಸುತ್ತಮುತ್ತಲಿರುವ ನೆಲ–ಜಲ, ಗಾಳಿ–ಬೆಳಕು, ಗಿಡ–ಮರ, ಪ್ರಾಣಿ–ಪಕ್ಷಿ, ಕಾಡು–ಮೇಡು ಇತ್ಯಾದಿಗಳನ್ನೆಲ್ಲ ಒಟ್ಟಾಗಿ ನಾವು ಪ್ರಕೃತಿ–ಪರಿಸರ ಎಂಬುದಾಗಿ ಕರೆಯುತ್ತೇವೆ. ಇಂತಹ ಪರಿಸರದಲ್ಲಿ ಇತರ ಪ್ರಾಣಿ ಪ್ರಪಂಚಕ್ಕಿಂತ ಭಿನ್ನವಾಗಿ ನಾವು ಆಯಾ ಪ್ರದೇಶ ಪರಿಸರಕ್ಕೆ ಒಗ್ಗಿಕೊಂಡು ಬಾಳುವುದಕ್ಕೆ ಕಲಿತುಕೊಂಡ ಬುದ್ಧಿಪ್ರದ ವ್ಯವಸ್ಥೆಯೇ ಸಂಸ್ಕೃತಿಯಾಗಿದೆ. ಇದರರ್ಥ ಒಂದು ನಿರ್ದಿಷ್ಟ ಪ್ರದೇಶದ, ಪರಿಸರದ ಚೌಕಟ್ಟಿನಲ್ಲಿ ಜೀವನ ನಡೆಸಲು ರೂಢಿಸಿಕೊಂಡು ಬಂದ ಆಹಾರಪದ್ಧತಿ, ಉಡುಗೆ–ತೊಡುಗೆ, ಭಾಷಾಬಳಕೆ, ಆಚಾರ–ವಿಚಾರ, ನಂಬಿಕೆ–ನಡವಳಿಕೆ–ಆಚರಣೆಗಳು, ಆಟ–ವಿನೋದಗಳು, ವೃತ್ತಿ–ಜಾತಿವ್ಯವಸ್ಥೆಗಳು ಇತ್ಯಾದಿಗಳೆಲ್ಲ ಸಂಸ್ಕೃತಿಯೊಂದರ ಹುಟ್ಟಿಗೆ ಕಾರಣಗಳಾಗುತ್ತವೆ. ಇನ್ನೂ ಸ್ಪಷ್ಟಪಡಿಸುವುದಾದರೆ ಮಾನವರ ಜೀವನ ವಿಧಾನವೇ ಸಂಸ್ಕೃತಿ.

ಖ್ಯಾತ ಸಂಶೋಧಕ ಡಾ.ಎಂ.ಎಂ.ಕಲಬುರ್ಗಿಯವರು ಹೇಳುವಂತೆ–"ಸಂಸ್ಕೃತಿ ಎನ್ನುವುದು ಸಮೂಹ ಸಮ್ಮತ ಜೀವನ ಪದ್ಧತಿಯಾಗಿದೆ."[೫]

ಮ್ಯಾಥ್ಯೂ ಅರ್ನಾಲ್ಡ್ ಎಂಬ ಖ್ಯಾತ ಚಿಂತಕ–"ಬುದ್ಧಿಗೆ ತಿಳಿವಳಿಕೆ ಸಂಪಾದನೆ ಮಾಡಿಕೊಡಲು ಬರಿಯ ಶುದ್ಧ ವಿಜ್ಞಾನದ ಬಲ ಮಾತ್ರ ಸಾಲದು; ಅದಕ್ಕೆ ಸಾಮಾಜಿಕ ಹಿತದ ಧಾರ್ಮಿಕ ಬಲದ ಪ್ರೇರಣೆಯೂ ಬೇಕು. ಹಾಗೆ ಉಂಟಾದ ತಿಳಿವಳಿಕೆಯೇ ಸಂಸ್ಕೃತಿ"[೬] ಎನ್ನುತ್ತಾನೆ. ಗ್ರಾಹಂ ವ್ಯಾಲೇಸ್ ಎಂಬ ಸಮಾಜ ಶಾಸ್ತ್ರಜ್ಞ–"ಸಂಸ್ಕೃತಿ ಎಂದರೆ ಸಾಂಪ್ರದಾಯಿಕವಾಗಿ ಬಂದ ಪದ್ಧತಿಗಳು, ಬದುಕಿನ ಮೌಲ್ಯಗಳು ಮತ್ತು ಆದರ್ಶಗಳ ಸಂಗ್ರಹ. ಸಂಸ್ಕೃತಿಯನ್ನು ನಾವು ಸಾಮಾಜಿಕ ಪರಂಪರೆಯ ಜ್ಞಾನ, ತಿಳಿವಳಿಕೆಯಿಂದ ಪಡೆದುಕೊಳ್ಳುತ್ತೇವೆ"[೭] ಎಂದಿದ್ದಾನೆ. ಈ ಇಬ್ಬರು ವಿದ್ವಾಂಸರ ಅಭಿಪ್ರಾಯಗಳನ್ನು ವಿಶ್ಲೇಷಿಸಿರುವ ಡಾ.ಪಾಲ್ತಾಡಿ ರಾಮಕೃಷ್ಣ ಆಚಾರ್ ಅವರು–"ಸಂಸ್ಕೃತಿಯು ಬರಿಯ ಕೆಲಸ ಕಾರ್ಯಗಳಷ್ಟೇ ಅಲ್ಲ; ಅದರ ಹಿಂದಿರುವ ಆಲೋಚನೆಗಳು, ಮೌಲ್ಯಗಳಲ್ಲೂ ಅಡಗಿದೆ. ಸಂಸ್ಕೃತಿಗಳಲ್ಲಿ ಕೆಲವು ಕಾಣದೆ ಇರಬಹುದು. ಹಾಲಿನಲ್ಲಿ ಅಡಗಿರುವ ತುಪ್ಪದಂತೆ ಮನುಷ್ಯರ ನಡೆನುಡಿ, ಆಚಾರ–ವಿಚಾರಗಳಲ್ಲಿ ಅವ್ಯಕ್ತವಾಗಿ ಅಡಗಿರಬಹುದು. ಪ್ರಾಚೀನ ಸಮಾಜದಲ್ಲಿ ಧಾರ್ಮಿಕತೆಯ ನೆಲೆಗಟ್ಟಿನಲ್ಲಿ ಸಂಸ್ಕೃತಿಯು ಸೃಷ್ಟಿಗೊಳ್ಳುತ್ತಿತ್ತು. ಜನರ ಆರಾಧನೆ, ಆಚರಣೆ, ಹಬ್ಬ, ಜೀವನಾವರ್ತನ ಆಚರಣೆಗಳಲ್ಲಿ ಅದು ಪ್ರತ್ಯಕ್ಷಗೊಳ್ಳುತ್ತಿತ್ತು. ಇಂದಿಗೂ ಸಂಸ್ಕೃತಿಯನ್ನು ನಾವು ಜನರ ನಂಬಿಕೆ ಮತ್ತು ಆಚರಣೆಗಳಲ್ಲಿ ಕಂಡುಕೊಳ್ಳಲು ಸಾಧ್ಯವಾಗುತ್ತದೆ"[೮] ಎಂದು

ಹೇಳುವ ಮಾತುಗಳು ಅರ್ಥವತ್ತಾಗಿವೆ. ಒಟ್ಟಿನಲ್ಲಿ ಸಂಸ್ಕೃತಿ ಮೂಲಭೂತವಾಗಿ ರೂಪುಗೊಳ್ಳುವುದು ಒಂದು ಪ್ರದೇಶದ ಪರಿಸರ ಸಂರಚನೆಯಿಂದಲೇ ಎಂದು ಹೇಳಬಹುದು.

೨೧ನೆಯ ಶತಮಾನದಲ್ಲಿ ನಿಂತು ಅವಲೋಕಿಸುವಾಗ ಮಾನವ ಸಂಸ್ಕೃತಿಯನ್ನು ಎರಡು ಪ್ರಭೇದಗಳಲ್ಲಿ ಗುರುತಿಸಬಹುದು. ಮೊದಲನೆಯದು ಜಾನಪದ(ಪರಿಶಿಷ್ಟ) ಸಂಸ್ಕೃತಿಯಾದರೆ, ಎರಡನೆಯದು ಶಿಕ್ಷಿತ(ಶಿಷ್ಟ) ಸಂಸ್ಕೃತಿ. ಇಲ್ಲಿ ಜಾನಪದ ಸಂಸ್ಕೃತಿಯನ್ನು ಮೂಲಸಂಸ್ಕೃತಿಯೆನ್ನಬೇಕು. ಇಂದು ಶಿಷ್ಟಸಂಸ್ಕೃತಿ ಎಲ್ಲೆಡೆಯೂ ಕಂಡುಬರುತ್ತದೆಯಾದರೂ ಜಾನಪದ ಸಂಸ್ಕೃತಿ ಪೂರ್ತಿ ನಾಶವಾಗಿ ಹೋಗಿಲ್ಲ. ಮೂಲ ಜಾನಪದ ಸಂಸ್ಕೃತಿಯೇ ಹೊಸ ಪರಿವೇಶಗಳೊಂದಿಗೆ ಶಿಷ್ಟ ಸಂಸ್ಕೃತಿಯಾಗಿ ರೂಪ ಪರಿವರ್ತನೆಯಾಗಿರುವುದನ್ನು ವಿಶೇಷವಾಗಿ ಗಮನಿಸಬೇಕಾಗುತ್ತದೆ. ಅಂದರೆ ಹಳೆಯ ಜಾನಪದ ಸಂಸ್ಕೃತಿಯ ಪಳೆಯುಳಿಕೆಗಳನ್ನು ನಾವು ಪ್ರತಿಯೊಂದು ಶಿಷ್ಟ ಸಂಸ್ಕೃತಿಯ ಒಳಪದರಗಳಲ್ಲಿ ಕಾಣುವುದಕ್ಕೆ ಸಾಧ್ಯವಿದೆ.

### ೩.೨: ತುಳುನಾಡಿನ ಸಾಂಸ್ಕೃತಿಕ ಸ್ವರೂಪ

ಮೇಲಿನ ವಿಶ್ಲೇಷಣೆಯ ಹಿನ್ನೆಲೆಯಲ್ಲಿ ಹೇಳುವುದಾದರೆ "ಭಾರತವು ಜಾನಪದದ ತೊಟ್ಟಿಲು-ತವರು"[೯] ಎಂಬುದಾಗಿ ಪಾಶ್ಚಾತ್ಯ ವಿದ್ವಾಂಸರೇ ಗುರುತಿಸಿದ್ದಾರೆ. ಭಾರತ ಅನೇಕ ಜಾತಿಜನಾಂಗಗಳ, ಮತ-ಧರ್ಮಗಳ, ವೈವಿಧ್ಯಮಯ ದೇಶ-ಭಾಷೆಗಳ, ಅನನ್ಯ ಜಾನಪದ ಘಟಕಗಳ ಸಾಂಸ್ಕೃತಿಕ ಸೊಗಡನ್ನು ಹೊಂದಿರುವ ದೇಶ. ಇಂತಹ ಸಮೃದ್ಧ ಭಾರತದ ಒಂದು ಪ್ರಾದೇಶಿಕ ಘಟಕ ನಮ್ಮ ಕರ್ನಾಟಕ ರಾಜ್ಯ. ಈ ಕರ್ನಾಟಕದ ಅವಿಭಾಜ್ಯ ಅಂಗವಾಗಿರುವ, ದಕ್ಷಿಣಕನ್ನಡ ಜಿಲ್ಲೆಯೆಂದು ಕರೆಯಲ್ಪಡುವ 'ತುಳುನಾಡು' ವಿಶಿಷ್ಟ ಸಂಸ್ಕೃತಿಯ ನೆಲೆವೀಡು. ಈ ನಾಡಿಗೆ ಶಿಷ್ಟಸಂಸ್ಕೃತಿಯ ಪ್ರವೇಶವಾಗಿದೆಯಾದರೂ 'ತುಳುನಾಡ ಸಂಸ್ಕೃತಿ' ಎಂಬ ಪರಿಕಲ್ಪನೆ ಕಟ್ಟಿಕೊಳ್ಳುವುದು ಈ ನೆಲದ ಜಾನಪದ ಸಂಸ್ಕೃತಿಯಿಂದಲೇ. ಅಂದರೆ ಇಂದಿಗೂ ತುಳುನಾಡಿನ ಸಂಸ್ಕೃತಿ ತನ್ನ ಮೂಲ ಸಂಸ್ಕೃತಿಯ ಸಂಬಂಧಗಳನ್ನು ಅಷ್ಟಾಗಿ ಕಳೆದುಕೊಂಡಿಲ್ಲ; ಸಾಕಷ್ಟು ಉಳಿಸಿಕೊಂಡಿದೆ ಎಂಬುದು ಗಮನಾರ್ಹ ಅಂಶ.

ಪೂರ್ವದಲ್ಲಿ ಹಬ್ಬಿಕೊಂಡಿರುವ ಸಹ್ಯಾದ್ರಿ ಪರ್ವತ ಮತ್ತು ಅದರ ಮೇಲೆ ದಟ್ಟವಾಗಿ ಬೆಳೆದು ನಿಂತ ಹಚ್ಚ ಹಸುರಿನ ಕಾಡುಗಳು, ಪಶ್ಚಿಮದಲ್ಲಿ ಭೋರ್ಗರೆವ ಕಡಲು-ಈ ಮೇರೆಗಳ ನಡುವೆ ಸುಮಾರು ೧೨ ಡಿಗ್ರಿ ಉತ್ತರ ಅಕ್ಷಾಂಶದಿಂದ ೧೩.೫ ಡಿಗ್ರಿ ಉತ್ತರ ಅಕ್ಷಾಂಶದವರೆಗೆ ಪಸರಿಸಿಕೊಂಡಿರುವ ತುಳುನಾಡು ಉಷ್ಣವಲಯದಲ್ಲಿದೆ. ಕಡಲತಡಿಯಿಂದ ಬರುವ ಬಿಸಿಗಾಳಿ

ಹಾಗೂ ಪರ್ವತಗಳ ಕಡೆಯಿಂದ ಬರುವ ತಂಗಾಳಿ-ಹೀಗೆ ಇಲ್ಲಿ ಯಾವಾಗಲೂ ಸಾಮಾನ್ಯವಾಗಿ ಹಿತವಾದ ವಾಯುಗುಣವಿರುತ್ತದೆ. 'ಬೇಶ' ತಿಂಗಳಿಂದ ಹಿಡಿದು ಸುಮಾರು 'ಬೊಂತ್ಯೊಲು' ತಿಂಗಳವರೆಗೆ ಇಲ್ಲಿ ಸುಮಾರು ೧೦೦ ರಿಂದ ೧೫೦ ಇಂಚು ಮಳೆ ಬರುತ್ತದೆ. ನದಿಗಳು, ತೋಡುಗಳು, ಮಲೆ-ಕಾಡು, ಬೆಟ್ಟ-ಗುಡ್ಡ, ತಗ್ಗು-ಬಯಲುಗಳು ಇಲ್ಲಿನ ಸಾಮಾನ್ಯ ಭೌಗೋಳಿಕ ಚಿತ್ರಣವಾಗಿದ್ದು, ಅಧಿಕ ಮಳೆಯಾಗುವುದರಿಂದ ತಗ್ಗು-ಬಯಲುಗಳ ಮಣ್ಣು ಕಂದು ಬಣ್ಣದ ಕೆಸರಿನಿಂದ ಕೂಡಿರುತ್ತದೆ. ಈ ಹಿನ್ನೆಲೆಯಲ್ಲಿ ಇಲ್ಲಿ ಮೂಲದಿಂದಲೇ ಅಂದರೆ ಬೇಟೆ ಸಂಸ್ಕೃತಿಯ ನಂತರದಲ್ಲಿ ಭತ್ತ ಬೇಸಾಯವನ್ನು ಪ್ರಧಾನ ಕಸುಬನ್ನಾಗಿ ರೂಪಿಸಿಕೊಂಡು ಬರಲಾಗಿದೆ. ಮೂರ್ತೆಗಾರಿಕೆ, ಮೀನುಗಾರಿಕೆ, ಕುಂಬಾರಿಕೆ, ನೇಕಾರಿಕೆ, ಮಡಿವಾಳ ವೃತ್ತಿ, ಬುಟ್ಟಿಹೆಣಿಗೆ, ಬಡಗಿ ಕೆಲಸ, ಚಮ್ಮಾರಿಕೆ, ಕಮ್ಮಾರಿಕೆ ಮೊದಲಾದವುಗಳು ಇಲ್ಲಿ ಉಪವೃತ್ತಿಗಳಾಗಿವೆ. ಹೀಗೆ ಈ ಬೇಟೆ, ಭತ್ತಬೇಸಾಯ ಮತ್ತು ಉಪಕಸುಬು(ಕುಲವೃತ್ತಿ)ಗಳ ಜೊತೆ ಜೊತೆಗೆ ಅವುಗಳ ಸಂರಕ್ಷಣೆಯ ನೆಲೆಯಲ್ಲಿ ಈ ನಾಡಿನ ವಿವಿಧ ಜಾತಿಗಳು, ತುಳುಭಾಷೆ, ಮಾತೃಮೂಲೀಯ ಕುಟುಂಬ ಪದ್ಧತಿ, ಕೂಡುಕುಟುಂಬ ವ್ಯವಸ್ಥೆ, ಭೂತಾರಾಧನೆ-ನಾಗಾರಾಧನೆಗಳಂತಹ ವಿಶಿಷ್ಟರೂಪದ ಆರಾಧನೆಗಳು, 'ಪಗ್ಗುಸಿಂಗೊಡೆ'('ಪಗ್ಗು' ತಿಂಗಳ ಮೊದಲ ದಿನ)ಯಂದು ಆರಂಭವಾಗುವ 'ಬಿಸುಪರ್ಬ' ಆಚರಣೆಯಿಂದ ಹಿಡಿದು 'ಸುಗ್ಗಿ' ತಿಂಗಳಲ್ಲಿ ನಡೆಯುವ ಕರಂಗೋಲು, ಗುಮ್ಮಟೆ, ಪುರುಷವೇಷ-ಮೊದಲಾದ ಜಾನಪದ ಕುಣಿತಗಳವರೆಗಿನ ವಾರ್ಷಿಕ ಆವರ್ತನದ ಬಹುವಿಧ ಆಚರಣೆಗಳು, ಸಂಧಿ-ಪಾಡ್ದನ, ಗಾದೆ, ಒಗಟು, ನಂಬಿಕೆಗಳಂತಹ ಮೌಖಿಕ ಸಾಹಿತ್ಯಗಳು ಹುಟ್ಟಿಕೊಂಡು ಸಮೃದ್ಧವಾದ ತುಳುನಾಡ ಸಂಸ್ಕೃತಿಯ ರೂಪೀಕರಣವಾಗಿದೆ. ತುಳುನಾಡ ಸಂಸ್ಕೃತಿಯ ಯಾವ ಎಳೆಯನ್ನು ಬಿಡಿಸಿದರೂ ಅದು ಇಲ್ಲಿನ ಮೂಲ ಕಸುಬಾದ ಭತ್ತಬೇಸಾಯದ ಆಶ್ರಯದಲ್ಲಿ ವಾರ್ಷಿಕ ಆವರ್ತನದ ನೆಲೆಯಲ್ಲಿ ಚಿಗುರೊಡೆದಿರುವುದು ಕಂಡುಬರುತ್ತದೆ.

ಯಾವ ದೇಶದವನೇ ಬರಲಿ, ಯಾವ ಭಾಷೆಯವನೇ ಬರಲಿ, ಯಾವುದೇ ಮತಧರ್ಮದವನೇ ಬರಲಿ ತುಳುನಾಡು ಯಾರನ್ನೂ ತಿರಸ್ಕರಿಸಿದ ಸಂನಿವೇಶವೇ ಇಲ್ಲ. ಅಂದರೆ ಈ ನಾಡಿನ ನೆಲ-ಜಲ, ಗಾಳಿ-ಬೆಳಕು, ಆಹಾರೋತ್ಪನ್ನ ಮೊದಲಾದ ವಾಯುಗುಣ ಎಲ್ಲರಿಗೂ ಹಿತವಾಗಿ ಒಗ್ಗಿಕೊಳ್ಳುವಂತಿದೆ ಎಂಬುದು ವಿಶೇಷ. ಅಂತೆಯೇ ಇಲ್ಲಿನ ನಂಬಿಕೆ ನಡವಳಿಕೆಗಳನ್ನೂ ಹೊರಗಿನಿಂದ ಬಂದವರು ಆಚರಿಸಿಕೊಂಡು ಬಂದಿದ್ದಾರೆ. ಹಾಗೆ ನೋಡಿದರೆ ತುಳುನಾಡಿನಲ್ಲಿ ಆರ್ಥಿಕವಾಗಿ ಮುಂದುವರಿದವರೆಲ್ಲ ಕಾಲಾಂತರದಲ್ಲಿ

ಹೊರಗಿನಿಂದ ಬಂದ ಜನಗಳೇ ಆಗಿದ್ದಾರೆ. ದ್ರಾವಿಡಮೂಲದ ಈ ನಾಡಿನ ಮೂಲನಿವಾಸಿಗಳು ಇಂದು ಹಿಂದುಳಿದವರಾಗಿಯೇ ಇರುವುದು ಕಂಡುಬರುತ್ತದೆ. ವಾಸ್ತವಿಕವಾಗಿ ಅವರಿಂದಲೇ ಇಲ್ಲಿನ ನಾಡು-ನುಡಿ-ಸಂಸ್ಕೃತಿ ಮೂಲರೂಪದಲ್ಲಿ ಉಳಿದಿರುವುದು ಎಂದರೆ ತಪ್ಪಾಗಲಿಕ್ಕಿಲ್ಲ. ಆದಿವಾಸಿಗಳ ಹಿಡಿತದಲ್ಲಿದ್ದ ಇಲ್ಲಿನ ನೆಲ-ಹೊಲ ಎಲ್ಲ ಇಂದು ಅವರ ಕೈತಪ್ಪಿ ಹೋಗಿ ಅವರಿಂದು ದುಡಿಯುವ ಕೂಲಿ ಕಾರ್ಮಿಕರಾಗಿರುವುದು ವಿಪರ್ಯಾಸ ಸತ್ಯ.

ಇತಿಹಾಸವನ್ನು ಬಿಡಿಸಿದರೆ ತುಳುನಾಡು ಬೌದ್ಧಧರ್ಮ, ಜೈನಧರ್ಮ, ವೈದಿಕಧರ್ಮ(ಆರ್ಯರು), ಮುಸ್ಲಿಂಧರ್ಮ, ಕ್ರೈಸ್ತಧರ್ಮ ಹೀಗೆ ಅನೇಕ ಮತಧರ್ಮಗಳವರಿಗೆ ಆಶ್ರಯ ನೀಡಿರುವುದು ಕಂಡುಬರುತ್ತದೆ. ಇಲ್ಲಿನ ಮೂಲಭಾಷೆ ತುಳುವಾದರೂ ತುಳುವೇತರ ಅನೇಕ ಭಾಷೆಗಳು ಇಲ್ಲಿ ಪ್ರಚಲಿತದಲ್ಲಿವೆ. ಭೂತಾರಾಧನೆ-ನಾಗಾರಾಧನೆಗಳಂತಹ ಇಲ್ಲಿನ ಮೂಲ ಆರಾಧನಾ ಸಂಸ್ಕೃತಿ ಸಾಕಷ್ಟು ಪರಿವರ್ತನೆಯಾಗಿದ್ದಲ್ಲದೆ, ಸಾಕಷ್ಟು ಸಂಖ್ಯೆಯ ದೇವಾಲಯಗಳು, ಮಸೀದಿ-ಚರ್ಚುಗಳು ಜನ್ಮತಳೆದಿವೆ. ಆದರೂ ಸಾಮಾಜಿಕ ಸಾಮರಸ್ಯಕ್ಕೆ ಯಾವತ್ತೂ ಅಡ್ಡಿಯಾಗಲಿಲ್ಲ. ಇದು ತುಳುನಾಡ ಸಂಸ್ಕೃತಿಯನ್ನು ರೂಪಿಸಿದ ಇಲ್ಲಿನ ಬೇಸಾಯ ಸಂಸ್ಕೃತಿಯ ಮತ್ತು ಋತುಪರಿವರ್ತನೆಯ ವಾರ್ಷಿಕ ಆವರ್ತನದ ಫಲವೆಂದೇ ಹೇಳಬಹುದು. ಈ ನೆಲೆಯಲ್ಲಿ ಖ್ಯಾತ ವಿದ್ವಾಂಸರಾದ ಡಾ.ಯು.ಪಿ.ಉಪಾಧ್ಯಾಯ ಅವರು ಒಂದೆಡೆ ಹೇಳುವ ಮಾತುಗಳನ್ನು ವಿಶೇಷವಾಗಿ ಲಕ್ಷಿಸಬೇಕು-"ಭಾಷಾ ವಿಜ್ಞಾನಿಗಳು ದಕ್ಷಿಣಕನ್ನಡ ಮತ್ತು ಉಡುಪಿ ಜಿಲ್ಲೆಗಳನ್ನೊಳಗೊಂಡ ಕರಾವಳಿ ಪ್ರದೇಶವಾದ ತುಳುನಾಡನ್ನು ಭಾಷೆಗಳ ಆಡುಂಬೊಲ ಎಂದು ಕರೆಯುವುದುಂಟು. ಇಲ್ಲಿ ಹಲವಾರು ಭಾಷೆಗಳು ಒಂದೇ ಜಾಗದಲ್ಲಿ ಸಹಬಾಳ್ವೆ ನಡೆಸಿ ಪರಸ್ಪರ ಪ್ರೀತಿ ವಿಶ್ವಾಸದಿಂದ ಬದುಕುತ್ತಿವೆ. ಈ ಕೊಳ್ ಕೊಡುಗೆ ಭಾಷಾ ಕ್ಷೇತ್ರಕ್ಕೆ ಮಾತ್ರ ಸೀಮಿತವಾಗಿಲ್ಲ. ಸಮಾಜ ಶಾಸ್ತ್ರಜ್ಞರು ಈ ಪ್ರದೇಶವನ್ನು ಮತಧರ್ಮ ಸಂಪ್ರದಾಯಗಳ ಆಡುಂಬೊಲ ಎಂದು ಕರೆಯಬಹುದು. ಭಾರತೀಯ ಮೂಲದ ಮತ್ತು ವಿದೇಶೀ ಮೂಲದ ಹಲವಾರು ಮತಸಂಪ್ರದಾಯಗಳು ಈ ನೆಲದಲ್ಲಿ ಒಟ್ಟಾಗಿ ನಡೆದು ಬಂದಿವೆ. ಈ ಒಡನಾಟದಿಂದ ಸಾಂಸ್ಕೃತಿಕ ನೆಲೆಯಲ್ಲಿಯೂ ಒಂದು ಇನ್ನೊಂದರ ಪ್ರಭಾವಕ್ಕೊಳಗಾಗಿದೆ. ಆದಾನ ಪ್ರದಾನಗಳು ಸಾಕಷ್ಟು ನಡೆದಿವೆ. ಹಿಂದು, ಜೈನ, ಬೌದ್ಧ ಮುಂತಾದ ಭಾರತೀಯ ಮತಸಂಪ್ರದಾಯಗಳಂತೆ ಕ್ರಿಶ್ಚಿಯನ್ ಮುಸಲ್ಮಾನ ಸಂಪ್ರದಾಯಗಳೂ ಇಲ್ಲಿ ಒಟ್ಟಾಗಿ ಸಹಬಾಳ್ವೆ ನಡೆಸಿವೆ. ಈ ದೃಷ್ಟಿಯಿಂದ ಈ ಪ್ರದೇಶವನ್ನು 'ಮಿನಿಭಾರತ' ಎಂದು ಮಾತ್ರವಲ್ಲ 'ಮಿನಿವಿಶ್ವ'

ಎಂದು ಕರೆದರೂ ಅರ್ಥಪೂರ್ಣವೇ ಆಗುತ್ತದೆ. ಭಾರತೀಯ ಸಂಸ್ಕೃತಿಯಲ್ಲಿ ಕಂಡುಬರುವ ಸರ್ವಧರ್ಮ ಸಮನ್ವಯ ತತ್ವಕ್ಕೆ ನಮ್ಮ ಈ ತುಳುನಾಡು ಒಂದು ಜೀವಂತ ಉದಾಹರಣೆ.

ಹಿಂದೂಗಳಿಗೆ ಇಲ್ಲಿ ಕೊಲ್ಲೂರು-ಉಡುಪಿ-ಸುಬ್ರಹ್ಮಣ್ಯ-ಕಟೀಲು-ಶರವು-ಆನೆಗುಡ್ಡೆ-ಪುತ್ತೂರು ದೇವಾಲಯಗಳಿದ್ದಂತೆ, ಜೈನರಿಗೆ ಕಾರ್ಕಳ-ವೇಣೂರು-ಧರ್ಮಸ್ಥಳ-ನಾರಾವಿಗಳಿವೆ. ಬೌದ್ಧರಿಗೆ ನಾಥಪಂಥದ ಆರಾಧನಾ ಸ್ಥಳಗಳಿವೆ. ವೀರಶೈವ ಮಠಗಳಿವೆ. ಕ್ರಿಶ್ಚಿಯನ್ನರಿಗೆ ಮಂಗಳೂರು ಅತ್ತೂರು ಆರಾಧನಾ ಸ್ಥಳಗಳಿದ್ದರೆ ಮುಸಲ್ಮಾನರಿಗೆ ಉಳ್ಳಾಲ ದರ್ಗಾ ಇದೆ. ಹಿಂದೂ ಹಬ್ಬಹರಿದಿನ ಉತ್ಸವಾದಿಗಳೊಂದಿಗೆ ಜೈನ ಕ್ರಿಶ್ಚಿಯನ್ ಮುಸಲ್ಮಾನ ಹಬ್ಬಗಳೂ ವಿಜೃಂಭಣೆಯಿಂದ ಜರಗುತ್ತಿವೆ. ಬೇರೆ ಬೇರೆ ಸಂಪ್ರದಾಯದ ಆಚರಣೆಗಳು ಅಕ್ಕಪಕ್ಕದಲ್ಲಿಯೇ ನಡೆಯುತ್ತಿರುತ್ತವೆ. ಎಲ್ಲ ಮತ ಸಂಪ್ರದಾಯದವರೂ ಅವುಗಳಲ್ಲಿ ಭಾಗವಹಿಸುತ್ತಾರೆ.

ಬೇರೆ ಬೇರೆ ಮತಸಂಪ್ರದಾಯಗಳ ಆಚರಣೆಗಳೊಂದಿಗೆ ಈ ಪ್ರದೇಶದ ಪ್ರಾಚೀನ ಜಾನಪದ ಆಚರಣೆಗಳಾದ ಭೂತಕೋಲ, ನೇಮ, ತಂಬಿಲಗಳೂ, ನಾಗತಣು, ನಾಗಮಂಡಲಗಳೂ, ಕಂಬಳ, ಕೋಳಿಅಂಕಗಳೂ ವಿಜೃಂಭಣೆಯಿಂದ ನಡೆಯುತ್ತಿದ್ದು, ಎಲ್ಲ ಸಂಪ್ರದಾಯಗಳ ಜನರೂ ಅವುಗಳಲ್ಲಿ ಭಾಗಿಗಳಾಗುತ್ತಾರೆ. ಭೂತಾರಾಧನೆಯ ಪ್ರಭಾವ ದೇವಸ್ಥಾನಗಳ ವೈದಿಕ ಆಚರಣೆಗಳ ಮೇಲಾಗಿದೆ. ವೈದಿಕ ಆಚರಣೆಗಳ ಪ್ರಭಾವವನ್ನು ಭೂತಾಲಯಗಳಲ್ಲಿ ನೋಡಬಹುದು. ಜೈನಧರ್ಮದ ಪ್ರಭಾವವನ್ನು ಭೂತಾರಾಧನೆಯಲ್ಲಿ ನಾವು ಕಾಣುತ್ತೇವೆ. ಜೈನರು ಭೂತಾಲಯ ದೇವಾಲಯಗಳ ಯಜಮಾನರಾಗಿದ್ದಾರೆ. ಬ್ರಾಹ್ಮಣರು ಭೂತಸ್ಥಾನಗಳ ಮುಖ್ಯಸ್ಥರೂ, ಅರ್ಚಕರೂ ಆಗಿದ್ದಾರೆ. ಹೀಗೆ ಧಾರ್ಮಿಕ, ಸಾಮಾಜಿಕ ಕ್ಷೇತ್ರದಲ್ಲಿ ವಿವಿಧ ಮತಸಂಪ್ರದಾಯಗಳ ಪರಸ್ಪರ ಪ್ರಭಾವವನ್ನು ಕಾಣುತ್ತೇವೆ. ಸಾಮಾಜಿಕ ಕಟ್ಟುಕಟ್ಟಳೆಗಳಲ್ಲಿಯೂ ಈ ವೈವಿಧ್ಯವನ್ನು ನಾವು ಕಾಣುತ್ತೇವೆ."[೧೦] ಈ ಮಾತುಗಳ ಹಿನ್ನೆಲೆಯಲ್ಲಿ ಹೇಳುವುದಾದರೆ ಈಗ ಇವೆಲ್ಲವನ್ನು ಒಳಗೊಂಡ ಅಂತರ್ ಶಿಸ್ತೀಯ ವ್ಯವಸ್ಥೆಯೇ ತುಳುನಾಡ ಸಂಸ್ಕೃತಿಯಾಗಿದೆ. ಒಟ್ಟಿನಲ್ಲಿ ಇಂತಹ ಸಮೃದ್ಧ ತುಳುನಾಡ ಸಂಸ್ಕೃತಿಯು ಇಲ್ಲಿನ ವಾರ್ಷಿಕ ಆವರ್ತನದ ತಳಹದಿಯ ಮೇಲೆ ಕಟ್ಟಿಕೊಂಡಿದ್ದು, ವಾರ್ಷಿಕ ಆವರ್ತನದ ಸ್ವರೂಪವನ್ನು ವಿಶೇಷವಾಗಿ ಲಕ್ಷಿಸಬೇಕಾಗುತ್ತದೆ. ಅಂದರೆ ಸಂಸ್ಕೃತಿಯೊಂದರ ಸ್ವರೂಪ ನಿರ್ಣಯದಲ್ಲಿ ಒಂದು ಪ್ರಾದೇಶಿಕ ಪರಿಸರದ ವಾರ್ಷಿಕ ಆವರ್ತನದ ಚಟುವಟಿಕೆಗಳು ಪ್ರಧಾನ ಪಾತ್ರವಹಿಸುತ್ತವೆ.

## ೩.೩: ತುಳುನಾಡಿನ ಋತು ಆವರ್ತನ ಮತ್ತು ಭತ್ತ ಬೇಸಾಯ ಸಂಸ್ಕೃತಿ

ಈಗಾಗಲೇ ಪ್ರಸ್ತಾಪಿಸಿರುವಂತೆ ತುಳುನಾಡ ಸಂಸ್ಕೃತಿಯ ಮೂಲನೆಲೆ ಇಲ್ಲಿನ ಭತ್ತಬೇಸಾಯದಲ್ಲಿದೆ. ಭತ್ತಬೇಸಾಯ ಇಲ್ಲಿನ ವಾರ್ಷಿಕ ಋತು ಆವರ್ತನಗಳನ್ನು ಆಶ್ರಯಿಸಿ ರೂಪಿತಗೊಂಡಿರುವುದು ಗಮನಾರ್ಹ ಸಂಗತಿ. ಈ ನೆಲೆಯಲ್ಲಿ ಆವರ್ತನದ ಸ್ವರೂಪವನ್ನು ಶೋಧಿಸುವುದಾದರೆ ಭತ್ತಬೇಸಾಯ ಸಂಸ್ಕೃತಿಯನ್ನು ವಿಶ್ಲೇಷಿಸುವುದು ಅತೀ ಅಗತ್ಯವೆಂದು ತೋರುತ್ತದೆ.

ತುಳುನಾಡು ಸೃಷ್ಟಿಯಾಗುವುದಕ್ಕೆ ಮೊದಲು ಈ ಪ್ರದೇಶ ಸಮುದ್ರದ ನೀರಿನಿಂದ ಆವೃತ್ತವಾಗಿತ್ತು. ಸಮುದ್ರ ಹಿಂದಕ್ಕೆ ಸರಿದು ಭೂಮಿ ಕಾಣಿಸಿಕೊಂಡಾಗ ಈ ಪ್ರದೇಶದಲ್ಲಿ ದಟ್ಟವಾದ ಕಾಡು ಬೆಳೆದಿತ್ತು. ಈ ಸಂದರ್ಭದಲ್ಲಿ ಇಲ್ಲಿಗೆ ಬಂದಂತಹ ದ್ರಾವಿಡ ಮೂಲದ ನಿವಾಸಿಗಳು ಮೊದಲಿಗೆ ಕಾಡಲ್ಲಿ ಸಹಜವಾಗಿದ್ದ ಗೆಡ್ಡೆ ಗೆಣಸುಗಳನ್ನು ಮತ್ತು ಪ್ರಾಣಿ ಪಕ್ಷಿಗಳನ್ನು ಬೇಟೆಯಾಡಿ ಹೊಟ್ಟೆ ತುಂಬಿಸಿಕೊಳ್ಳುತ್ತಿದ್ದರು. ಕಾಲಕ್ರಮೇಣ ಪ್ರಕೃತಿಯಲ್ಲಿ ಸಹಜವಾಗಿ ಬೆಳೆಯುತ್ತಿದ್ದ ಸಸ್ಯ, ಗೆಡ್ಡೆ-ಗೆಣಸು, ದವಸ ಧಾನ್ಯಗಳನ್ನು, ಕೆಲವು ಪ್ರಾಣಿ ಪಕ್ಷಿಗಳನ್ನು ವ್ಯವಸ್ಥಿತವಾಗಿ ಬೆಳೆಯತೊಡಗಿದುದು ಕೃಷಿ ಸಂಸ್ಕೃತಿಯಾಗಿ ರೂಪುಗೊಂಡಿತು. ಹೀಗೆ ಕೃಷಿ ಸಂಸ್ಕೃತಿಗೆ ಸಂಬಂಧಿಸಿದಂತೆ ತುಳುನಾಡಿನಲ್ಲಿ ಬಹಳ ಮುಖ್ಯವಾಗಿ ಕಂಡು ಬರುವಂತಹದ್ದು ಭತ್ತ ಬೇಸಾಯ. ಭತ್ತ ಬೇಸಾಯ ತುಳುನಾಡಿನ ಜೀವಾಳ. "ಭತ್ತ ಬೇಸಾಯವು ಪ್ರಾಚೀನ ತುಳುನಾಡಿನ ಆರ್ಥಿಕ ವ್ಯವಸ್ಥೆಯ ನಿರ್ವಹಣೆಯಲ್ಲಿ ಪ್ರಧಾನ ಪಾತ್ರ ವಹಿಸಿತ್ತು ಎಂಬ ವಿಚಾರ ಈ ಪ್ರದೇಶದ ನೂರಾರು ಶಾಸನಗಳ ಅಧ್ಯಯನದಿಂದ ವ್ಯಕ್ತವಾಗುತ್ತದೆ. ತುಳುನಾಡಿನ ಶಾಸನಗಳು ಇಲ್ಲಿನ ರಾಜಕೀಯ, ಧಾರ್ಮಿಕ ಹಾಗೂ ಸಾಮಾಜಿಕ ಪರಿಸ್ಥಿತಿಯ ಚಿತ್ರಣವನ್ನು ನೀಡುವ ಜೊತೆಗೆ ಕೃಷಿ, ಬೇಸಾಯ ಮತ್ತು ಬೆಳೆಗಳ ಕುರಿತ ವಿವರವಾದ ಮಾಹಿತಿಯನ್ನೂ ನೀಡುತ್ತವೆ".[೧೧] ದಟ್ಟವಾದ ಕಾಡುಗಳಿಂದ ಆವರಿಸಿಕೊಂಡಿದ್ದ ಈ ಪ್ರದೇಶದಲ್ಲಿ ಬೇಸಾಯಕ್ಕೆ ಯೋಗ್ಯವಾದ ಕಡೆಗಳಲ್ಲೆಲ್ಲ ಕಾಡು ಕಡಿದು ಹೊಲಗದ್ದೆಗಳನ್ನು ನಿರ್ಮಿಸಿ ಭತ್ತ ಬೇಸಾಯದ ಸಂಸ್ಕೃತಿಯನ್ನು ತುಳುವರು ಹುಟ್ಟು ಹಾಕಿದ್ದಾರೆ. ಹಾಗಾಗಿ ಹೊಟ್ಟೆಗೆ ಅನ್ನದ ಮೂಲಕ ಜೀವಕ್ಕೆ ಪ್ರಾಣ ಶಕ್ತಿ ನೀಡುವ ಉತ್ಪಾದನೆಯಾಗಿರುವ ಭತ್ತ ಬೇಸಾಯ ತುಳುನಾಡಿನ ಮುಖ್ಯ ಕಸುಬು. ಈ ಭತ್ತ ಬೇಸಾಯ ತುಳುವರಿಗೆ ಕೇವಲ ಒಂದು ಕಸುಬು ಮಾತ್ರವಲ್ಲ; ಅದೊಂದು ಧಾರ್ಮಿಕ ಕೈಂಕರ್ಯ ಕೂಡ. ತುಳುವರಲ್ಲಿ ಭತ್ತ ಕೃಷಿಯ ಬಗ್ಗೆ ಒಂದು ವಿಧವಾದ ಪವಿತ್ರ ಭಾವನೆಯಿದೆ. ತಾವು ಬೆಳೆದ ಪೈರಲ್ಲಿ-ಬೆಳೆಯಲ್ಲಿ ಕೃಷಿಕರು ದೈವಿಕ ಶಕ್ತಿಯನ್ನು ಕಾಣುತ್ತಾರೆ. ಈ ಕೃಷಿಗೆ

ಪೂರಕವಾದ ಮಣ್ಣು (ಭೂಮಿ), ಗಾಳಿ, ನೀರು, ಬೆಳಕು, ಬೆಂಕಿಗಳನ್ನು ತುಳು ಜನಪದರು ದೈವೀಶಕ್ತಿ ರೂಪಗಳೆಂದು ಭಾವಿಸುತ್ತಾರೆ. ಸದಾ ನೀರಿನಲ್ಲೇ ಇದ್ದು ಬೆಳೆಯುವ ಭತ್ತ ಬೆಳೆ ಅದು ದೇವರ ಕೃಪೆ ಎಂದು ನಂಬಿದ ಜನ ತುಳುವರು. ಈ ಹಿನ್ನೆಲೆಯಲ್ಲಿ ಗಮನಿಸುವಾಗ ಉಳುಮೆಗೆ ಸಹಕಾರಿಯಾಗುವ ಎತ್ತು, ಕೋಣ, ನೊಗ, ನೇಗಿಲು ಇವೆಲ್ಲವುಗಳೂ ಪವಿತ್ರವಾದವುಗಳು.

ಈಗಾಗಲೇ ಮೊದಲ ಅಧ್ಯಾಯದಲ್ಲಿ ಪ್ರಸ್ತಾಪಿಸಿರುವಂತೆ ಪಗ್ಗು, ಬೇಶ, ಕಾರ್ತೆಲ್, ಆಟಿ, ಸೋಣ, ನಿರ್ನಾಲ, ಬೊಂತೆಲ್, ಜಾರ್ದೆ, ಪೆರಾರ್ದೆ, ಪೊನ್ನಿ, ಮಾಯಿ, ಸುಗ್ಗಿ–ಈ ೧೨ ತಿಂಗಳುಗಳ ತುಳುವರ ಕಾಲ ಪರಿಕಲ್ಪನೆ ಮತ್ತು ಭತ್ತ ಬೇಸಾಯ ಇವು ಇಲ್ಲಿನ ಮಳೆ ಬಿಸಿಲುಗಳ ವಾರ್ಷಿಕ ಋತು ಆವರ್ತನವನ್ನು ಅವಲಂಬಿಸಿದೆ. ಅಂತೆಯೇ ವಾರ್ಷಿಕ ಆವರ್ತನದ ಆಚರಣೆಗಳೂ, ಜೀವನಾವರ್ತನ ಆಚರಣೆಗಳೂ ಪಗ್ಗು 'ಸಿಂಗೊಡೆ' ಮೊದಲ್ಗೊಂಡು ವರ್ಷದುದ್ದಕ್ಕೂ ಭತ್ತ ಬೇಸಾಯದ ಸಂದರ್ಭಗಳನ್ನು ಗಮನದಲ್ಲಿಟ್ಟುಕೊಂಡು ಆಚರಿಸಲ್ಪಡುವಲ್ಲಿ ತುಳುನಾಡ ಸಂಸ್ಕೃತಿಯ ದರ್ಶನವಾಗುತ್ತದೆ.

೧. **ಪಗ್ಗು ತಿಂಗಳು (ಮೇಷ ಮಾಸ):** ಇದು ಏಪ್ರಿಲ್–ಮೇ ತಿಂಗಳಲ್ಲಿ ಬರುತ್ತದೆ. ತುಳುವರಿಗೆ ಮೊದಲ ತಿಂಗಳು. ಪಗ್ಗು ತಿಂಗಳ ಮೊದಲ ದಿನವನ್ನು 'ಬಿಸು' ಆಚರಣೆ ಎಂಬುದಾಗಿ ಆಚರಿಸಲಾಗುತ್ತದೆ. ಈ ಆಚರಣೆಯ ಮೂಲ ಆಶಯ ಭತ್ತ ಬೇಸಾಯಕ್ಕೆ ಸಂಬಂಧಿಸಿದ್ದಾಗಿದೆ. ಪಗ್ಗು ತಿಂಗಳಲ್ಲಿ ಬಿರು ಬೇಸಿಗೆಯಾಗಿರುತ್ತದೆ. ಆಗೊಮ್ಮೆ ಈಗೊಮ್ಮೆ ಗುಡುಗು ಮಿಂಚಿನ ಮಳೆ ಸಂಜೆಯಿಂದ ಸಂಜೆಗೆ ಬರತೊಡಗುತ್ತದೆ. ಇಂಥ ತಿಂಗಳಾರಂಭದ ದಿನ 'ಬಿಸು' ಆಚರಣೆಯ ಮೂಲಕ ಏಣೇಲು ಬೆಳೆಯ ಮುಹೂರ್ತ ಪ್ರಾರಂಭವಾಗುತ್ತದೆ. 'ಬಿಸು' ದಿನ ಗದ್ದೆಯಲ್ಲಿ 'ಬಿತ್ತು' ಹಾಕಲಾಗುತ್ತದೆ. ಇದನ್ನು 'ಕೈ ಬಿತ್ತ್ ಪಾಡುನ' ಎನ್ನುತ್ತಾರೆ. ಈ ತಿಂಗಳಲ್ಲಿ ಗದ್ದೆ ಉಳುವುದಕ್ಕೆ ಶುರುಮಾಡುತ್ತಾರೆ. ನೇಜಿ ಹಾಕುತ್ತಾರೆ. ಆದುದರಿಂದ ಪಗ್ಗು ತಿಂಗಳಲ್ಲಿ ಬರುವ ತುಳುವರ ಮೊದಲ ಆಚರಣೆಯೇ ಭತ್ತ ಬೇಸಾಯದ ಸಂದರ್ಭವನ್ನು ಆಧರಿಸಿಕೊಂಡಿರುವುದು ಕಂಡು ಬರುತ್ತದೆ.

೨. **ಬೇಷ ತಿಂಗಳು (ವೃಷಭ ಮಾಸ):** ಇದು ಮೇ–ಜೂನ್ ತಿಂಗಳಲ್ಲಿ ಬರುತ್ತದೆ. ಈ ತಿಂಗಳೂ ಏಣೇಲು ಬೆಳೆ ಬೆಳೆಯುವ ಹಿನ್ನೆಲೆಯಲ್ಲಿ ಅತ್ಯಂತ ಮಹತ್ವದ ತಿಂಗಳು. ಬೇಶ ಹತ್ತು ಹೋಗುವ ದಿನ ತುಳುವರು 'ಪತ್ತನಾಜೆ' ಆಚರಣೆ ಮಾಡುತ್ತಾರೆ. ಈ ಆಚರಣೆಯಲ್ಲಿ ಭತ್ತ ಬೇಸಾಯದ ನೇರ ಸಂಬಂಧ ಕಂಡು ಬರುವುದಿಲ್ಲವಾದರೂ ಸಕಾಲಕ್ಕೆ ಭತ್ತ ಬೇಸಾಯವನ್ನು ಮಾಡುವ ಆಶಯದೊಂದಿಗೆ ಈ ಆಚರಣೆ ನಡೆಯುವುದು ತಿಳಿಯುತ್ತದೆ.

ಬೇಶ ತಿಂಗಳಿಂದ ಮಳೆಗಾಲ ಆರಂಭವಾಗಿ ನೀರಾಗುವ ಕಾಲವಾಗುತ್ತದೆ. ಆದ್ದರಿಂದ ನೀರಾದ ಕೂಡಲೇ ಗದ್ದೆ ಉಳುಮೆ ಮಾಡಿ ನೇಜಿ ತೆಗೆದು ನಾಟಿ ಮಾಡುವ ಏಣೇಲು ಬೆಳೆಯ ಭರದ ಸಿದ್ಧತೆಯಾಗಲೇಬೇಕಾಗಿರುವುದರಿಂದ 'ಪತ್ತನಾಜೆ' ಒಂದು ಗಡುವಿನ ನೆಲೆಯಲ್ಲಿ ಭತ್ತ ಬೇಸಾಯಕ್ಕೆ ಪೂರಕ ಆಚರಣೆಯಾಗಿ ನಡೆಯುತ್ತದೆ. ಪಗ್ಗು ತಿಂಗಳ ಬೇಸಾಯದ ಚಟುವಟಿಕೆ ಇಲ್ಲಿ ಮುಂದುವರಿಯುತ್ತದೆ.

೩. **ಕಾರ್ತೆಲ್ (ಮಿಥುನ ಮಾಸ):** ಇದು ಜೂನ್-ಜುಲೈ ತಿಂಗಳಲ್ಲಿ ಬರುತ್ತದೆ. ಈ ತಿಂಗಳಲ್ಲಿ ಏಣೇಲು ಬೆಳೆಗೆ ಸಂಬಂಧಿಸಿದ ಕೃಷಿ ಚಟುವಟಿಕೆ ಮುಂದುವರಿಯುತ್ತದೆ. ಸಂಪೂರ್ಣ ಮಳೆಗಾಲ ಆರಂಭವಾಗಿರುತ್ತದೆ. ಜನರೆಲ್ಲ ಭತ್ತ ಬೇಸಾಯದ ಬಿರುಸಿನ ಚಟುವಟಿಕೆಯಲ್ಲಿರುತ್ತಾರೆ. ಆದ್ದರಿಂದಲೇ ಈ ತಿಂಗಳಲ್ಲಿ ಯಾವುದೇ ಆವರ್ತನದ ಆಚರಣೆಗಳು ನಡೆಯುವುದಿಲ್ಲ. ಈ ತಿಂಗಳಲ್ಲಿ ಬೇಸಾಯದ ಪ್ರಕ್ರಿಯೆಯೇ ಒಂದು ಆಚರಣೆಯಾಗಿರುತ್ತದೆ.

೪. **ಆಟಿ (ಕಟಕ ಮಾಸ):** ಜುಲೈ ಮತ್ತು ಆಗಸ್ಟ್ ತಿಂಗಳುಗಳ ನಡುವೆ ಆಟಿ ತಿಂಗಳು ಬರುತ್ತದೆ. ಕಾರ್ತೆಲ್ ತಿಂಗಳಲ್ಲಿಯೇ ಏಣೇಲು ಬೆಳೆಯ ಉಳುಮೆ, ನಾಟಿ ಕಾರ್ಯ ಇತ್ಯಾದಿ ಪೂರ್ತಿ ಮುಗಿದಿರುವುದರಿಂದ ಆಟಿ ತಿಂಗಳಲ್ಲಿ ಬೇಸಾಯದ ಕಾರ್ಯ ಇರುವುದಿಲ್ಲ. ಆಟಿ ತುಳುನಾಡಿನಲ್ಲಿ ಎಡೆ ಬಿಡದೆ ಮಳೆ ಸುರಿಯುವ ತಿಂಗಳು. ಕೆಲವೊಮ್ಮೆ ತಡೆಯಲಾಗದ ಬಿಸಿಲು ಇರುತ್ತದೆ. ಈ ಹವಾಮಾನದ ವೈಪರೀತ್ಯದಿಂದಾಗಿ ಆಟಿ ತಿಂಗಳಲ್ಲಿ ಸಾಮಾನ್ಯವಾಗಿ ಅನಾರೋಗ್ಯ ಕಾಣಿಸಿಕೊಳ್ಳುವುದಿದೆ. ಆದುದರಿಂದ ಯಾವುದೇ ಕೆಲಸ ಕಾರ್ಯಗಳು ನಡೆಯುವುದಿಲ್ಲ. ಅಂತೆಯೇ ಯಾವುದೇ ಕಾರ್ಯಕ್ರಮಗಳನ್ನು ಆಟಿ ತಿಂಗಳಲ್ಲಿ ಮಾಡುವುದಿಲ್ಲ. ಹಾಗಾಗಿ 'ಆಟಿ' ನಿಷೇಧದ ತಿಂಗಳು. ಇಂತಹ ತಿಂಗಳಲ್ಲಿ 'ಆಟಿ ಅಮಾವಾಸ್ಯೆ' ಆಚರಣೆ ಬರುತ್ತದೆ. ಈ ಆಚರಣೆಯ ವಿಧಿವಿಧಾನಗಳನ್ನು ಗಮನಿಸುವಾಗ ಜನ ತಮ್ಮ ಆರೋಗ್ಯವನ್ನು ಕಾಪಾಡಿಕೊಳ್ಳುವುದರ ಜೊತೆಗೆ, ಭತ್ತ ಬೇಸಾಯವನ್ನು ಸಂರಕ್ಷಿಸುವ ಕ್ರಮಗಳು ಬಹಳ ಮುಖ್ಯವಾಗಿ ಕಂಡು ಬರುತ್ತವೆ.

೫. **ಸೋಣ (ಸಿಂಹ ಮಾಸ):** ಆಗಸ್ಟ್ ಮತ್ತು ಸಪ್ಟಂಬರ್ ತಿಂಗಳ ನಡುವೆ ಸೋಣ ತಿಂಗಳು ಬರುತ್ತದೆ. ತುಳುನಾಡಿನ ಮಟ್ಟಿಗೆ ಸೋಣ ತಿಂಗಳು ಉತ್ಸಾಹ ಚಿಗುರೊಡೆಯುವ ಕಾಲ. ಒಂದರ್ಥದಲ್ಲಿ ಹೊಸ ವರ್ಷದ ಕಾಲ. ಈ ತಿಂಗಳಲ್ಲಿ ನಾಟಿ ಮಾಡಿದ ಏಣೇಲು ಬೆಳೆ ಸೊಂಪಾಗಿ ಬೆಳೆಯುತ್ತಿರುತ್ತದೆ. ಗದ್ದೆಗಳಲ್ಲಿರುವ ಕಳೆ ತೆಗೆಯುವುದು ಇತ್ಯಾದಿ ಕಾರ್ಯಗಳು

ನಡೆಯುತ್ತವೆ. ಅಲ್ಲದೆ, ಮಳೆಯ ತೀವ್ರತೆ ಕಡಿಮೆಯಾಗುತ್ತಾ ಬರುತ್ತದೆ. ಹಬ್ಬ ಆಚರಣೆಗಳು ಆರಂಭವಾಗುವ ತಿಂಗಳು. ಅಂತೆಯೇ ಬೇಶ ತಿಂಗಳ ಪತ್ತನಾಜೆಗೆ ಮುಕ್ತಾಯಗೊಳಿಸಿದ ಕಾರ್ಯಕ್ರಮಗಳನ್ನು ಮತ್ತೆ ಪ್ರಾರಂಭಿಸಲು ಪ್ರಶಸ್ತವಾದ ತಿಂಗಳು ಸೋಣ. ಈ ತಿಂಗಳಲ್ಲಿ 'ನಾಗರ ಪಂಚಮಿ' ಆಚರಣೆ ಬರುತ್ತದೆ. (ಕೆಲವೊಮ್ಮೆ ಆಟಿ ತಿಂಗಳ ಕೊನೆಯಲ್ಲಿಯೂ ಬರುವುದುಂಟು.) ಈ ಆಚರಣೆ ಮೇಲ್ನೋಟಕ್ಕೆ ನಾಗನಿಗೆ ಸಂಬಂಧಿಸಿದ್ದಾದರೂ ಆಚರಣೆಯ ಹಿಂದಿರುವ ಮೂಲ ಆಶಯ ಭತ್ತ ಬೇಸಾಯದ ರಕ್ಷಣೆಯಾಗಿದೆ.

೬. **ನಿರ್ನಾಲ (ಕನ್ಯಾ ಮಾಸ):** ಈ ತಿಂಗಳಲ್ಲಿ ಏಣೇಲು ಬೆಳೆ ಕಟಾವಿಗೆ ಬರುತ್ತದೆ. ಸಪ್ಟಂಬರ್ ಮತ್ತು ಅಕ್ಟೋಬರ್ ತಿಂಗಳ ಕಾಲಾವಧಿ ಇದಾಗಿರುತ್ತದೆ. ಬಂಗಾರದ ಬೆಳೆ ಬರುವ ತಿಂಗಳಿದು. ಸಮೃದ್ಧಿಯ ತಿಂಗಳು. ಈ ತಿಂಗಳಲ್ಲಿ 'ಕುರಲ್ ಪರ್ಬ', 'ಪುದ್ವಾರ್' ಮತ್ತು 'ಕಾವೊರಿ ಸಂಕ್ರಾಂತಿ' ಹೀಗೆ ಮೂರು ಪ್ರಮುಖ ಆಚರಣೆಗಳು ತುಳುನಾಡಿನಲ್ಲಿ ಕಂಡು ಬರುತ್ತವೆ. ಬಹುಷಃ ತುಳುನಾಡಿನ ವಾರ್ಷಿಕ ಆವರ್ತನದ ಆಚರಣೆಗಳಲ್ಲಿ ಒಂದೇ ತಿಂಗಳಲ್ಲಿ ಹೆಚ್ಚು ಆಚರಣೆಗಳು ಬರುವ ತಿಂಗಳೆಂದರೆ ನಿರ್ನಾಲ ತಿಂಗಳು. ಈ ಮೂರೂ ಆಚರಣೆಗಳೂ ನೇರವಾಗಿ ಭತ್ತ ಬೇಸಾಯಕ್ಕೆ ಸಂಬಂಧಿಸಿದವುಗಳು. 

೭. **ಬೊಂತೆಲ್ (ತುಲಾ ಮಾಸ):** ಏಣೇಲು ಬೆಳೆ ಕಟಾವಾಗಿ ಗದ್ದೆಯಿಂದ ಬಂದು ಮನೆ ತುಂಬಿಕೊಂಡಿರುವ ಸಂಭ್ರಮದ ತಿಂಗಳು. ನಿರ್ನಾಲ ತಿಂಗಳ ಸಂಭ್ರಮೋತ್ಸಾಹ ಈ ತಿಂಗಳಲ್ಲಿಯೂ ಮುಂದುವರಿಯುತ್ತದೆ. ಮಳೆಗಾಲ ದೂರವಾಗಿ ವಾತಾವರಣದಲ್ಲಿ ಹೊಸ ಬದಲಾವಣೆ ಕಂಡುಬರುತ್ತದೆ. ಹಿತವಾದ ಚಳಿ ಕಂಡುಬರುವ ಕಾಲವಿದು. ಅಂದರೆ ಅಕ್ಟೋಬರ್-ನವೆಂಬರ್ ತಿಂಗಳು. ಸಾಮಾನ್ಯವಾಗಿ ಏಣೇಲು ಬೆಳೆಯ ಕಾರ್ಯ ಮುಕ್ತಾಯಗೊಂಡಿರುತ್ತದೆ. ನಂತರ ಸುಗ್ಗಿ ಬೇಸಾಯಕ್ಕೆ ಸಿದ್ಧತೆ ನಡೆಸುವ ತಿಂಗಳು ಬೊಂತೆಲ್. ಈ ತಿಂಗಳಲ್ಲಿಯೇ ತುಳುವರ ದೊಡ್ಡ ಆಚರಣೆ 'ಪರ್ಬ' ಬರುತ್ತದೆ. ಪರ್ಬ ಆಚರಣೆಯ ವಿಧಿ ವಿಧಾನಗಳನ್ನು ವಿಶ್ಲೇಷಿಸಿದಾಗ ಅದು ಭತ್ತ ಬೇಸಾಯದ ಗರ್ಭದಿಂದ ಹುಟ್ಟಿಕೊಂಡಿರುವುದು ಮನದಟ್ಟಾಗುತ್ತದೆ.

೮. **ಜಾರ್ದೆ(ವೃಶ್ಚಿಕಮಾಸ):** ನವೆಂಬರ್-ಡಿಸೆಂಬರ್ ತಿಂಗಳ ಕಾಲದಲ್ಲಿ ಜಾರ್ದೆ ತಿಂಗಳು ಬರುತ್ತದೆ. ಈಗಾಗಲೇ ಹೇಳಿದಂತೆ ಸುಗ್ಗಿ ಬೇಸಾಯದ ಚಟುವಟಿಕೆ ಈ ತಿಂಗಳಲ್ಲಿ ವಿಶೇಷವಾಗಿ ನಡೆಯುತ್ತಿರುತ್ತದೆ. ಕೆಲವು ಮನೆತನಗಳವರು ಸುಗ್ಗಿ ಬೇಸಾಯದ ಮುಕ್ತಾಯದ ದಿನ 'ಗದ್ದೆಕೋರಿ' ಆಚರಣೆಯನ್ನು ಆಚರಿಸುತ್ತಾರೆ. ಈ ತಿಂಗಳಲ್ಲಿ

ಎತ್ತುಗಳನ್ನು ಮಾರಾಟಮಾಡಲು, ಇಲ್ಲವೆ ಕೊಂಡುಕೊಳ್ಳಲು ಅನುಕೂಲವಾಗುವಂತೆ ಅಲ್ಲಲ್ಲಿ ಜಾನುವಾರು ಜಾತ್ರೆಗಳು ನಡೆಯುತ್ತವೆ. ಇವುಗಳನ್ನು ಹೊರತುಪಡಿಸಿದರೆ ನಿರ್ದಿಷ್ಟವಾಗಿ ನಡೆಯುವ ವಾರ್ಷಿಕ ಆವರ್ತನದ ಆಚರಣೆ ಈ ತಿಂಗಳಲ್ಲಿ ಇರುವುದಿಲ್ಲ.

೯. **ಪೆರಾರ್ದೆ(ಧನುಸ್ಸು ಮಾಸ):** ದಶಂಬರ-ಜನವರಿ ತಿಂಗಳಲ್ಲಿ ತುಳುವರ ಪೆರಾರ್ದೆ ತಿಂಗಳು ಬರುತ್ತದೆ. ಈ ತಿಂಗಳ ಹೊತ್ತಿಗೆ ಸುಗ್ಗಿಯ ಬೇಸಾಯ ಚಟುವಟಿಕೆ ಮುಗಿದಿರುತ್ತದೆ. ಆದರೆ ಏಣೇಲು ಬೆಳೆಯ ಭತ್ತವನ್ನು ಬೇಯಿಸಿ ಅಕ್ಕಿಮಾಡುವ ಚಟುವಟಿಕೆ ನಡೆಯುತ್ತದೆ. ಉಳಿದಂತೆ ಮನೆ ಕಟ್ಟುವುದು ಮತ್ತು ಇತರ ಸಮಾರಂಭಗಳಿಗೆ ಸಂಬಂಧಿಸಿದಂತೆ ಜನರು ಸಿದ್ಧತೆಗಳನ್ನು ನಡೆಸುವುದು ಕಂಡುಬರುತ್ತದೆ.

೧೦.**ಪೊನ್ನಿ (ಮಕರ ಮಾಸ):** ಜನವರಿ ಮತ್ತು ಫೆಬ್ರವರಿ ತಿಂಗಳ ಅವಧಿಯಲ್ಲಿ ಪೊನ್ನಿ ತಿಂಗಳು ಬರುತ್ತದೆ. ಸುಗ್ಗಿ ಬೆಳೆ ಹೊಲದಲ್ಲಿ ನಳನಳಿಸುತ್ತಿರುತ್ತದೆ. ಚಳಿಗಾಲ ಕಳೆದು ಬೇಸಿಗೆ ಕಾಲಿಡುವ ಸಂಕ್ರಮಣದ ಕಾಲ. ಪೆರಾರ್ದೆ ತಿಂಗಳ ಚಟುವಟಿಕೆ ಮುಂದುವರಿಯುತ್ತದೆ. ಅಂತೆಯೇ ಕಾಲಪರಿವರ್ತನೆಯ ತಿಂಗಳಾದ್ದರಿಂದ ಈ ತಿಂಗಳ ಕೊನೆಯಲ್ಲಿ 'ಕೆಡ್ಡಸ' ಆಚರಣೆ ಬರುತ್ತದೆ. ಈ ಆಚರಣೆಯೂ ನೇರವಾಗಿ ಭತ್ತ ಬೇಸಾಯವನ್ನು ಸೂಚಿಸುವುದಿಲ್ಲ. ಇದು ಭೂಮಿ ಪೂಜೆಯಾಗಿದೆ. ಇದು ಫಲವಂತಿಕೆಯ ಆಚರಣೆಯಾದ್ದರಿಂದ ನೆಲವೂ ಫಲವತಿಯಾಗುವ ಕಲ್ಪನೆಯಲ್ಲಿ ಭತ್ತ ಬೆಳೆಯುವ ವಾಸ್ತವ ಅಡಗಿದೆ. ಆದ್ದರಿಂದ ಇದು ಭತ್ತ ಬೇಸಾಯದ ಪೋಷಣೆಯ ಸಾಂಕೇತಿಕ ಆಚರಣೆಗೆ ಅವಕಾಶ ಮಾಡಿಕೊಡುತ್ತದೆ.

೧೧.**ಮಾಯಿ (ಕುಂಭಮಾಸ):** ಫೆಬ್ರವರಿ ಮತ್ತು ಮಾರ್ಚ್ ತಿಂಗಳ ಅವಧಿಯಲ್ಲಿ ಮಾಯಿ ತಿಂಗಳು ಬರುತ್ತದೆ. ಬೇಸಿಗೆಯ ವಾತಾವರಣ ಆರಂಭವಾಗುತ್ತದೆ. ಸುಗ್ಗಿ ಬೆಳೆಯ ಕಟಾವು ಕಾರ್ಯ ನಡೆದು ಭತ್ತ ಮನೆಗೆ ಬರುವುದಕ್ಕೆ ಆರಂಭವಾಗುತ್ತದೆ. ಸಮೃದ್ಧಿಯ ಕಾಲ. ಉಳಿದಂತೆ ಬೇಸಾಯೇತರ ಚಟುವಟಿಕೆಗಳು ಮುಂದುವರಿಯುತ್ತವೆ. ಆದರೆ ಯಾವುದೇ ಆವರ್ತನದ ಅಚರಣೆಗಳು ಇರುವುದಿಲ್ಲ.

೧೨.**ಸುಗ್ಗಿ (ಮೀನ ಮಾಸ):** ಮಾರ್ಚ್-ಏಪ್ರಿಲ್ ತಿಂಗಳಲ್ಲಿ ಸುಗ್ಗಿ ತಿಂಗಳು ಬರುತ್ತದೆ. ತುಳುವರ ವರ್ಷದ ಕೊನೆಯ ತಿಂಗಳು. ಹೆಸರೇ ಸೂಚಿಸುವಂತೆ ಸುಗ್ಗಿ ಬೆಳೆಯ ಕಟಾವು ಕಾರ್ಯ ಮುಂದುವರಿದು ಫಸಲು ಮನೆ ತುಂಬಿರುತ್ತದೆ. ಸಮೃದ್ಧಿಯ ಕಾಲ. ಭತ್ತ, ಅಕ್ಕಿಯನ್ನು ಮನೆಯಲ್ಲಿ ಶೇಖರಿಸಿಟ್ಟು ಸಂತೋಷವಾಗಿ ನಾನಾ ರೀತಿಯ ಕುಣಿತ ಮತ್ತು ಹಾಡುಗಳ

ಮೂಲಕ ತುಳುವರು ಸುಗ್ಗಿ ತಿಂಗಳಲ್ಲಿ ಸಂಭ್ರಮಿಸುತ್ತಾರೆ. ಆದ್ದರಿಂದ ಈ ಜನಪದ ಕುಣಿತಗಳೂ ಭತ್ತ ಬೇಸಾಯದ ಹಿನ್ನೆಲೆಯಲ್ಲಿಯೇ ನಡೆಯುವುದು ಕಂಡುಬರುತ್ತದೆ.

ಹೀಗೆ ಕಾಲ ಮತ್ತು ದೇಶದ ಹಿನ್ನೆಲೆಯಲ್ಲಿ ತುಳುನಾಡಿನಲ್ಲಿ ವಾರ್ಷಿಕ ಆವರ್ತನದಲ್ಲಿ ಭತ್ತದ ಮೂರು ಬೆಳೆ ತೆಗೆಯಲು ಆರಂಭಿಸಿರುವುದನ್ನು ಗಮನಿಸಬಹುದು. ಮಳೆಗಾಲದ ಬೆಳೆಯನ್ನು 'ಏಣೇಲು' ಬೆಳೆ ಎಂದು ಕರೆಯುತ್ತಾರೆ. ಕೆಲವೆಡೆ 'ಕಾರ್ತಿ' ಬೆಳೆ ಎಂದೂ ಕರೆಯುವುದುಂಟು. 'ಕಾರ್ತೆಲ್' ತಿಂಗಳಲ್ಲಿ ಈ ಬೆಳೆಯ ಬೇಸಾಯ ಮಾಡುವುದರಿಂದ ಈ ಹೆಸರು ರೂಢಿಯಲ್ಲಿ ಬಂದಿರಬಹುದೆಂದು ಊಹಿಸಬಹುದು. ಈ ಬೆಳೆ ಪೂರ್ತಿ ಮಳೆಗಾಲದ ನೀರಿನ ಆಶ್ರಯದಲ್ಲಿ ಬೆಳೆಯುವಂತಹುದು. ತುಳುನಾಡಿನಲ್ಲಿ ಗದ್ದೆಗಳಲ್ಲೂ ಮೂರು ರೀತಿಯ ಗದ್ದೆಗಳಿರುತ್ತವೆ. ಬೈಲು(ಬಯಲು)ಗದ್ದೆ, ಮಜಲು ಗದ್ದೆ, ಬೆಟ್ಟು ಗದ್ದೆ, ಎಂಬುದಾಗಿ. 'ಏಣೇಲು' ಬೆಳೆಯನ್ನು ಸಾಮಾನ್ಯವಾಗಿ ಈ ಮೂರು ರೀತಿಯ ಗದ್ದೆಗಳಲ್ಲಿಯೂ ಬೆಳೆಯುತ್ತಾರೆ. ಅಂದರೆ ಮಳೆ ನೀರಿನ ಆಶ್ರಯ ಇದಕ್ಕೆ ಅನುಕೂಲಕರವಾಗಿರುತ್ತದೆ. 'ಏಣೇಲು ಬೆಳೆ'ಯ ಸಮಯ ಸಾಮಾನ್ಯವಾಗಿ ಕಾರ್ತೆಲ್‌ನಿಂದ ನಿರ್ನಾಲ ಇಲ್ಲವೇ ಬೊಂತೆಲ್ ತಿಂಗಳವರೆಗೆ ಇರುತ್ತದೆ. ನಂತರ ಬೆಳೆಯುವ ಬೆಳೆಯನ್ನು 'ಸುಗ್ಗಿ' ಬೆಳೆ ಎಂದು ಕರೆಯುತ್ತಾರೆ. ಸುಗ್ಗಿ ಬೆಳೆಯುವ ಸಮಯ ಸಾಧಾರಣವಾಗಿ ಬೊಂತೆಲ್, ಜಾರ್ದೆ ತಿಂಗಳಿಂದ ಮಾಯಿ ಇಲ್ಲವೆ ಸುಗ್ಗಿ ತಿಂಗಳವರೆಗೆ ಇರುತ್ತದೆ. ಸುಗ್ಗಿ ಬೆಳೆಯುವ ಕಾಲಕ್ಕೆ ಮಳೆಗಾಲ ನಿಂತಿರುತ್ತದೆ. ಆದರೆ ಮಳೆಗಾಲ ಕಳೆದ ತಕ್ಷಣವೇ ಈ ಬೆಳೆ ಮಾಡುವುದರಿಂದ ಭೂಮಿಯಲ್ಲಿ ನೀರಿನ ಒರತೆ ಹೆಚ್ಚಾಗಿರುತ್ತದೆ. ಸಾಮಾನ್ಯವಾಗಿ ಬೈಲು ಗದ್ದೆಗಳಲ್ಲಿ, ಈ ಸುಗ್ಗಿ ಬೆಳೆ ಬೆಳೆಯುವುದು ಕಂಡು ಬರುತ್ತದೆ. ಇನ್ನು ನೀರು ಹಾಯಿಸುವ ವ್ಯವಸ್ಥೆ ಇರುವವರು ಸುಗ್ಗಿ ಬೆಳೆಯನ್ನು ಮಜಲು ಗದ್ದೆಗಳಲ್ಲಿಯೂ ಮಾಡುತ್ತಾರೆ. ಆದರೆ ಬೆಟ್ಟು ಗದ್ದೆಗಳಲ್ಲಿ ಸುಗ್ಗಿ ಬೆಳೆ ಮಾಡುವುದಿಲ್ಲ. ಯಾಕೆಂದರೆ ಬೆಟ್ಟು ಗದ್ದೆಗಳು ಎತ್ತರ ಜಾಗದಲ್ಲಿರುವುದರಿಂದ ನೀರು ಹಾಯಿಸಿದರೂ ಪ್ರಯೋಜನವಾಗುವುದಿಲ್ಲ. ಮೂರನೆಯದಾಗಿ ಬೆಳೆಯುವ ಬೆಳೆ ಎಂದರೆ ಅದು 'ಕೊಳಕೆ' ಬೆಳೆ. ಕೊಳಕೆ ಬೆಳೆಯಲು ಧಾರಾಳ ನೀರಿನ ಆಶ್ರಯವಿರಬೇಕು. ಆದ್ದರಿಂದ ಎಲ್ಲರೂ ಕೊಳಕೆ ಬೆಳೆ ಬೆಳೆಯುವುದಿಲ್ಲ. ಕೊಳಕೆ ಬೆಳೆ ಬೆಳೆದರೂ ಸಾಮಾನ್ಯವಾಗಿ ಬೈಲು ಗದ್ದೆಗಳಲ್ಲಿ ಮಾತ್ರ ಬೆಳೆಯುವುದು ಕಂಡು ಬರುತ್ತದೆ. ಈ ಬೆಳೆ ಬೆಳೆಯುವವರು ಏಣೇಲು ಮತ್ತು ಸುಗ್ಗಿ ಬೆಳೆಯನ್ನು ಸ್ವಲ್ಪ ಬೇಗ ಮಾಡುತ್ತಾರೆ. ಹಾಗಾಗಿ ಈ ಕೊಳಕೆ ಬೆಳೆಯನ್ನು ಸಾಮಾನ್ಯವಾಗಿ ಸುಗ್ಗಿ ಬೆಳೆಯ ನಂತರ ಬೆಳೆಸುತ್ತಾರೆ.

ಹೀಗೆ ತುಳುನಾಡಿನ ಭತ್ತ ಬೇಸಾಯಕ್ಕೆ ಪ್ರಾಚೀನ ಇತಿಹಾಸವಿದೆ. ಪವಿತ್ರವಾದ ಪರಂಪರೆಯಿದೆ. ವ್ಯವಸಾಯದ ಪ್ರತಿ ಹಂತವೂ ಕೃಷಿಕರಿಗೆ ಪವಿತ್ರವಾದುದು. ಭೂಮಿಯ ಉಳುಮೆ, ಬಿತ್ತನೆ, ನಾಟಿ, ಕೊಯಿಲು, ರಾಶಿ, ಧಾನ್ಯ ಸಂಗ್ರಹಣೆ, ಬಿತ್ತನೆ ಬೀಜ, ದಾಸ್ತಾನು, ಹೊಸ ಭತ್ತ ಬೇಯಿಸುವುದು, ಹೊಸ ಅಕ್ಕಿ ಊಟ ಮಾಡುವುದು-ಹೀಗೆ ಎಲ್ಲ ಸಂದರ್ಭಗಳಲ್ಲೂ ವ್ಯವಸಾಯಗಾರರು ಭೂಮಿ, ಬೀಜ, ಪೈರು, ಧಾನ್ಯ, ಅನ್ನಾಹಾರಗಳಲ್ಲಿ ದೈವತ್ವವನ್ನು ಕಾಣುತ್ತಾರೆ. ಈ ದೈವಿಕ ಕಲ್ಪನೆಯ ಜೊತೆಗೆ ಕೃಷಿಗೆ ಸಂಬಂಧಿಸಿದಂತೆ ತುಳುವರು 'ಸಮೃದ್ಧಿ'ಯ ಆಶಯವನ್ನು ಹೊಂದಿರುವುದು ಕಂಡು ಬರುತ್ತದೆ. ಈ ಹಿನ್ನೆಲೆಯಲ್ಲಿ ತಾವು ಬೆಳೆಯುವ ಬೆಳೆ ಉತ್ತಮ ಫಸಲನ್ನು (ಇಳುವರಿಯನ್ನು) ಕೊಡಲೆಂಬ ಆಶಯದಿಂದ ಕೃಷಿಕರು ವ್ಯವಸಾಯದ ಪ್ರತಿ ಹಂತದಲ್ಲೂ ಒಂದಲ್ಲೊಂದು ಆಚರಣೆಗಳನ್ನು ಧಾರ್ಮಿಕ ಶ್ರದ್ಧೆಯಿಂದ ನಡೆಸಿಕೊಂಡು ಬಂದಿದ್ದಾರೆ. ಇವು ಆವರ್ತನದ ನೆಲೆಯಲ್ಲಿ ಮುಂದುವರಿದುಕೊಂಡು ಬಂದಿವೆ. ಆದ್ದರಿಂದ ತುಳುನಾಡಿನ ವಾರ್ಷಿಕ ಆವರ್ತನದ ಆಚರಣೆಗಳ ಹುಟ್ಟಿಗೆ ಭತ್ತ ಬೇಸಾಯ ಸಂಸ್ಕೃತಿಯೇ ಮೂಲಕಾರಣ. ಅಂದರೆ ತುಳುನಾಡಿನಲ್ಲಿ ಭತ್ತ ಬೇಸಾಯ ಸಂಸ್ಕೃತಿಯ ಜೊತೆ ಜೊತೆಗೆ ಆವರ್ತನದ ಆಚರಣೆಗಳು, ನಂಬಿಕೆ-ಆರಾಧನೆ-ಉತ್ಸವಗಳು, ಆಟವಿನೋದಗಳು ಕೂಡ ಹುಟ್ಟಿಕೊಂಡಿರುವುದು ಗಮನಾರ್ಹ.

ಈ ಕುರಿತು ಡಾ.ಪುರುಷೋತ್ತಮ ಬಿಳಿಮಲೆಯವರು-"ಅಕ್ಕಿಯನ್ನು ಬೆಳೆಸುವುದು ಕರಾವಳಿಯ ಅನೇಕ ಆಚರಣೆಗಳಿಗೆ ಸಾಮಾನ್ಯ ಕಾರಣವಾಗಿದೆ. ಅಕ್ಕಿ ಹಸಿವನ್ನು ತೀರಿಸುತ್ತದೆ. ಈ ಅರ್ಥದಲ್ಲಿ ಒಕ್ಕಲುತನವೇ ಇಲ್ಲಿನ ಪ್ರಧಾನ ವೃತ್ತಿಯಾಗಿದೆ. ತುಳುನಾಡಿನ ಒಂದು ವರ್ಷದ ಜೀವನ ಚಕ್ರವನ್ನು ಪರಿಶೀಲಿಸಿದರೆ ಈ ವಿಷಯ ಸ್ಪಷ್ಟವಾಗುತ್ತದೆ. ಅಕ್ಕಿ ಬೆಳೆಯುವಾಗ ಪ್ರಾರ್ಥನೆ, ಭತ್ತವನ್ನು ಮನೆಗೆ ತಂದಾಗ ಸಂಭ್ರಮ, ಅಕ್ಕಿಯೇ ಬೆಳೆಯದ ಕಾಲ ಬರಗಾಲ, ಅದು ಗದ್ದೆಯಲ್ಲಿ ಬೆಳೆಯುತ್ತಿದ್ದರೆ ಉತ್ಸಾಹ-ಹೀಗೇ ವಾರ್ಷಿಕ ಜೀವನ ಕ್ರಮವನ್ನು ಅಕ್ಕಿ ನಿಯಂತ್ರಿಸುತ್ತದೆ"[೧೨] ಎಂದು ತುಳುನಾಡಿನ ಭತ್ತ ಬೇಸಾಯದ ಮಹತ್ವನ್ನು ವಿವರಿಸಿದ್ದಾರೆ. ಅಂದರೆ ತುಳುನಾಡಿನ ಪ್ರತಿಯೊಂದು ಚಟುವಟಿಕೆಗಳ ಹಿಂದೆಯೂ ಭತ್ತ ಬೇಸಾಯದ ಪಾತ್ರವೇ ಪ್ರಧಾನವಾಗಿರುತ್ತದೆ.

"ಹೀಗೆ ವಾರ್ಷಿಕ ಆವರ್ತನದಲ್ಲಿ ಅಕ್ಕಿಗೆ ಪ್ರಧಾನ ಸ್ಥಾನ ಸಂದಾಯವಾಗಿದೆ. ಅನೇಕ ಹಾಡುಗಳು ಮತ್ತು ಕಥನ ಕವನಗಳು ಇವನ್ನು ಅತ್ಯಂತ ಮುತುವರ್ಜಿಯಿಂದ ದಾಖಲಿಸಿವೆ. ಗದ್ದೆ, ಬೈಲು, ಮಜಲು, ಬೊಟ್ಟು, ಭಾಗ್ಯಾತು, ಕುಮೇರಿ ಮೊದಲಾದ ಬೆಳೆ ಸಂಬಂಧಿಯಾದ

ಸ್ಥಳಗಳಿಗೂ ಇಲ್ಲಿ ಮಹತ್ವ ಸಂದಾಯವಾಗುತ್ತದೆ. ಅಕ್ಕಿಯ ವಿವಿಧ ನಮೂನೆಗಳಾದ ಜೀರಸಾಲೆ, ಗಂಧಸಾಲೆ, ಮೆಂತೆಸಾಲೆ, ಸೋಮಸಾಲೆ, ಅಜಿಪಸಾಲೆ, ಕಳಮೆ, ಅಲ್ಲಿಗೆ, ಕಾಫಿಕಜೆ, ಸುಂಗಲ್, ಅಂಬಟ್ಟೆ, ದೊಡ್ಡಕ್ಕಿ, ರಾಜಕೈಮೆ, ಕಿನ್ನಿಬೀಜ, ಕೈಮೆ, ಸಮುಂಗೆ, ಮುಂಡಾಲೆ, ದಡ್ಡ್, ಕುದ್ರುಬೀಜ, ವೊಂತೆಚರೆ, ಕುಂಡೇರಕುಟ್ಟಿ, ತೆಕ್ಕಂ ಬೊಳ್ಳಿಯರಿ, ರಾಜನಕ್ಕಿ ಇವುಗಳನ್ನು ಈ ಹಾಡುಗಳು ಗಮನಿಸಿವೆ. ಕರಾವಳಿ ಮತ್ತು ಮಲೆನಾಡಿನ ಬಹುತೇಕ ಜನಪದ ಕಾವ್ಯಗಳೆಲ್ಲವೂ ವಾರ್ಷಿಕ ವೃತ್ತದಲ್ಲಿನ ಆಹಾರ ಪೂರೈಕೆಯ ಮಾಧ್ಯಮವಾದ ಅಕ್ಕಿಯನ್ನೇ ಪ್ರಧಾನ ವಸ್ತುವನ್ನಾಗಿ ಉಳ್ಳವುಗಳಾಗಿವೆ".[೧೩] ಹೀಗೆ ವಾರ್ಷಿಕ ಆವರ್ತನದ ಸಾಂಸ್ಕೃತಿಕ ನಡಾವಳಿಗಳಲ್ಲಿ ಭತ್ತಕ್ಕೆ ಮುಖ್ಯಸ್ಥಾನವಿರುವಂತೆ ಜೀವನಾವರ್ತನದ ಆಚರಣೆಗಳಲ್ಲಿ ಭತ್ತ ಇಲ್ಲವೆ ಅಕ್ಕಿಗೆ ಪ್ರಧಾನ ಪ್ರಾಶಸ್ತ್ಯ ತುಳುನಾಡಿನಲ್ಲಿರುವುದು, ತುಳುನಾಡಿನ ಎಲ್ಲ ಚಟುವಟಿಕೆಗಳ ಮೂಲಬೇರು ಭತ್ತ ಬೇಸಾಯ ಎಂಬುದನ್ನು ಮತ್ತಷ್ಟು ಗಟ್ಟಿಗೊಳಸುತ್ತದೆ. ತುಳುನಾಡಿನ ಜನಪದ ಆಟಗಳಿಗೂ ಭತ್ತ ಬೇಸಾಯಕ್ಕೂ ಸಂಬಂಧವಿದೆ. ವಾರ್ಷಿಕ ಆವರ್ತನದ ಆಚರಣೆಗಳ ದಿನಗಳಲ್ಲಿ ಬೇಸಾಯಗಾರರಿಗೆ ಬಿಡುವಿನ ದಿನವಾದ್ದರಿಂದ ಆ ದಿನ ಆಟಗಳನ್ನು ಆಡಿ ಸಂಭ್ರಮಿಸುವುದು ಕಂಡುಬರುತ್ತದೆ. ಕೋಳಿ ಅಂಕ, ತೆಂಗಿನಕಾಯಿ ಕುಟ್ಟುವುದು, ಕಂಬುಲ ಇತ್ಯಾದಿ ಆಟಗಳು ತುಳುನಾಡಿನ ಪ್ರಸಿದ್ಧ ಜನಪದ ಆಟಗಳು.

"ತುಳುನಾಡಿನ ಜನರ ಪ್ರಧಾನ ಕಸುಬು ಬೇಸಾಯ. ಇಲ್ಲಿನ ಹಬ್ಬಗಳು, ಕುಣಿತಗಳು, ಆಟಗಳು ಎಲ್ಲವೂ ವ್ಯವಸಾಯದ ತಳಹದಿಯ ಮೇಲೆ ನಡೆಯುತ್ತವೆ. ಜೀವನಕ್ಕೆ ಅನಿವಾರ್ಯವಾದ ಕೃಷಿ ಕರ್ಮವೆಲ್ಲ ಒಂದು ಕಾಲದಲ್ಲಿ ಬರಿಯ ಬೇಸಾಯವಾಗಿರದೆ ನಂಬುಗೆಯಿಂದ ಬದ್ಧವಾದ ಒಂದು ಮತ ಕರ್ಮವಾಗಿತ್ತು. ಆದುದರಿಂದಲೇ ಬಿತ್ತನೆ, ಕೊಯ್ಲು, ಕದಿರು ಕಟ್ಟುವುದು, ನೊಗ ಏರಿಸುವುದು, ಹೂಡುವುದು ಇವೆಲ್ಲ ಪೂಜಾ ನಿಷ್ಠೆಗಳಿಂದ ಮಾಡುವ ಕಸುಬುಗಳಾಗಿದ್ದವು. ಹಾಗಾಗಿ ಅವುಗಳಿಗೆ ಸಂಬಂಧಪಟ್ಟಂತೆ ತುಳುವರ ಜನಪದ ಗೀತ, ಸಾಹಿತ್ಯಗಳು ಹುಟ್ಟಿಕೊಂಡವೆಂದು ಡಾ. ಶಿವರಾಮ ಕಾರಂತರು ಅಭಿಪ್ರಾಯ ವ್ಯಕ್ತಪಡಿಸಿರುವುದು ಆಚರಣೆಗಳಿಂದ ವ್ಯಕ್ತವಾಗುತ್ತದೆ"[೧೪] ಎಂದು ವಿದ್ವಾಂಸರು ಹೇಳುವ ಮೂಲಕ ತುಳುನಾಡಿನ ಸಂಸ್ಕೃತಿಯ ಮೂಲ ಭತ್ತ ಬೇಸಾಯ ಎಂಬುದನ್ನು ಸ್ಪಷ್ಟಪಡಿಸುತ್ತಾರೆ. ಅಂದರೆ ತುಳುವರ ಈ ಉತ್ಪಾದನಾ ವೃತ್ತಿಧರ್ಮದಲ್ಲಿ ವಿಶಾಲವಾದ ಲೋಕದೃಷ್ಟಿ ಇರುವುದನ್ನು ಗಮನಿಸಬೇಕು. ಇದನ್ನು ಓರ್ವ ವಿದ್ವಾಂಸರು ಈ ರೀತಿ ಹೇಳುತ್ತಾರೆ–"ತುಳುವರ ಬದುಕು ಮತ್ತು ಆಲೋಚನೆಗಳನ್ನು ಅವರು ಪರಂಪರಾಗತವಾಗಿ ಅನುಸರಿಸಿಕೊಂಡು ಬಂದ ಬೇಸಾಯ

ಸಂಸ್ಕೃತಿಯು ರೂಪಿಸಿದೆ. ತುಳುನಾಡಿನ ಎಲ್ಲ ಸಮುದಾಯಗಳು ಭೂಮಿಯ ಒಡೆಯರಾಗಿ, ಒಕ್ಕಲುಗಳಾಗಿ, ಕೂಲಿಕಾರ್ಮಿಕರಾಗಿ – ಹೀಗೆ ಒಂದಲ್ಲ ಒಂದು ರೀತಿಯಲ್ಲಿ ಬೇಸಾಯದ ಸಂಬಂಧವನ್ನು ಇರಿಸಿಕೊಂಡವರು. ಬೇಸಾಯವು ಕಾಲಬದ್ಧವಾದ ಮತ್ತು ವಾರ್ಷಿಕವಾಗಿ ಆವರ್ತನೆಗೊಳ್ಳುವ ಮುಖ್ಯವಾದ ಉತ್ಪಾದನಾ ಚಟುವಟಿಕೆಯಾಗಿದೆ. ಬೇಸಾಯವು ತುಳುವರ ಪ್ರಧಾನವಾದ ಆರ್ಥಿಕ ಆದಾಯದ ಮೂಲವೂ ಆಗಿತ್ತು. ಮೇಲ್ನೋಟಕ್ಕೆ ಬೇಸಾಯವು ತುಳು ಜನಪದರ ಸಾಂಪ್ರದಾಯಿಕ ಕಸುಬಾಗಿರುವಂತೆ, ಸೂಕ್ಷ್ಮವಾಗಿ ಪರಿಶೀಲಿಸಿದರೆ, ಈ ಕಸುಬು ತುಳುವರ ಭಾವನಾತ್ಮಕ ಸಂಬಂಧಗಳನ್ನು ಕೂಡಾ ನಿರೂಪಿಸುತ್ತದೆ. ತುಳುವರು ಬೇಸಾಯವನ್ನು ಒಂದು ಕಸುಬಾಗಿ ಅಂಗೀಕರಿಸುವುದರ ಜೊತೆಗೆ ಅವರ ಮನಸ್ಸು ನೆಲವನ್ನು, ಬೇಸಾಯದ ಗದ್ದೆಯನ್ನು, ಬೆಳೆಯನ್ನು, ಅದರ ಬಳಕೆಯನ್ನು ಕುರಿತಂತೆ ಗ್ರಹಿಸಿರುವ ಗ್ರಹಿಕೆಗಳು ಕೂಡಾ ಮುಖ್ಯವಾಗುತ್ತವೆ. ಹೀಗೆ ಬೇಸಾಯವನ್ನು ಭಾವನಾತ್ಮಕವಾಗಿ ತುಳುವರು ಗ್ರಹಿಸಿರುವುದರಿಂದಲೇ ಬೇಸಾಯದ ಹಲವು ಚಟುವಟಿಕೆಗಳು ಆಚರಣೆಗಳ ಸ್ವರೂಪವನ್ನು ಪಡೆದುಕೊಳ್ಳುತ್ತವೆ. ಬೇಸಾಯಕ್ಕೆ ತೊಡಗುವುದರಿಂದ ಹಿಡಿದು ಅದರ ಕೊನೆಯ ಹಂತದವರೆಗೆ ಹಲವು ವಿಧಿ ವಿಧಾನಗಳು ರೂಪುಗೊಂಡಿವೆ. ಬೇಸಾಯದ ನೆಲ ಅವರಿಗೆ ಬರಿಯ ಒಂದು ಭೌತಿಕ ವಸ್ತುವಾಗದೆ ಪೂಜೆಗೆ ಅರ್ಹವಾಗುತ್ತದೆ. ಬೇಸಾಯದ ಕೆಲಸವನ್ನು ಆರಂಭಿಸಲು ಮುಹೂರ್ತವನ್ನು ನಿಗದಿಪಡಿಸುತ್ತಾರೆ. ಬೇಸಾಯದಲ್ಲಿ ಬಳಕೆಯಾಗುವ ಉಪಕರಣಗಳು ಮರದ, ಲೋಹದ ತುಂಡುಗಳಾಗದೆ ಪೂಜೆಗೆ ಅರ್ಹವಾಗುತ್ತವೆ. ಜಾನುವಾರುಗಳ ರಕ್ಷಣೆಗೆ ದೈವಗಳ ಸೃಷ್ಟಿಯಾಗುತ್ತದೆ. ಬೆಳೆಯನ್ನು ಕಟಾವು ಮಾಡುವ ಮೊದಲು ಗದ್ದೆಗೆ ಹಾಲು ಸುರಿದು ಕೈ ಮುಗಿಯುತ್ತಾರೆ. ಪೈರನ್ನು ತಂದು ಮನೆತುಂಬಿಸಿಕೊಳ್ಳುತ್ತಾರೆ. ಕಣಜಕ್ಕೆ ನಮಸ್ಕರಿಸುತ್ತಾರೆ. 'ಹೊಸ ಅಕ್ಕಿ ಊಟವನ್ನು' ಸಂಭ್ರಮದಿಂದ ನೆರವೇರಿಸುತ್ತಾರೆ. ಗದ್ದೆಯು ದೇವರ ಗದ್ದೆಯಾಗಿ, ಕಂಬಳ ಗದ್ದೆಯಾಗಿ ಗೌರವಕ್ಕೆ ಪಾತ್ರವಾಗುತ್ತದೆ. ಭತ್ತ ಮತ್ತು ದವಸ ಧಾನ್ಯಗಳ ಅಳತೆಯ ಮಾಪನಗಳೆಲ್ಲವನ್ನೂ ಪೂಜ್ಯ ಭಾವನೆಯಿಂದ ನೋಡುತ್ತಾರೆ. ನೊಗಕ್ಕೆ ಮೆಟ್ಟಿ ಹೋದರೆ ತಪ್ಪಾಯಿತೆಂದು ಅದಕ್ಕೆ ಕೈ ಮುಗಿಯುತ್ತಾರೆ. ಬೆಳೆಯ ರಕ್ಷಣೆಯ ಉದ್ದೇಶದಿಂದ ದೈವಗಳಿಗೂ 'ಪುದ್ವಾರ್ ಮೆಚ್ಚಿ' (ಹೊಸ ಅಕ್ಕಿ ಊಟದ ಹಬ್ಬ) ಏರ್ಪಡಿಸುತ್ತಾರೆ. ಸಂತಾನದ ಮುಂದುವರಿಕೆಗೆ ಕಾರಣವಾಗುವ ಹೆಣ್ಣನ್ನು ಸೀಮಂತ, ಮದುವೆ ಇತ್ಯಾದಿ ಜೀವನಾವರ್ತನ ಆಚರಣೆಗಳ ಮೂಲಕ ಸತ್ಕರಿಸುವಂತೆ ನೆಲವನ್ನು ತಾಯ್ತನದ ಪ್ರೀತಿಯಿಂದ ಪೂಜಿಸುತ್ತಾರೆ. ನೆಲವನ್ನು ಹೆಣ್ಣಿನ ಪ್ರತೀಕವಾಗಿ ತುಳುವರು ಕಂಡಿದ್ದಾರೆ. ಹೆಣ್ಣಿನ ಬದುಕಿನ ಅವಸ್ಥಾಂತರಗಳನ್ನು

ನೆಲಕ್ಕೂ ಆರೋಪಿಸಿದ್ದಾರೆ. ನೆಲಕ್ಕೆ ಸಮೃದ್ಧಿಯನ್ನು ತುಂಬುವ ಹತ್ತಾರು ಆಚರಣೆಗಳನ್ನು ನಡೆಸುತ್ತಾರೆ. ಹೀಗೆ ಬೇಸಾಯ ಮತ್ತು ಅದಕ್ಕೆ ಮೂಲ ಕಾರಣವಾಗಿರುವ ನೆಲವನ್ನು ಗ್ರಹಿಸಿರುವ ರೀತಿಯು ತುಳುವರ ಲೋಕ ದೃಷ್ಟಿಗೆ ಸಂಬಂಧಪಟ್ಟಿದೆ".[೧೫]

ತುಳುನಾಡಿನ ಸಂಸ್ಕೃತಿಯ ಇನ್ನೊಂದು ವಿಶೇಷತೆಯೇನೆಂದರೆ ಜನರು ಬೇಸಾಯದ ಮೂಲಕ ಭೂಮಿಯಿಂದ ಆಹಾರ ಪಡೆದುಕೊಳ್ಳುವುದಕ್ಕೆ ಪ್ರತಿಯಾಗಿ ಹಬ್ಬಹರಿದಿನ, ಆಚರಣೆ-ಆರಾಧನೆ, ಕುಣಿತ ಮೊದಲಾದ ಚಟುವಟಿಕೆಗಳ ಮೂಲಕ ಕೃತಜ್ಞತೆ ಸಲ್ಲಿಸಿ ಆ ನೆಲವನ್ನು ಮತ್ತೆ ಸಮೃದ್ಧಿಯಾಗಿ ಉಳಿಸಿಕೊಳ್ಳುವ ಪ್ರಕ್ರಿಯೆಯನ್ನು ಗಮನಿಸಬಹುದು. ಈ ಬಗ್ಗೆ ಇಬ್ಬರು ವಿದ್ವಾಂಸರು ನೀಡುವ ಈ ವಿಶ್ಲೇಷಣೆಗಳನ್ನು ಗಮನಿಸಬೇಕು-"ಬೇಸಾಯ ಮಾಡುವುದರ ಮೂಲಕ ಗದ್ದೆಯಿಂದ ಫಸಲನ್ನು ಪಡೆಯಲಾಗುತ್ತದೆ. ನೆಲವನ್ನು ಉತ್ತು, ಹದಮಾಡಿ, ಬೀಜವನ್ನು ಬಿತ್ತಿ, ಗೊಬ್ಬರ ಹಾಕಿ ಫಲವನ್ನು ಪಡೆಯುವುದು, ಅದೊಂದು ದುಡಿಮೆಯ ದೊಡ್ಡ ಪ್ರಕ್ರಿಯೆಯಾಗಿದೆ. ಈ ದುಡಿಮೆಯಲ್ಲಿ ನಿರೀಕ್ಷಿತ ಅಥವಾ ನಿರೀಕ್ಷೆಗಿಂತ ಹೆಚ್ಚಾಗಿ ಯಶಸ್ಸು ಸಿಗಬಹುದು. ನಷ್ಟವೂ ಸಂಭವಿಸಬಹುದು. ಈ ಕಾರಣಕ್ಕಾಗಿಯೇ ಬೇಸಾಯವನ್ನು ತುಳುವರು ತಮ್ಮ ಅದೃಷ್ಟದ ಭಾಗ ಎಂಬುದಾಗಿಯೇ ಪರಿಗಣಿಸಿದ್ದಾರೆ. ಅದೃಷ್ಟವನ್ನೂ ತರಬಲ್ಲ, ನಷ್ಟವನ್ನೂ ಉಂಟು ಮಾಡಬಲ್ಲ ಈ ಬೇಸಾಯವನ್ನು ನಡೆಸುವಾಗ ತುಳುವರು ಅಲೌಕಿಕ ಶಕ್ತಿಗಳ ಮೊರೆ ಹೋಗಿರುವುದು ಸಹಜ ಎನ್ನಿಸುತ್ತದೆ. ಬೇಸಾಯದಲ್ಲಿ ಅದೃಷ್ಟ ಅಡಗಿದೆಯಾದರೂ ನೆಲಕ್ಕೆ ಸಮೃದ್ಧಿಯನ್ನು ತುಂಬುವ ಹಲವಾರು ಆಚರಣೆಗಳನ್ನು ನಿರ್ವಹಿಸುತ್ತಲೇ ಬಂದಿದ್ದಾರೆ. 'ಗದ್ದೆಗೆ ಹಾಲೆರೆಯುವುದು', 'ಪೂಕರೆ ಹಾಕುವುದು', 'ಬಾಳೆ ನೆಡುವುದು', ಗದ್ದೆಯನ್ನು 'ಗೋರಿ' ಫಲಪುಷ್ಪಗಳಿಂದ ಅಲಂಕರಿಸುವುದು, ಕಂಬಳ ನಡೆಸುವುದು, ಕಂಬಳ ಗದ್ದೆಗೆ ಬೀಜದ ಕೋಣಗಳನ್ನು ಇಳಿಸಿ ಓಡಿಸುವುದು, ಗುತ್ತಿನ ಯಜಮಾನ ಮತ್ತು ಒಡತಿ ಆರತಿ ಬೆಳಗುವುದು, ನೇಜಿ ನೆಡುವ ಹೆಂಗಸರು ಸಮೃದ್ಧಿಯ ಆಶಯವುಳ್ಳ ಕಬಿತಗಳನ್ನು ಹಾಡುವುದು, ತೂಗಿ ತೊನೆಯುವ ಪೈರುಗಳ ಕನಸನ್ನು ಎಲ್ಲರೂ ಕಾಣುವುದು. ಇವುಗಳೆಲ್ಲವೂ ಬೇಸಾಯದ ಗದ್ದೆಗೆ ಸಮೃದ್ಧಿಯನ್ನು ತುಂಬುವ ಆಶಯಗಳುಳ್ಳ ಆಚರಣೆಗಳು ಮತ್ತು ಹಾಡುಗಳಾಗಿವೆ. ಇಂತಹ ಆಚರಣೆಗಳು ಮತ್ತು ಹಾಡುಗಳು ನಿರೂಪಿಸುವ ತುಳುವರ ಕನಸುಗಳ ಜಗತ್ತು ಕುತೂಹಲಕಾರಿಯಾದುದು. 'ಕರಂಗೋಲು'ವಿನಂತಹ ಒಂದು ಕುಣಿತದ ಮೂಲಕ ಗ್ರಾಮದ ಕೃಷಿ ಕುಟುಂಬಗಳಿಗೆ ಸಮೃದ್ಧಿಯ ಆಶಯವನ್ನು ರವಾನಿಸಲಾಗುತ್ತದೆ. ಫಲ ನೀಡುವ ತೆಂಗುಗಳಲ್ಲಿ

ಫಲವಂತಿಕೆಯನ್ನು ತುಂಬಲಾಗುತ್ತದೆ. ಜಾನುವಾರುಗಳ ರೋಗರುಜಿನಗಳನ್ನು ಅಟ್ಟಲಾಗುತ್ತದೆ. ಕಂಬಳ ಗದ್ದೆಗೆ ದಂಡಿಗೆಯಲ್ಲಿ ಬಿತ್ತನೆಯ ಬೀಜಗಳನ್ನು ತರಲಾಗುತ್ತದೆ. ಕಂಬಳ ಗದ್ದೆಯ ಬೇಸಾಯಕ್ಕೆ ತೊಡಗಲು ಮುಹೂರ್ತವನ್ನು ಕೇಳಲಾಗುತ್ತದೆ. ಬೆಳೆಯನ್ನು ನಾಶಮಾಡುವ ಪ್ರಾಣಿಗಳನ್ನು ಕೊಂದು ಅವುಗಳನ್ನು ದೈವತ್ವಕ್ಕೆ ಏರಿಸಲಾಗಿದೆ. 'ಬಲೀಂದ್ರ' ಪಾಡ್ದನದ ಪ್ರಕಾರ ನೆಲದ ಮಗ ಬಲೀಂದ್ರ ಬೇಸಾಯಗಾರನೇ ಆಗಿದ್ದಾನೆ. ತುಳುವರಿಗೆ ಪರ್ಬವು (ದೀಪಾವಳಿ) ಬೇಸಾಯದ ಪೂಜೆಯೇ ಆಗಿದೆ. ಹೀಗೆ ತುಳುಜನಪದ ಕಾವ್ಯಗಳು ನಿರೂಪಿಸುವಂತೆ ತುಳುನಾಡಿನಲ್ಲಿ ಬೇಸಾಯವು ಪ್ರಧಾನವೃತ್ತಿಯಾಗಿದೆ. ಈ ಬೇಸಾಯವನ್ನು ತುಳುವರು ಧಾರ್ಮಿಕ ಶ್ರದ್ಧೆಯಿಂದ ಮುನ್ನಡೆಸಿಕೊಂಡು ಬಂದಿದ್ದಾರೆ. ಬೇಸಾಯದ ಗದ್ದೆ ಮತ್ತು ದುಡಿಮೆ –ಇವುಗಳನ್ನು ಒಂದು ಬಗೆಯ ಪಾವಿತ್ರ್ಯದಿಂದಲೇ ತುಳುವರು ಗ್ರಹಿಸುವುದು ಅವರ ಲೋಕದೃಷ್ಟಿಯ ಮತ್ತೊಂದು ಅನನ್ಯ ನೆಲೆಯಾಗಿದೆ".[೧೬]

"ತುಳು ಹಬ್ಬಗಳಲ್ಲಿ ಕೃಷಿ ಸಂಬಂಧಿ ಹಬ್ಬಗಳೇ ಹೆಚ್ಚು. ಮನೆ ತುಂಬಿಸುವುದು, ಪುದ್ದರಿ(ಪುದ್ದಾರ್), ಕಾವೇರಿ ಸಂಕ್ರಮಣ, ದೀಪಾವಳಿ (ಪರ್ಬ), ಕೆಡ್ಡಸ, ಬಿಸು–ಇವೆಲ್ಲ ನೇರವಾಗಿ ವ್ಯವಸಾಯಕ್ಕೆ ಸಂಬಂಧಪಟ್ಟವುಗಳು. ಇವೆಲ್ಲ ಮನೆಮನೆಗಳಲ್ಲಿ ಆಚರಿಸುವ ಹಬ್ಬಗಳಾದರೆ ಊರಿನ ದೊಡ್ಡ ಜಮೀನ್ದಾರರಾಗಿದ್ದು ಗುತ್ತು, ಬೀಡುಗಳ ಮುಖ್ಯಸ್ಥರು ಊರವರನ್ನೆಲ್ಲ ಒಟ್ಟು ಸೇರಿಸಿ ಏಣೇಲು ಬೆಳೆ ಕೊಯ್ದು ಬಳಿಕ ಸುಗ್ಗಿ ಬೆಳೆಯ ಬಿತ್ತನೆಗೆ ಮೊದಲು (ಸಾಮಾನ್ಯ ನವೆಂಬರ್ ದಶಂಬರ ತಿಂಗಳುಗಳಲ್ಲಿ) ಒಂದು ದೊಡ್ಡ ವ್ಯವಸಾಯ ಹಬ್ಬವನ್ನು ಆಚರಿಸುತ್ತಾರೆ. ಇದನ್ನು ಗದ್ದೆಗೋರಿ ಎನ್ನುತ್ತಾರೆ. ಬೇರೆಬೇರೆ ಗ್ರಾಮಗಳಲ್ಲಿ ಇದು ಬೇರೆಬೇರೆ ದಿನಗಳಲ್ಲಿ ನಡೆಯುತ್ತದೆ. ಮನೆಯ ಎದುರಿನ ವಿಶಾಲಗದ್ದೆ (ಬಾಕಿಲ್ ತಿಮರು)ಯನ್ನು ಉತ್ತು ಸುಗ್ಗಿ ಬೆಳೆಗೆ ಹಸನುಗೊಳಿಸಿ ನಾಟಿಮಾಡುವ ಪೂರ್ವದಲ್ಲಿ ಅಥವಾ ಬಿತ್ತನೆಯ ಮೊದಲು ಈ ಹಬ್ಬದ ಆಚರಣೆ ನಡೆಯುತ್ತದೆ. ಸಾರ್ವಜನಿಕ ಭೋಜನ, ಭೂತಾರಾಧನೆ ಮತ್ತು  ನಾಗಾರಾಧನೆ ಈ ಆಚರಣೆಯ ಮುಖ್ಯಭಾಗಗಳು. ಹಿಂದಿನ ಬೆಳೆಯನ್ನು ಕೊಯ್ದು ಬಳಿಕ ಗದ್ದೆಯನ್ನು ಚೆನ್ನಾಗಿ ಉತ್ತು ನೀರು ನಿಲ್ಲಿಸಿ ಕಂಡುಬರುವ ಏರುತಗ್ಗುಗಳನ್ನು ಹಲಗೆಯಿಂದ ಸಮತಲಗೊಳಿಸುತ್ತಾರೆ. ಎತ್ತುಗಳಿಗೆ ಕಟ್ಟಿದ ನೊಗದ ಮಧ್ಯೆ ಗೋರು ಹಲಗೆಯ ಹಿಡಿಯನ್ನು ಸಿಕ್ಕಿಸುತ್ತಾರೆ. ಹಲಗೆಯ ಮೇಲೆ ನಿಂತುಕೊಂಡು ಎತ್ತುಗಳನ್ನು ಹೊಡೆದು ಹಲಗೆಯನ್ನು ಗದ್ದೆಯಲ್ಲಿ ಎಳೆಯಿಸಿ ಸಮಮಟ್ಟಕ್ಕೆ ತರುವ ಈ ಕಾರ್ಯಕ್ಕೆ 'ಕೋರುನೆ' (ಗೋರುನೆ) ಎನ್ನುತ್ತಾರೆ. ಕೋರುವಲ್ಲಿಗೆ ಉಳುಮೆಯ ಕೆಲಸ ಮುಕ್ತಾಯಗೊಳಿಸಿ

ಕಂಬಳ ನಡೆಸುತ್ತಾರೆ. ನಂತರ ಗದ್ದೆಯ ಮಧ್ಯೆ ಪೂಕರೆ ಇಲ್ಲವೇ ಬಾಳೆಗಿಡ ನೆಡುವ ಸಂಪ್ರದಾಯ ಇದೆ. ಪೂಕರೆ ನೆಡುವ ಸಂಪ್ರದಾಯ ಊರಿನ ಗಣ್ಯಮನೆಗಳಾದ ಬೀಡು, ಗುತ್ತುಗಳ ಮುಂದಿನ ವಿಶಾಲವಾದ ಬಾಕ್ಯಾರು(ಬಾಕಿಲ್+ತಿಮರು) ಗದ್ದೆಗಳಲ್ಲಿ ಮಾತ್ರ ಇರುತ್ತದೆ. ಉಳಿದ ಗದ್ದೆಗಳಿಗೆ ಏಣೇಲು ಬೆಳೆಗೆ ಕಾಸರಕನ, ಸುಗ್ಗಿಗೆ ಸರಳಿ ಕೊಳಕೆಗೆ ಮುಂಡೇವು ರೆಂಬೆಗಳನ್ನು ನೆಡುತ್ತಾರೆ. ಇದನ್ನು ಕಾಪು (ರಕ್ಷಣೆ) ಎನ್ನುತ್ತಾರೆ. ಮಧ್ಯಮವರ್ಗದ ರೈತರು ತಮ್ಮ ಬಾಕ್ಯಾರು ಗದ್ದೆಗಳಲ್ಲಿ ಬಾಳೆಗಿಡ ನೆಡುತ್ತಾರೆ. ಗದ್ದೆಗೋರಿಯ ಹಿಂದಿನ ದಿನ ಗದ್ದೆಯ ಸುತ್ತು ಬದುಗಳಿಗೆ ಜೇಡಿಮಣ್ಣಿನ ಬರೆ ಎಳೆದು ಚಂದಗೊಳಿಸುತ್ತಾರೆ. ರಾತ್ರಿ ಕೋಳ್ತಿರಿಗಳನ್ನು ಗದ್ದೆಯ ಸುತ್ತು ಉರಿಸಿಟ್ಟು ದೀಪಾಲಂಕಾರ ಮಾಡುತ್ತಾರೆ. ಒಂದು ಜೊತೆ ಎತ್ತುಗಳನ್ನು ಗದ್ದೆಯಲ್ಲಿ ನೊಗಕಟ್ಟಿ ಬಿಡುತ್ತಾರೆ. ಅವು ರಾತ್ರಿ ಇಡೀ ಗದ್ದೆಯಲ್ಲಿ ಉಪವಾಸವಿರುತ್ತವೆ. ಮರುದಿನ ಗದ್ದೆಯ ಪಕ್ಕದಲ್ಲಿರುವ ನಾಗಬನದಲ್ಲಿ ನಾಗನ, ಬಿರ್ಮೆರೆ ಆರಾಧನೆ ನಡೆಯುತ್ತದೆ. ಇದನ್ನು ನಾಗನ್‌ತಣಿಪುನೆ ಎನ್ನುತ್ತಾರೆ. ಯಕ್ಷಬ್ರಹ್ಮನ ವೇಷವನ್ನು ಧರಿಸಿದ ನಲಿಕೆ ಜಾತಿಯ ಭೂತ ನರ್ತಕ ಸೊಂಟಕ್ಕೆ ಕುದುರೆಯ ಮುಖವಾಡ ಕಟ್ಟಿಕೊಂಡು ಕುದುರೆ ನಡಿಗೆಯಲ್ಲಿ ಗದ್ದೆಗೆ ಸುತ್ತು ಬರುತ್ತಾನೆ. ಒಬ್ಬ ಹುಡುಗ ಆತನ ಸಾರಥಿ 'ಉರವ'ನ ವೇಷ ಹಾಕಿ ಅವನನ್ನು ಹಿಂಬಾಲಿಸುತ್ತಾನೆ. ಇದನ್ನು ಕುದುರೆ ಕೋಲ ಎನ್ನುತ್ತಾರೆ. ಕುದುರೆ ಕೋಲದ ಬಳಿಕ ಎರುಕೋಲ, ಕೊರಗರ ಕುಣಿತ, ಡೋಲು ಕುಣಿತ ಇತ್ಯಾದಿ ಮನೋರಂಜನೆಗಳು ನಡೆಯುತ್ತವೆ. ಪೂಕರೆ ಎಂದರೆ ಮರದ ಕಂಬ ಇಲ್ಲವೇ ಅಡಿಕೆ ಮರಕ್ಕೆ ಅಂಕಣ ಅಂಕಣವಾಗಿ ಸಲಿಕೆಯ ಚೌಕಟ್ಟು ಕಟ್ಟಿ ಮಾಡಿದ ರಚನೆ. ಪೂಕರೆಯನ್ನು ನೆಟ್ಟಗೆ ನಿಲ್ಲಿಸಿದಾಗ ಒಂದೇ ಗೋಪುರದಂತೆ ಕಾಣುತ್ತದೆ. ಇದನ್ನು ಹೂವಿನಿಂದ ಶೃಂಗರಿಸುತ್ತಾರೆ. ಕೊಂಬು, ವಾಲಗ, ಡೋಲು, ತಮಟೆ, ಕುಣಿತದ ವೇಷಗಳ ಜೊತೆಯಲ್ಲಿ ಪೂಕರೆಯನ್ನೇರಿಸಿದ ಬಂಡಿಯನ್ನು ಗದ್ದೆಗೆ ಒಯ್ಯುತ್ತಾರೆ. ಗದ್ದೆಯ ಮಧ್ಯೆ ಪೂಕರೆ ನೆಡುತ್ತಾರೆ. ರಾತ್ರಿ ದೈವಗಳಿಗೆ ಕೋಲ ನಡೆಸುತ್ತಾರೆ. ಮರುದಿನ ಮುಂಜಾನೆ ಮೂರ್ಲೆ ಕುಣಿತ ನಡೆಯುತ್ತದೆ. ಬಳಿಕ ಮೂರು ದಿವಸಗಳವರೆಗೆ ಕೋಳಿ ಅಂಕ ನಡೆಸುತ್ತಾರೆ.

ತುಳುವರ ಕೃಷಿ ಸಂಬಂಧಿ ಹಬ್ಬಗಳಲ್ಲಿ ಕೆಡ್ಡಸ, ದೀಪಾವಳಿ ಮತ್ತು ಗದ್ದೆ ಗೋರಿ ಇವು ಮೂರು ಬಹಳ ಪ್ರಾಮುಖ್ಯವಾದ ಹಬ್ಬಗಳು. ಕೆಡ್ಡಸವನ್ನು ಭೂಮಿದೇವಿಯ ಮೀಹದ ಹಬ್ಬ (ಮದಿಮಲ್ ಮದಿಮೆ)ವೆಂದೂ ಗದ್ದೆಗೋರಿಯನ್ನು ಭೂಮಿದೇವಿಯ ಮದುವೆ ಎಂದೂ

ಪಾಡ್ದನಗಳಲ್ಲಿ ವರ್ಣಿಸಲಾಗಿದೆ. ಭೂಮಿಯ ಒಡೆಯ ಬಲೀಂದ್ರನ ಪೂಜೆ, ವ್ಯವಸಾಯಕ್ಕೆ ಸಹಕರಿಸಿದ ಎತ್ತು, ಗೋವುಗಳಿಗೆ ಔತಣ ದೀಪಾವಳಿಯಂದು ನಡೆಯುತ್ತದೆ".[೧೭]

## ೩.೪: ತುಳುನಾಡಿನ ಆವರ್ತನದ ಆಚರಣೆಗಳು

ಒಟ್ಟಾರೆಯಾಗಿ ತುಳುನಾಡಿನ ಧಾರ್ಮಿಕ ಆಚರಣೆಗಳಾದ ಭೂತಾರಾಧನೆ–ನಾಗಾರಾಧನೆಗಳಿರಬಹುದು; ರಂಗಪ್ರಭೇದಗಳಾದ ಯಕ್ಷಗಾನ–ತಾಳಮದ್ದಳೆಗಳಿರಬಹುದು; ಜಾನಪದ ಕುಣಿತಗಳಾದ ಆಟಿಕಳೆಂಜ, ಚೆನ್ನುಕುಣಿತ, ಪಿಲಿಪಂಜಿಕುಣಿತ, ಕರಂಗೋಲು, ಗುಮ್ಮಟೆ, ದುಡಿಕುಣಿತ, ಕೊರಗತನಿಯಕುಣಿತ, ಮಲೆಕುಡಿಯರ ಕತ್ತಿಕುಣಿತ ಇತ್ಯಾದಿಗಳಿರಬಹುದು; ಜಾನಪದ ವಿನೋದಗಳಾದ ಕಂಬಳ, ಕೋಳಿಅಂಕ, ಬೇಟೆ, ತೆಂಗಿನಕಾಯಿ ಕುಟ್ಟುವುದು, ತೆಪ್ಪಂಗಾಯಿ ಆಟ, ಚೆನ್ನೆಮಣೆ ಆಟಗಳಿರಬಹುದು; ಬಿಸುಪರ್ಬ, ಪತ್ತನಾಜೆ, ಆಟಿಅಮಾವಾಸ್ಯೆ, ನಾಗರಪಂಚಮಿ, ಕುರಲ್ ಪರ್ಬ, ಪುದ್ವಾರ್, ಕಾವೇರಿಸಂಕ್ರಾಂತಿ, ಪರ್ಬ, ಕೆಡ್ಡಸ, ಗದ್ದೆಕೋರಿ, ಪೂಕರೆಹಾಕುವುದು, ಬಾಳೆಹಾಕುವುದು ಮೊದಲಾದ ಭೂಮಿ ಹಾಗೂ ಭತ್ತದ ಬೇಸಾಯಕ್ಕೆ ಸಂಬಂಧಿಸಿದ ಸಾಂಪ್ರದಾಯಿಕ ಆಚರಣೆಗಳಿರಬಹುದು; ಉರಲ್, ಸಂಧಿಪಾಡ್ದನ, ಗಾದೆ, ಎದುರುಕತೆ(ಒಗಟು), ನಂಬಿಕೆ ಮೊದಲಾದ ಮೌಖಿಕ ಸಾಹಿತ್ಯಗಳಿರಬಹುದು–ಇವುಗಳ ಮೂಲಕ ನಾವಿಂದು ತುಳುನಾಡ ಸಂಸ್ಕೃತಿಯನ್ನು ಪರಿಚಯಿಸಿಕೊಳ್ಳುವ, ಪ್ರತಿಬಿಂಬಿಸುವ ಮತ್ತು ಸಂವಹಿಸುವ ಪ್ರಯತ್ನವನ್ನು ಸಾಮಾನ್ಯವಾಗಿ ಮಾಡುತ್ತೇವೆ. ಇವೆಲ್ಲವನ್ನು ನಿತ್ಯಜೀವನದಲ್ಲಿ ಯಾರೂ ನಡೆಯಿಸಿಕೊಂಡು ಬರುವುದಿಲ್ಲ. ಬದಲಾಗಿ ನಿರ್ದಿಷ್ಟ ದಿನ ಘಳಿಗೆಗಳಲ್ಲಿ ಮಾತ್ರ ನಡೆಸುವುದರಿಂದ ಇವುಗಳನ್ನು ವಿಶಿಷ್ಟ ಆಚರಣೆ ನಂಬಿಕೆಗಳೆಂದು ಗುರುತಿಸಲಾಗಿದೆ. ಅಂತಹ ನಿರ್ದಿಷ್ಟ ದಿನ ಘಳಿಗೆಗಳನ್ನು ವಾರ್ಷಿಕ ಆವರ್ತನದಲ್ಲಿ ಗುರುತಿಸಿಕೊಳ್ಳುವುದಕ್ಕಾಗಿ ತುಳುವರು ಪಗ್ಗು ತಿಂಗಳಿನಿಂದ ಸುಗ್ಗಿ ತಿಂಗಳವರೆಗಿನ ವಿಶಿಷ್ಟ ಕಾಲಕಲ್ಪನೆಯನ್ನು ಇಲ್ಲಿನ ಋತುಮಾನದ ಆವರ್ತನದ ಮಾನದಂಡದಲ್ಲಿ ರೂಪಿಸಿಕೊಂಡಿದ್ದಾರೆ. ಅವುಗಳಿಗೆ ಹೊಂದಿಕೊಂಡು ಇಲ್ಲಿನ ಬೇಸಾಯದ ಸಂಸ್ಕೃತಿಯೂ ಆವರ್ತನದಲ್ಲಿ ರೂಪುಗೊಂಡಿದೆ. ಮಳೆಗಾಲ, ಚಳಿಗಾಲ, ಬೇಸಿಗೆಕಾಲ; ಸೂರ್ಯ–ಚಂದ್ರರ ಚಲನೆ; ಅಮಾವಾಸ್ಯೆ–ಹುಣ್ಣಿಮೆ, ಸಂಕ್ರಾಂತಿ–ಸಿಂಗೊಡೆ (ತಿಂಗಳ ಕೊನೆಯ ದಿನ ಮತ್ತು ತಿಂಗಳ ಮೊದಲ ದಿನ) ಮೊದಲಾದ ಪ್ರಾಕೃತಿಕ ಸ್ಥಿತ್ಯಂತರ ಸಂನಿವೇಶಗಳನ್ನು ವಿಶೇಷವಾಗಿ ಗಮನಿಸಿರುವ ಜನಪದರು ಈ ಕಾಲ ಸಂದರ್ಭಗಳಿಗೆ ಹೊಂದಿಕೆಯಾಗುವಂತೆ

ವಾರ್ಷಿಕ ಆವರ್ತನದಲ್ಲಿ 'ಏಣೇಲು', 'ಸುಗ್ಗಿ', 'ಕೊಳಕೆ'-ಹೀಗೆ ಮೂರು ಬೆಳೆಗಳನ್ನು ರೂಢಿಸಿಕೊಂಡಿದ್ದಾರೆ. ಈ ಬೇಸಾಯ ಕ್ರಮದಲ್ಲಿ ಬೆಳೆಯಲಾಗುವ ಬೆಳೆಯ ರಕ್ಷಣೆಗಾಗಿ, ಬೆಳೆ ವೃದ್ಧಿಯಾಗಲಿ ಎಂಬ ಆಶಯಕ್ಕಾಗಿ, ಕುತೂಹಲಕರ ಸೃಷ್ಟಿಯಲ್ಲಿನ ಭಯ ನಿವಾರಣೆಗಾಗಿ, ಸುಖಸಂತೋಷಗಳ ಅಭಿವ್ಯಕ್ತಿಯಾಗಿ ಅಗೋಚರ ಶಕ್ತಿಗಳನ್ನು ಸೃಷ್ಟಿಸಿಕೊಂಡು ಅವುಗಳ ಪ್ರೀತ್ಯರ್ಥವಾಗಿ ನಾನಾರೀತಿಯ ನಂಬಿಕೆ ಆಚರಣೆಗಳು, ನಡವಳಿಕೆಗಳು ಹುಟ್ಟಿಕೊಂಡಿರಬೇಕು. ಅಂದರೆ ಬೇಸಾಯ ಸಂಸ್ಕೃತಿಯನ್ನು ಪೋಷಿಸುವ ಉಪಸಂಸ್ಕೃತಿಗಳಾಗಿ ಈ ನಂಬಿಕೆ ಆಚರಣೆಗಳು ಹುಟ್ಟಿ ಆವರ್ತನದ ನೆಲೆಯಲ್ಲಿ ಮುಂದುವರಿದುಕೊಂಡು ಬಂದಿವೆ. ಹಾಗಾಗಿ ತುಳುನಾಡ ಸಂಸ್ಕೃತಿಯನ್ನು ನಿರೂಪಿಸುವ ಪ್ರತಿಯೊಂದು ಸಂಗತಿಗಳೂ ಇಲ್ಲಿನ ಬೇಸಾಯ ಪದ್ಧತಿಯ ಜೊತೆಗೆ ಅನನ್ಯವಾದ ಸಂಬಂಧವನ್ನು ಹೊಂದಿರುವುದು ತಿಳಿಯುತ್ತದೆ. ಸಂಸ್ಕೃತಿ ಎಂದರೆ ಜೀವನ ವಿಧಾನ ಎಂದಂತೆ, ಮೂಲಭೂತವಾಗಿ ಅದು ಹೊಟ್ಟೆ ತುಂಬಿಸಿಕೊಳ್ಳಲು ಕಂಡುಕೊಳ್ಳುವ ಉತ್ಪಾದನಾ ವೃತ್ತಿಧರ್ಮವನ್ನು ಆಧರಿಸಿರುತ್ತದೆ. ಆದುದರಿಂದ ತುಳುನಾಡಿನಲ್ಲಿ ಸಂಸ್ಕೃತಿ ಉಳಿಯಲು, ಮುಂದುವರಿಯಲು ಅದರ ಮೂಲನೆಲೆಯಾದ ಭತ್ತಬೇಸಾಯ ಪದ್ಧತಿಯನ್ನು ಉಳಿಸಿಕೊಳ್ಳಬೇಕಾಗುತ್ತದೆ ಎಂಬ ಸತ್ಯದ ಅರಿವಾಗುತ್ತದೆ.

ಸಂಧಿ-ಪಾಡ್ದನಗಳನ್ನು ಹಾಡುವುದಕ್ಕೆ ವರ್ಷದಲ್ಲಿ ನಿರ್ದಿಷ್ಟ ಕಾಲಸಂದರ್ಭವಿದೆ. ನೇಜಿ ಕೀಳುವಾಗ, ನೆಡುವಾಗ ಇಲ್ಲವೆ ಭೂತಕೋಲಗಳ ಸಂದರ್ಭದಲ್ಲಿ ಅಥವಾ ಆಟಿಕಳೆಂಜ, ಕರಂಗೋಲು ಕುಣಿತಗಳ ಸಮಯದಲ್ಲಿ ಇವುಗಳನ್ನು ಹಾಡಲಾಗುತ್ತದೆ. ಭೂತಾರಾಧನೆ-ನಾಗಾರಾಧನೆಗಳಿಗೂ ವರ್ಷದಲ್ಲಿ ನಿರ್ದಿಷ್ಟ ದಿನ ಘಳಿಗೆಗಳನ್ನು ಗೊತ್ತುಪಡಿಸಲಾಗಿದೆ. ಚೆನ್ನೆಮಣೆ ಆಟ, ಕಂಬಳ, ಕೋಳಿಅಂಕಗಳನ್ನೂ ವಿಶೇಷ ಆಚರಣೆಗಳ ದಿನಗಳಲ್ಲಿ ನಿರ್ದಿಷ್ಟ ಉದ್ದೇಶಗಳಿಗಾಗಿ ಮಾತ್ರ ನಡೆಸಲಾಗುತ್ತದೆ. ಪ್ರತಿಯೊಂದು ಜಾನಪದ ಕುಣಿತಗಳ ಪ್ರದರ್ಶನಕ್ಕೂ ಕಾಲ, ಸಂದರ್ಭ ಮತ್ತು ಉದ್ದೇಶಗಳಿರುತ್ತವೆ. ಈ ಎಲ್ಲ ನೆಲೆಗಳನ್ನು ವಿವೇಚಿಸುವಾಗ ತುಳುನಾಡಿನ ಸಂಸ್ಕೃತಿಗೆ ವಾರ್ಷಿಕ ಆವರ್ತನದ ಒಂದು ವಿಶಿಷ್ಟ ಸ್ವರೂಪವಿರುವುದು ಗೋಚರಿಸುತ್ತದೆ.

---

**ಅಡಿ ಟಿಪ್ಪಣಿ**

೧. **ಕನ್ನಡ ರತ್ನಕೋಶ-** ೧೯೯೪: ಕನ್ನಡ ಅಭಿವೃದ್ಧಿ ಪ್ರಾಧಿಕಾರ, ಬೆಂಗಳೂರು: ಪುಟ-೨೫೯

೨. **ಕರ್ನಾಟಕ ಸಂಸ್ಕೃತಿ ಸಮೀಕ್ಷೆ-೨೦೦೩:** ಏಳನೆಯ ಮುದ್ರಣ: ಡಾ.ಎಚ್.ತಿಪ್ಪೇರುದ್ರ ಸ್ವಾಮಿ: ಡಿ.ವಿ.ಕೆ.ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು: ಪುಟ-೬

೩. **ಅದೇ:** ಪೂರ್ವೋಕ್ತ: ಪುಟ–೩

೪. **ಅದೇ:** ಪೂರ್ವೋಕ್ತ: ಪುಟ–೬

೫. **ತುಳು ಸಂಸ್ಕೃತಿ; ಚತುರ್ಮುಖೀ ಅಧ್ಯಯನ**–೧೯೯೯: ಕೆ. ಮೋಹನ್‌ಕೃಷ್ಣ ರೈ: ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ: ಡಾ.ಎಂ.ಎಂ.ಕಲಬುರ್ಗಿಯವರು ಮುನ್ನುಡಿ ರೂಪದಲ್ಲಿ ಬರೆದ 'ದೇಸಿಯೊಳ್ ಪುಗುವುದು' ಬರಹವನ್ನು ನೋಡಿ.

೬. **ಕರಾವಳಿ ಜಾನಪದ**–೨೦೦೭: (ಸಂ.)ಪ್ರೊ.ಎ.ವಿ. ನಾವಡ: ಸ್ವಾಗತ ಸಮಿತಿ, ಅಖಿಲ ಭಾರತ ೭೪ನೆಯ ಕನ್ನಡ ಸಾಹಿತ್ಯ ಸಮ್ಮೇಳನ, ಉಡುಪಿ: ಡಾ.ಪಾಲ್ತಾಡಿ ರಾಮಕೃಷ್ಣ ಆಚಾರ್ ಅವರ 'ಕರಾವಳಿ ಕರ್ನಾಟಕದ ಜನಪದ ಸಂಸ್ಕೃತಿ' ಲೇಖನ ನೋಡಿ. ಪುಟ–೧೬೩

೭. **ಅದೇ:** ಪೂರ್ವೋಕ್ತ: ಪುಟ–೧೬೪

೮. **ಅದೇ:** ಪೂರ್ವೋಕ್ತ: ಪುಟ–೧೬೪

೯. **ದ.ಕ.ಜಿಲ್ಲೆಯ ಐತಿಹ್ಯಗಳು**–೧೯೯೪: ಡಾ.ಎ.ಸುಬ್ಬಣ್ಣ ರೈ: ಮಾಣಿ ಜೂನಿಯರ್ ಛೇಂಬರ್, ಮಾಣಿ, ದ.ಕ.: ಪುಟ–೩

೧೦. **ತುಳುನಾಡಿನ ಜೈನಧರ್ಮ–ಒಂದು ಸಾಂಸ್ಕೃತಿಕ ಅಧ್ಯಯನ**: ೨೦೦೨: ಡಾ.ಎಸ್.ಡಿ.ಶೆಟ್ಟಿ: ರಾಷ್ಟ್ರಕವಿ ಗೋವಿಂದ ಪೈ ಸಂಶೋಧನ ಕೇಂದ್ರ, ಉಡುಪಿ

೧೧. **ತೌಳವ:** ೧೯೯೭: ಡಾ.ಪುಂಡಿ ಗಣಪಯ್ಯಭಟ್: ಸಿಂಧೂರ ಪ್ರಕಾಶನ: ಮೂಡಬಿದಿರೆ: ಪುಟ–೪೩

೧೨. **ಕರಾವಳಿ ಜಾನಪದ:** ೧೯೯೦: ಡಾ.ಪುರುಷೋತ್ತಮ ಬಿಳಿಮಲೆ: ಮಂಗಳ ಗಂಗೋತ್ರಿ, ದ.ಕ.: ಪುಟ–೪

೧೩. **ಅದೇ:** ಪೂರ್ವೋಕ್ತ: ಪುಟ–೦೭

೧೪. **ಏರ್ಯ:** ಏರ್ಯ ಲಕ್ಷ್ಮೀನಾರಾಯಣ ಆಳ್ವ ಅಭಿನಂದನ ಗ್ರಂಥ: ೧೯೯೯: ಏರ್ಯ ಲಕ್ಷ್ಮೀನಾರಾಯಣ ಆಳ್ವ ಅಭಿನಂದನ ಸಮಿತಿ–ಮಂಗಳೂರು: ಲೇಖನ: ತುಳುನಾಡಿನ ಜನಪದದಲ್ಲಿ ಪರಿಸರ ಕಲ್ಪನೆ: ಡಾ। ಪಾಲ್ತಾಡಿ ರಾಮಕೃಷ್ಣ ಆಚಾರ್: ಪುಟ–೩೭೦

೧೫. **ತುಳು ಜನಪದ ಕಾವ್ಯ**–ಇಹಪರ ಲೋಕ ದೃಷ್ಟಿ: ೨೦೦೮: ಡಾ.ರಾಜಶ್ರೀ: ಶ್ರೀ ಧ.ಮಂ. ತುಳು ಪೀಠ, ಮಂಗಳೂರು ವಿಶ್ವವಿದ್ಯಾನಿಲಯ: ಪುಟ–೧೬೬, ೧೬೭

೧೬. **ಅದೇ:** ಪೂರ್ವೋಕ್ತ: ಪುಟ–೧೬೬, ೧೬೭

೧೭. **ಜಾನಪದ ಮಿನದನ:** ೧೯೯೭: ಡಾ.ಪಾಲ್ತಾಡಿ ರಾಮಕೃಷ್ಣ ಆಚಾರ್: ಸುಪ್ರಿಯಾ ಪ್ರಕಾಶನ: ಪುತ್ತೂರು: ಪುಟ– ೭೭, ೭೩, ೭೪

■■■

# ಅಧ್ಯಾಯ–೪

## ತುಳುನಾಡಿನ ವಾರ್ಷಿಕ ಆವರ್ತನದ ಆಚರಣೆ–'ಬಿಸುಪರ್ಬ'
## (ಸೌರಮಾನ ಯುಗಾದಿ)

೪.೧: 'ಬಿಸುಪರ್ಬ'–ಅರ್ಥ

೪.೨: 'ಬಿಸುಪರ್ಬ'–ಆಚರಣೆಯ ವಿಧಾನ

- ೪.೨.೧: 'ಅಪ್ಪರೆ' ಹಾಕುವುದು
- ೪.೨.೨: 'ಕಣಿ' ಇಡುವುದು
- ೪.೨.೩: 'ಬುಳೆಕಾಣಿಕೆ' ಒಪ್ಪಿಸುವುದು

೪.೩: 'ಬಿಸುಪರ್ಬ' ಆಚರಣೆ–ವಿಶ್ಲೇಷಣೆ

೪.೪: 'ಬಿಸುಪರ್ಬ'ಕ್ಕೆ ಸಮಾನವಾದ ಆಚರಣೆಗಳು

೪.೫: 'ಬಿಸುಪರ್ಬ'–ಆಚರಣೆಯ ಒಟ್ಟೂ ಸ್ವರೂಪ

# ಅಧ್ಯಾಯ-೪

## ತುಳುನಾಡಿನ ವಾರ್ಷಿಕ ಆವರ್ತನದ ಆಚರಣೆ-'ಬಿಸುಪರ್ಬ'
## (ಸೌರಮಾನ ಯುಗಾದಿ)

# ಅಧ್ಯಾಯ-೪

# ತುಳುನಾಡಿನ ವಾರ್ಷಿಕ ಆವರ್ತನದ ಆಚರಣೆ 'ಬಿಸುಪರ್ಬ'

## (ಸೌರಮಾನ ಯುಗಾದಿ)

### ೪.೧: 'ಬಿಸುಪರ್ಬ'-ಅರ್ಥ

'ಬಿಸುಪರ್ಬ' ಎಂದರೆ ಸೌರಮಾನ ಯುಗಾದಿ ಹಬ್ಬ. ಪಗ್ಗು ತಿಂಗಳ ಮೊದಲ ದಿನ ತುಳುವರಿಗೆ ವರ್ಷಾರಂಭದ ದಿನ; ಅಂತೆಯೇ ವಾರ್ಷಿಕ ಆವರ್ತನದ ಮೊದಲ ಆಚರಣೆ ಕೂಡ. ತುಳುವರು ವರ್ಷಾರಂಭದ ದಿನ ಮಾಡುವ 'ಭೂಮಿಪೂಜೆ' ಇದಾಗಿದೆ. ಸೌರಮಾನ ಯುಗಾದಿಯು ಕಲಿ ವರ್ಷಾರಂಭದ ದಿನವೂ ಆಗಿದೆ.

'ಬಿಸು' ಪದಕ್ಕೆ ವಿಷು-ಸೌರಮಾನ ಯುಗಾದಿ; Solar new year day ಎಂಬ ಅರ್ಥವೂ, 'ಬಿಸುಕಣಿ' ಎಂಬುದಕ್ಕೆ ಹೊಸ ವರ್ಷದ ಪ್ರಾರಂಭದ ದಿನ ನಡೆಯುವ ಒಂದು ಆಚರಣೆ ಎನ್ನಲಾಗುತ್ತಿದೆ. ದೇವರೆದುರಲ್ಲಿ ಹಣ್ಣು, ಕಾಯಿ, ಅಕ್ಕಿ, ಚಿನ್ನ, ಕನ್ನಡಿ ಇತ್ಯಾದಿಗಳನ್ನಿಟ್ಟು ಬೆಳಿಗ್ಗೆ ಎದ್ದು ಅವುಗಳನ್ನು ನೋಡಿ ನಮಸ್ಕರಿಸುವ ಆಚರಣೆ ಎಂಬ ವಿವರವೂ ತುಳು ನಿಘಂಟಿನಲ್ಲಿ ಕಂಡು ಬರುತ್ತದೆ.[೧]

### ೪.೨: 'ಬಿಸುಪರ್ಬ' ಆಚರಣೆಯ ವಿಧಾನ

ಪ್ರಪ್ರಥಮವಾಗಿ 'ಬಿಸುಪರ್ಬ'ದ ಮೊದಲ ದಿನ ಇಲ್ಲವೆ ಅದೇ ದಿನ ಬೆಳಿಗ್ಗೆ ಬೇಗ ಹೆಂಗಸರು ಮನೆಯನ್ನು ಸೆಗಣಿ ಸಾರಿಸಿ ಶುದ್ಧಗೊಳಿಸುತ್ತಾರೆ. 'ಪಗ್ಗುಸಿಂಗೊಡೆ'ಯ ಹಿಂದಿನ ದಿನ ಮನೆಯ ಯಜಮಾನ ಭೂತಸ್ಥಾನದಲ್ಲಿ ಇಲ್ಲವೆ ದೇವರ ಎದುರು ಮಣೆಯ ಮುಂದೆ ಹಣ್ಣು, ತರಕಾರಿ, ತೆಂಗಿನಕಾಯಿ, ಅಕ್ಕಿ, ಹೂವು ಇತ್ಯಾದಿ ಫಲವಸ್ತುಗಳನ್ನು ಇಡುತ್ತಾರೆ. ಅನಂತರ ಮರುದಿನ ಅಂದರೆ 'ಸಿಂಗೊಡೆ'ಯ ದಿನ ಬೆಳಿಗ್ಗೆ ಯಜಮಾನ ಅಲ್ಲಿ ದೀಪ ಬೆಳಗಿಸಿ ಕೈ ಮುಗಿಯುತ್ತಾನೆ. ಎತ್ತುಗಳನ್ನು ಹಟ್ಟಿಯಿಂದ ಗದ್ದೆಗೆ ಕೊಂಡುಹೋಗಿ ಗದ್ದೆಯ ಮಧ್ಯಭಾಗದಲ್ಲಿ ಮೊದಲೇ 'ಕುರುಂಬಿಲಿ' (ಹುಲ್ಲುಕಡ್ಡಿಕಸ) ಹಾಕಿ ಸುಟ್ಟ ಸ್ವಲ್ಪ ಜಾಗದಲ್ಲಿ ಎರಡು 'ಪೊರಿ' (ಪೊರಿ ಎಂದರೆ ಉಳುಮೆ ಮಾಡಿದ ಜಾಗ) ಉಳುತ್ತಾರೆ. ಜೊತೆಗೆ ಹಟ್ಟಿಯಿಂದ ಒಂದು ಬುಟ್ಟಿ ಗೊಬ್ಬರವನ್ನು ಕೊಂಡುಹೋಗಿ ಪೊರಿಯ ಮಧ್ಯದಲ್ಲಿ ಹಾಕಿ, ಅದರ ಮೇಲೆ 'ತರೋಳಿತಪ್ಪು', 'ನೆಕ್ಕಿತಪ್ಪು' (ಒಂದು ಜಾತಿಯ ಸೊಪ್ಪು) ಗಳನ್ನು ಹಾಕುತ್ತಾರೆ.

ನಂತರ ಪೂರ್ವ ದಿಕ್ಕಿಗೆ ಮುಖಮಾಡಿ ಗೊಬ್ಬರ ಹಾಕಿದಲ್ಲಿ ಭೂಮಿಗೆ ನಮಸ್ಕರಿಸಿ ಎತ್ತುಗಳನ್ನು ಬಿಚ್ಚಿಸಿಕೊಂಡು ಮನೆಗೆ ಬರುತ್ತಾರೆ. ಇದನ್ನು 'ಅಪ್ಪರೆ ಪಾಡುನ' ಎಂದು ಕರೆಯುತ್ತಾರೆ. ಕೆಲವರು 'ನಾಲೆರು ಮಾದವುನ' ಎಂತಲೂ ಕರೆಯುತ್ತಾರೆ. ಈ ರೀತಿ 'ಬಿಸುಪರ್ಬ'ದಂದು ಉಳುಮೆ ಮಾಡುವಾಗ ಎತ್ತುಗಳನ್ನು ಹೊಡೆಯಲು ಎಂದಿನ ಕೋಲುಗಳನ್ನು ಉಪಯೋಗಿಸದೆ ವಿಶೇಷವಾಗಿ 'ನೆಕ್ಕಿಕೋಲು'ಗಳನ್ನು ಬಳಸುವುದು ಸಂಪ್ರದಾಯ. ಉಳುಮೆಯಾದ ಬಳಿಕ ಆ 'ನೆಕ್ಕಿಕೋಲು'ಗಳನ್ನು ತಂದು ಹಟ್ಟಿಯ ಮಾಡಿನಲ್ಲಿ ಇಡುತ್ತಾರೆ. ಗದ್ದೆ ಉತ್ತಾದ ಬಳಿಕ ಎತ್ತುಗಳನ್ನು ಮೇಯಲು ಬಿಡುತ್ತಾರೆ. ಈ ದಿನಗಳಲ್ಲಿ 'ಬಿಸುಪರ್ಬ'ದ ಪ್ರಯುಕ್ತ ಮಣ್ಣಿನ ಸತ್ಯಗಳಾದ 'ನಾಗಬನ'ಗಳಲ್ಲಿ, 'ದೈವದಗುಡಿ'ಗಳಲ್ಲಿ ಸಾಮಾನ್ಯವಾಗಿ 'ಪರ್ವ' 'ತಂಬಿಲ'ಗಳು ನಡೆಯುವುದು ತಿಳಿದು ಬರುತ್ತದೆ. ಅಂತೆಯೇ ಈದಿನ 'ಕೈಬಿತ್ತ್ ದೀಪುನ'(ಸಾಂಕೇತಿಕವಾಗಿ ಬೀಜಬಿತ್ತನೆ ಮಾಡುವುದು) ಕ್ರಮವೂ ಅಲ್ಲಲ್ಲಿ ಕಂಡುಬರುತ್ತದೆ. ಅಂದರೆ ಗದ್ದೆಯ ಒಂದು ಮೂಲೆಯಲ್ಲಿ ಹುಣಿಯನ್ನು ಹದಮಾಡಿ ಅದರಲ್ಲಿ ಬಿತ್ತನೆ ಬೀಜ ಹಾಕುವ ಕ್ರಮವಾಗಿರುತ್ತದೆ. ಅಂದರೆ 'ಪಗ್ಗು'ತಿಂಗಳ ಮೊದಲ ದಿನದ 'ಬಿಸುಪರ್ಬ'ದ ಈ 'ಅಪ್ಪರೆ ಪಾಡುನ' ಮತ್ತು 'ಕೈಬಿತ್ತ್ ದೀಪುನ'ದಲ್ಲಿಂದ ಹಿಡಿದು 'ನಿರ್ನಾಲ' ತಿಂಗಳ 'ಕಾವೇರಿ ಸಂಕ್ರಾಂತಿ' ಆಚರಣೆಯಲ್ಲಿನ 'ಬಿತ್ತ್‌ದ ಮುಡಿ' ಅಟ್ಟಕ್ಕೆ ಹಾಕುವಲ್ಲಿವರೆಗಿನ ಆರು ತಿಂಗಳು 'ಏಣೇಲು' ಬೇಸಾಯ. 'ಬೊಂತೆಲ್' ತಿಂಗಳಿಂದ 'ಸುಗ್ಗಿ' ತಿಂಗಳವರೆಗೆ ಆರು ತಿಂಗಳು 'ಸುಗ್ಗಿ' ಮತ್ತು 'ಕೊಳಕೆ' ಬೇಸಾಯ. ಹಾಗಾಗಿ 'ಬಿಸುಪರ್ಬ'ದ ದಿನ ತುಳುವರು ಬೇಸಾಯ ಆರಂಭಿಸುತ್ತಾರೆ. ಮುಂದೆ ಯಾವಾಗ ಬೇಕಾದರೂ ಬೀಜ ಬಿತ್ತನೆ ಮಾಡಬಹುದಾಗಿದೆ. ಈ ನೆಲೆಯಲ್ಲಿ 'ಪಗ್ಗುಡೆ ಎರುಕಟ್ಟ್ ದೆತ್ತೊನುಲ, ಬಗ್ಗ್‌ದ್ ನೇಜಿನ್ ಪಾಡೊನುಲ' ('ಪಗ್ಗು' ತಿಂಗಳಲ್ಲಿಯೇ ಎತ್ತು ಕೋಣಗಳನ್ನು ತೆಗೆದುಕೊಳ್ಳು, ಬಗ್ಗಿ ನೇಜಿ ಹಾಕಿಕೊ) ಮತ್ತು 'ಪಗ್ಗುಡ್ ಬಗ್ಗ್‌ನಾಯೆ ಸುಗ್ಗಿಡ್ ಸರ್ತಾಯೆ' (ಪಗ್ಗು ತಿಂಗಳಲ್ಲಿ ಬಗ್ಗಿದವ ಸುಗ್ಗಿ ತಿಂಗಳಲ್ಲಿ ನೆಟ್ಟಗಾದ) ಎಂಬ ಗಾದೆ ಮಾತುಗಳು ಹುಟ್ಟಿಕೊಂಡಿವೆ. 'ಪಗ್ಗು' ಹದಿನೆಂಟು ಹೋಗುವ ಮೊದಲು ನೇಜಿ ಹಾಕಿದರೆ ಒಳ್ಳೆಯದಂತೆ. ಆದುದರಿಂದ ಕೆಲವರು ಆ ದಿನ 'ಕೈಬಿತ್ತ್' ಹಾಕುವ ಕ್ರಮವೂ ಇದೆ. ಹಿಂದಿನ ಕಾಲದಲ್ಲಿ 'ಚಾಲ್‌ಗೇಣಿ' ಮತ್ತು 'ವರ್ಷಗೇಣಿ' ದುಡಿಮೆಗೆ ಭೂಮಿ, ತೋಟ, ಮನೆ ಮಾಡುತ್ತಿದ್ದವರು 'ಬಿಸುಪರ್ಬ'ದ ದಿನ ಹಳೆಯ ಬೇಸಾಯ ಬಿಡುವುದು ಮತ್ತು ಹೊಸತು ಆರಂಭಿಸುವುದು ಮಾಡುತ್ತಿದ್ದರಂತೆ. 'ಬಿಸುಪರ್ಬ'ದ ಕಾಲಕ್ಕೆ ಭೂಮಿ ಹೊರಗಿನಿಂದ ರಣಗುಟ್ಟುತ್ತದೆ. ಆದರೆ ಒಳಗಿಂದೊಳಗೆ ತಂಪು ಕೊಡುತ್ತದೆ. ಈ ದಿನ ಸಿಹಿನೀರಿನಲ್ಲಿ, ಕೆರೆಗಳಲ್ಲಿ, ಸಮುದ್ರದಲ್ಲಿ ಮೀನು

ಹಿಡಿಯುತ್ತಾರೆ. ಆ ದಿನ ಸಣ್ಣ ಮಕ್ಕಳನ್ನು ಚಿನ್ನಬೆಳ್ಳಿಗಳ ಆಭರಣ ತಯಾರಿಸುವ ಆಚಾರಿಗಳಲ್ಲಿಗೆ ಕರೆದುಕೊಂಡು ಹೋಗಿ ಕಿವಿಮೂಗು ಚುಚ್ಚಿಸುತ್ತಾರೆ. ಕೆಲವೊಮ್ಮೆ ಸಾಮೂಹಿಕವಾಗಿ ಬೇಟೆಗೆ ಹೋಗುವ ಕ್ರಮವೂ ಕಂಡುಬರುತ್ತದೆ. ಅಂದರೆ ತುಳುವರಿಗೆ ಆ ದಿನ ರಜಾದಿನವಾಗಿರುತ್ತದೆ. ಯಾವುದೇ ಕೆಲಸಗಳಿಗೆ ತೆರಳದೆ ಆಚರಣೆಗೆ ಸಂಬಂಧಿಸಿದ ಚಟುವಟಿಕೆಗಳಲ್ಲಿ ತಮ್ಮನ್ನು ತೊಡಗಿಸಿಕೊಳ್ಳುತ್ತಾರೆ. ಮಧ್ಯಾಹ್ನ ಗೇರುಬೀಜದ 'ಬೊಂಡು' (ಗೋಡಂಬಿ) ಹಾಕಿದ ಪಾಯಸ ಮಾಡಿ ತರಕಾರಿ ಊಟ ಮಾಡುತ್ತಾರೆ. ರಾತ್ರಿಯ ಊಟಕ್ಕೆ ಏನಾದರೂ ವಿಶೇಷ 'ಅಡ್ಯೆ'(ಅಕ್ಕಿತಿಂಡಿ) ಇರುತ್ತದೆ. ಬೇಟೆಗೆ ಹೋದವರಿಗೆ ಏನಾದರೂ ಪ್ರಾಣಿ ಪಕ್ಷಿ ಸಿಕ್ಕಿದರೆ ಅವುಗಳನ್ನು ರಾತ್ರಿಗೆ ಪದಾರ್ಥ ಮಾಡುತ್ತಾರೆ. 'ಹೆಸರು' ಧಾನ್ಯದ ಪರಮಾನ್ನವನ್ನೂ ಮಾಡುತ್ತಾರೆ. ಹೀಗೆ ಈ ಪಾಯಸ, ಅಡ್ಯೆ ಪದಾರ್ಥಗಳನ್ನು ಮನೆಯವರು ಸ್ವೀಕರಿಸುವ ಮೊದಲು 'ಕುಲೆ'ಗಳಿಗೆ(ಪಿತೃಗಳಿಗೆ) ಬಡಿಸುತ್ತಾರೆ. ಈ ರೀತಿ 'ಬಿಸುಪರ್ಬ'ವನ್ನು ತುಳುವರು ಆಚರಿಸುವುದು ಕುತೂಹಲಕಾರಿಯಾಗಿದೆ.

ಹಿಂದೆ 'ಧಣಿ-ಒಕ್ಕಲು'ಗಳ ಕಾಲದಲ್ಲಿ 'ಒಕ್ಕಲುಕುಟುಂಬ' 'ಧಣಿ'ಗಳಿಗೆ ತಾವು ಕೊಡಲು ಬಾಕಿಯಿದ್ದ ಹಿಂದಿನ ವರ್ಷದ 'ಗೇಣಿ'ಯನ್ನು 'ಬಿಸುಪರ್ಬ'ದ ದಿನ ಫಲಕಾಣಿಕೆಗಳ ಜೊತೆಗೆ ಒಪ್ಪಿಸುವ ಕ್ರಮವೂ ಇತ್ತು. ಆ ಬಳಿಕ ಆ ವರ್ಷದ ಬೇಸಾಯಕ್ಕೆ 'ಧಣಿ'ಗಳಿಂದ ಒಪ್ಪಿಗೆ ಪಡೆದುಕೊಂಡು 'ಬಿಸು' ಆಚರಣೆಯನ್ನು ಮಾಡುತ್ತಿದ್ದರೆಂದು ಹಿರಿಯರು ತಿಳಿಸುತ್ತಾರೆ.

ಜನಪದರು ನೀಡುವ ಮಾಹಿತಿ ಪ್ರಕಾರ 'ಬಿಸು' ಆಚರಣೆಯ ದಿನ ಇದರ ಅಂಗವಾಗಿ ಉಳುವಾಗ 'ಎದಂಗ್ ಮಾದಾವುನ' ಕ್ರಮ ನಡೆಯುತ್ತದೆ; ಮಾತ್ರವಲ್ಲ 'ಎರಡು ಪೊರಿ ಮಾದಾವುನ ಕ್ರಮ' ಆದ ನಂತರ ಆ 'ಪೊರಿ'ಯ ಮಧ್ಯೆ ಹಾಕುವ ಗೊಬ್ಬರವನ್ನು ಸಾಮಾನ್ಯವಾಗಿ ಮನೆಯ ಯಜಮಾನನೇ ಹಾಕಬೇಕು ಮತ್ತು ಆತ ಆ ಗೊಬ್ಬರವನ್ನು ಹಟ್ಟಿಯಿಂದಲೇ ತೆಗೆದು ಸ್ವತಃ ಎತ್ತಿ ತಲೆಯಲ್ಲಿ ಹೊತ್ತು ತಂದು ಹಾಕಬೇಕೆಂಬುದು ಸಂಪ್ರದಾಯ.

ಈ ದಿನ ಕುಟುಂಬದ ಸದಸ್ಯರೆಲ್ಲ ಮನೆಯಲ್ಲೇ ಇರುತ್ತಾರೆ. ಆಚರಣೆಯಲ್ಲಿ ಭಕ್ತಿ ಸಂಭ್ರಮಗಳಿಂದ ಪಾಲ್ಗೊಳ್ಳುತ್ತಾರೆ. ಬೇಟೆಯಾಡುವುದಲ್ಲದೆ ಕೋಳಿಅಂಕ, ಇಲ್ಲವೆ ತೆಂಗಿನಕಾಯಿ ಕುಟ್ಟುವಂತಹ ಕ್ರೀಡೆಯನ್ನು ಮನೋರಂಜನೆಗಾಗಿ ಆಡುತ್ತಾರೆ. ಆದರೆ ಹುಟ್ಟು ಸಾವುಗಳ ಸೂತಕಗಳು ಬಂದರೆ ಆ ವರ್ಷ ಈ ಆಚರಣೆಯನ್ನು ಮಾಡುವುದಿಲ್ಲ.

ಈ ಆಚರಣೆಯಲ್ಲಿ ಕೆಲವು ಕ್ರಮಗಳು ಕಂಡುಬರುತ್ತವೆ. ಅವುಗಳಲ್ಲಿ ಮೂರು ಮುಖ್ಯ ಅಂಶಗಳನ್ನು ಗಮನಿಸಬೇಕು. ಅವುಗಳೆಂದರೆ ಮೊದಲನೆಯದ್ದಾಗಿ 'ಅಪ್ಪರೆಪಾಡುನ' ಕ್ರಮ, ಎರಡನೆಯದಾಗಿ 'ಬಿಸುಕಣಿ' ಇಡುವುದು, ಮೂರನೆಯದಾಗಿ 'ಬುಳೆಕಾಣಿಕೆ ಒಪ್ಪಿಸುವುದು'. ಈ ಮೂರು ವಿಚಾರಗಳನ್ನು ಭತ್ತ ಬೇಸಾಯದ ಹಿನ್ನೆಲೆಯಲ್ಲಿ ಅತ್ಯಂತ ಮಹತ್ವದ ಸಂಗತಿಗಳೆಂದು ತಿಳಿಯಬಹುದು. ಬೇಸಿಗೆ ಕಳೆದು ಮಳೆಗಾಲಕ್ಕೆ ಋತು ಪರಿವರ್ತನೆಯಾಗುವ ಸಂಕ್ರಮಣ ಕಾಲಘಟ್ಟದಲ್ಲಿ ಈ ಆಚರಣೆ ನಡೆಯುತ್ತದೆ. ಬಿಸಿಲಿಗೆ ಬೆಂದ ಭೂಮಿಗೆ ಮಳೆನೀರಿನ ಸ್ಪರ್ಶವಾದಾಗ ಭೂಮಿ ಹೊಸ ಸೃಷ್ಟಿಗೆ ತನ್ನನ್ನು ತೆರೆದುಕೊಳ್ಳುವ ಸಮಯವಿದು. ಹಾಗಾಗಿ ತುಳುನಾಡಿನಲ್ಲಿ ಈ ಕಾಲಪರಿವರ್ತನೆಯ ಸಂದರ್ಭವನ್ನು ಹೊಸವರ್ಷವೆಂದು ಗುರುತಿಸಿರುವುದರಲ್ಲಿ ವಿಶೇಷ ಅರ್ಥವೂ ಇದೆ.

**೪.೨.೧: 'ಅಪ್ಪರೆ' ಹಾಕುವುದು**

'ಅಪ್ಪರೆ ಪಾಡುನ' ಎಂಬ ತುಳು ಪದಪುಂಜಕ್ಕೆ ಎಲ್ಲೂ ಅರ್ಥ ವಿವರಣೆ ಸಿಗುವುದಿಲ್ಲ. ಎತ್ತುಗಳನ್ನು ಹೂಳಲು ಕಟ್ಟಿ ಎರಡು ಸುತ್ತು ಉಳುಮೆಮಾಡಿ, ಉಳುಮೆ ಮಾಡಿದ ಸ್ಥಳದಲ್ಲಿ ಸೊಪ್ಪು ಗೊಬ್ಬರ ಹಾಕುವುದನ್ನು 'ಅಪ್ಪರೆ ಪಾಡುನ' ಎಂದು ಕರೆಯುತ್ತಾರೆ. ಎಲ್ಲ ವಕ್ತೃಗಳೂ ಇದೇ ಮಾಹಿತಿಯನ್ನು ನೀಡುತ್ತಾರೆ. ಆದರೆ ದ.ಕ.ಜಿಲ್ಲೆಯ ಬೆಳ್ತಂಗಡಿ ತಾಲೂಕಿನ ಕೊಯ್ಯೂರು ಗ್ರಾಮದ ಅಡೆಂಕಿಲೊಟ್ಟು ಮನೆ ನಿವಾಸಿ ಶ್ರೀ ಚನನ ಗೌಡ ಎಂಬವರು ಮಾತ್ರ 'ಅಪ್ಪರೆ' ಎಂಬ ಒಂದು ಜಾತಿಯ ಮರವಿರುವುದಾಗಿ ತಿಳಿಸಿದ್ದು, ಅದರ ಸೊಪ್ಪನ್ನು ಗದ್ದೆಗೆ ಹಾಕುತ್ತಾರೆ ಎಂದಿರುವುದು ಕುತೂಹಲಕರ ಅಂಶವಾಗಿದೆ. ವಕ್ತೃಗಳು ನೀಡುವ ವಿವರಗಳನ್ನು ಗಮನಿಸಿದಾಗ ಬಹುತೇಕ 'ಅಪ್ಪರೆ' ಎಂಬ ಪದದಲ್ಲಿ 'ಅಪ್ಪು' ಮತ್ತು 'ಬರೆ' ಎಂಬ ಎರಡು ಪದಗಳು ಸೇರಿಕೊಂಡಿರುವುದು ಸ್ಪಷ್ಟವಾಗುತ್ತದೆ. 'ಅಪ್ಪು' ಅಂದರೆ ಸೊಪ್ಪು ಮತ್ತು 'ಬರೆ' ಎಂದರೆ ಉಳುಮೆ ಮಾಡುವಾಗ ಉಂಟಾಗುವ ಗುರುತು. ಹಾಗಾಗಿ ಅಪ್ಪು-ಬರೆ ಸೇರಿ ಮುಂದೆ ಜನಪದರ ಬಾಯಲ್ಲಿ ಅದು 'ಅಪ್ಪರೆ'ಯಾಗಿರುವ ಸಾಧ್ಯತೆಯೇ ಹೆಚ್ಚಾಗಿದೆ.

ಈ 'ಅಪ್ಪರೆ ಪಾಡುನ' ಕ್ರಮವು 'ಏಣೇಲು' ಬೇಸಾಯ ಮಾಡಲು ಮುಹೂರ್ತ ಆಗಿರುವುದರಿಂದ ಇದನ್ನು 'ಭೂಮಿಪೂಜೆ' ಎಂದು ಕರೆಯಬಹುದು. 'ಏಣೇಲು' ಬೇಸಾಯಕ್ಕೆ ನೇಜಿಹಾಕಲು ಗದ್ದೆ ಉಳಬೇಕಾಗುತ್ತದೆ. ಗದ್ದೆ ಉಳಬೇಕಾದರೆ ಗದ್ದೆಯಲ್ಲಿ ನೀರಿನ ತೇವಾಂಶ

ಬೇಕಾಗುತ್ತದೆ. ಹಾಗಾಗಿ ಆ ದಿನ ಸ್ವಲ್ಪ ಉತ್ತು ನೀರಿನ ಅಂಶವನ್ನು ಪರೀಕ್ಷೆ ಮಾಡುವ ವಿಧಾನವನ್ನು ಇಲ್ಲಿ ಗಮನಿಸಬಹುದು.

### ೪.೨.೨: 'ಕಣಿ' ಇಡುವುದು

ಭತ್ತ ಬೇಸಾಯವೆ ಇಲ್ಲಿಯ ವಿಶೇಷ ಕಾರ್ಯವಾಗಿದ್ದು 'ಬಿಸುಪರ್ಬ'ದಂದು ದೈವ-ದೇವರುಗಳಿಗೆ 'ಬಿಸುಕಣಿ' ಅಂದರೆ ಫಲಪುಷ್ಪಗಳನ್ನು ಇಟ್ಟು ದೀಪ ಬೆಳಗಿಸಿ ಕೈಮುಗಿಯುವುದರಲ್ಲಿ ತಮ್ಮ ಬದುಕನ್ನು ರೂಪಿಸುತ್ತಿರುವ ಅಗೋಚರ ದೈವಗಳಿಗೆ ಸಲ್ಲಿಸುವ ಗೌರವದ ಭಾವನೆ ವ್ಯಕ್ತವಾಗುತ್ತದೆ. ಜೊತೆಗೆ ಆಶಾವಾದದ ಸಂಕೇತವಿದೆ. ಪ್ರಕೃತಿಯ ಜೊತೆಗೆ ಮತ್ತು ದೈವಗಳ ಮೇಲಿನ ಗಾಢವಾದ ನಂಬಿಕೆಗಳಿವೆ. ತಾನು ಬೆಳೆದಂತಹ ವಸ್ತುಗಳಲ್ಲಿ ಒಂದಿಷ್ಟನ್ನು ದೈವದೇವರುಗಳಿಗೆ ಸಮರ್ಪಿಸಿ ಮುಂದಕ್ಕೆ ವರ್ಷದುದ್ದಕ್ಕೂ ನಮಗೆ ಒಳ್ಳೆಯದನ್ನು ಮಾಡುವಂತೆ ಕೋರಿ ಪ್ರಾರ್ಥನೆಯನ್ನು ಮಾಡುವ ಮೂಲಕ ಮುಂದಿನ ಕೃಷಿ ಚಟುವಟಿಕೆಗೆ ತೊಡಗುವುದನ್ನು ಇಲ್ಲಿ ಗಮನಿಸಬಹುದು. ಈ ರೀತಿ ಪ್ರಾರ್ಥಿಸುವುದರಲ್ಲಿ ಮತ್ತು ಫಲಕಾಣಿಕೆಗಳನ್ನು ಸಮರ್ಪಿಸುವುದರಲ್ಲಿ–ಎಲ್ಲವೂ ನಿನ್ನದೇ; ನನ್ನದು ಏನೂ ಇಲ್ಲ; ನಿನ್ನ ದಯೆಯಿಂದಲಷ್ಟೇ ನಾನು ಬದುಕುತ್ತಿದ್ದೇನೆ–ಎಂಬ ಶರಣಾಗತ ಭಾವವಿರುವುದನ್ನು ನಾವು ಗುರುತಿಸಬೇಕು.

### ೪.೨.೩: 'ಬುಳೆಕಾಣಿಕೆ' ಒಪ್ಪಿಸುವುದು

'ಬುಳೆ ಕಾಣಿಕೆ'(ಬೆಳೆ ಕಾಣಿಕೆ) ಕೊಡುವುದು ಎಂದರೆ 'ಒಕ್ಕಲು ಕುಟುಂಬ' 'ಬಿಸು ಪರ್ಬ'ದ ದಿನ 'ಧಣಿ'ಗಳಿಗೆ(ಒಡೆಯರಿಗೆ) ಕಾಣಿಕೆಯಾಗಿ ತರಕಾರಿಯೋ ಇಲ್ಲವೆ ಇನ್ನಿತರ ವಸ್ತುಗಳನ್ನು ಕೊಡುವುದು. ಹೀಗೆ ಕಾಣಿಕೆ ನೀಡಿ ಮುಂದಿನ ವರ್ಷದವರೆಗೆ 'ಒಕ್ಕಲು'ಗಳಾಗಿ ಮುದುವರಿಯಲು, ಹೊಲದಲ್ಲಿ ಬೇಸಾಯ ಮಾಡಲು ಅನುಮತಿ ಕೇಳುವುದಾಗಿರುತ್ತದೆ. 'ಒಕ್ಕಲು ಕುಟುಂಬ' ಈ ರೀತಿ 'ಧಣಿ'ಗಳಿಗೆ ಕಾಣಿಕೆ ಸಲ್ಲಿಸಿದರೆ, ಸಿರಿವಂತ ಇಲ್ಲವೆ 'ಗುತ್ತು' ಮನೆಯವರು, 'ಧಣಿ' ಕುಟುಂಬದವರು ದೇವರಿಗೋ ದೈವಕ್ಕೋ ಈ 'ಬುಳೆಕಾಣಿಕೆ'ಯನ್ನು ಅರ್ಪಿಸುತ್ತಾರೆ. ಇಲ್ಲಿಯೂ ಇದೇ ಭಾವವಿದ್ದು, ದೈವ ದೇವರಲ್ಲಿ ಭೂಮಿಯನ್ನು ಬೇಸಾಯ ಮಾಡಲು ಅನುಮತಿ ಕೇಳುವ ಅರ್ಥವನ್ನೇ ಗಮನಿಸಬಹುದಾಗಿದೆ. ('ಬಿಸುಪರ್ಬ' ಆಚರಣೆಗೆ ಸಂಬಂಧಿಸಿದಂತೆ ಅನುಬಂಧ ಪುಟ-೧ ರಲ್ಲಿನ ಚಿತ್ರ-೧.೧.೧ ರಿಂದ ೧.೧.೪ ಇವುಗಳನ್ನು ಗಮನಿಸಬಹುದು.)

## ೪.೩: 'ಬಿಸುಪರ್ಬ' ಆಚರಣೆ–ವಿಶ್ಲೇಷಣೆ

ಹಳೆಯ ಬೇನೆ ಬೇಸರಗಳನ್ನು ಮರೆತು ಹೊಸ ಉಲ್ಲಾಸದೊಂದಿಗೆ ಬದುಕುವ ಆತ್ಮವಿಶ್ವಾಸದ ಸಂಕೇತಾರ್ಥದಲ್ಲಿ 'ಬಿಸುಪರ್ಬ' ಆಚರಣೆ ಗಮನ ಸೆಳೆಯುತ್ತದೆ. ಡಾ.ಪಾಲ್ತಾಡಿ ರಾಮಕೃಷ್ಣ ಆಚಾರ್ ಅವರು ಈ ಆಚರಣೆಯ ಕುರಿತಂತೆ ಹೇಳುವ ಮಾತನ್ನು ಗಮನಿಸಬೇಕು. "ಸೌರಮಾನ ಪದ್ಧತಿಯ ಪ್ರಕಾರ ಹೊಸ ವರ್ಷದ ಆರಂಭದ ದಿನ. ಅದು ಪಗ್ಗು ಒಂದರಿಂದ ಶುರುವಾಗುತ್ತದೆ. ಈ ಆಚರಣೆ ಭಾರತದ ಬೇರೆ ಬೇರೆ ಕಡೆಗಳಲ್ಲಿ ಬಿಸು, ವಿಷು–ಎಂಬ ಹೆಸರಿನಲ್ಲಿ ನಡೆಯುತ್ತದೆ. ಬಿಸು–ಗದ್ದೆಯ ಬೇಸಾಯ ಶುರುಮಾಡುವ ದಿನ. ಬೇಸಾಯಗಾರರು ಆ ದಿನ ಬೆಳಿಗ್ಗೆ ಎದ್ದು, ಎತ್ತುಗಳಿಗೆ ಬೈಹುಲ್ಲು ಹಾಕಿ ಅಕ್ಕಚ್ಚು ಕೊಟ್ಟು, ಗದ್ದೆಗೆ ಕೊಂಡುಹೋಗುತ್ತಾರೆ. ಅಲ್ಲಿ ಎತ್ತುಗಳಿಗೆ ನೊಗ–ನೇಗಿಲು ಕಟ್ಟಿ ಎರಡು ಪೊರಿ ತಿರುಗಿಸುತ್ತಾರೆ. ನಂತರ ಅದಕ್ಕೆ ಹಟ್ಟಿಯಿಂದ ಒಂದು ಬುಟ್ಟಿ ಗೊಬ್ಬರ ತಂದು ಹಾಕುತ್ತಾರೆ. ಒಂದು ಹಿಡಿ ಬಿತ್ತನೆ ಬೀಜ ಚೆಲ್ಲಿ ನೀರು ಚಿಮುಕಿಸಿ ಎತ್ತುಗಳನ್ನು ಬಿಟ್ಟು ಮನೆಗೆ ಬರುತ್ತಾರೆ. ಮನೆಗೆ ಬಂದು ಸ್ನಾನಮಾಡಿ ಬಟ್ಟೆ ಬರೆ ತೊಟ್ಟುಕೊಂಡು ಧನಿಗಳ ಮನೆಗೆ ಹೋಗುತ್ತಾರೆ. ಆ ದಿನ ಅಲ್ಲಿಗೆ ಹೋಗುವಾಗ ಬರಿಕೈಯಲ್ಲಿ ಹೋಗಬಾರದು. ಕೈಯಲ್ಲಿ ಏನಾದರೂ ಕಾಯಿಪಲ್ಯ ಹಿಡಿದುಕೊಳ್ಳಬೇಕು. ಇದನ್ನು 'ಬುಳೆಕಾಣಿಕೆ' ಎಂದು ಕರೆಯುವುದು. ಕಾಯಿಪಲ್ಯ ಬೆಳೆಸದವರು, ಅವರ ಕಸುಬಿನ ಏನಾದರೂ ಒಂದು ಸಣ್ಣ ವಸ್ತುವನ್ನು ಹಿಡಿದುಕೊಂಡು ಹೋಗುತ್ತಾರೆ. ಚಾಪೆ ಹೆಣೆಯುವವರು ಚಾಪೆ, ಮರದ ಕೆಲಸದವರು ಮಣೆ ಹೀಗೆ ಕೊಂಡು ಹೋಗುವುದು ಕ್ರಮ.

ಶ್ರೀಮಂತರು, ಗುತ್ತು–ಬೀಡಿನವರು ಮನೆಯಲ್ಲಿ ಬಿಸುಹಬ್ಬದಂದು ಕಣಿ ಇಡುತ್ತಾರೆ. ಎಲ್ಲ ಕಾಯಿಪಲ್ಯದ ವಸ್ತುಗಳನ್ನು ಮತ್ತು ಹಣ್ಣುಗಳನ್ನು ಚಾವಡಿಯ ಮಂಚದಲ್ಲಿ ಇಡುತ್ತಾರೆ. ಮತ್ತೆ ಅದರ ಮಧ್ಯದಲ್ಲೊಂದು ಕನ್ನಡಿ ಇಡುತ್ತಾರೆ. ಬದಿಯಲ್ಲೊಂದು ದೀಪ ಉರಿಸಿ ಇಡುತ್ತಾರೆ. ಬೆಳಿಗ್ಗೆ ಎದ್ದು ಮನೆಯವರು ಆ ಕನ್ನಡಿಯಲ್ಲಿ ಮುಖ ನೋಡಿ ಅಡ್ಡಬೀಳಬೇಕು. ನಂತರ ಹಿರಿಯರ ಕಾಲು ಹಿಡಿಯಬೇಕು. ಹಿಂದೆ ಧನಿ–ಒಕ್ಕಲು ಪದ್ಧತಿ ಇರುವಾಗ ಎಲ್ಲ ಒಕ್ಕಲಿನವರು ಕಣಿ ನೋಡಲು ಧನಿಗಳ ಮನೆಗೆ ಬರುತ್ತಿದ್ದರು. ಅಡ್ಡಬಿದ್ದು ಬುಳೆಕಾಣಿಕೆ ನೀಡಿ ಪಾಯಸದೂಟ ಮಾಡಿಕೊಂಡು ಹೋಗುತ್ತಿದ್ದರು. ಬಿಸು ಪರ್ಬದ ದಿವಸ ಗೇರುಬೀಜದ ಪದಾರ್ಥ ಒಂದು ವಿಶೇಷ.

ಈ ಬಿಸು ಪರ್ಬ ಕೂಡ ಕೃಷಿ ಸಂಸ್ಕೃತಿಯದ್ದೇ. ತುಳುವರು ಪ್ರಕೃತಿ ಆರಾಧಕರು. ಬಿಸು ದಿನ ಯಾವ ದೇವರಿಗೂ ಪೂಜೆ ಇಲ್ಲ. ಸೂರ್ಯ ದೇವರು ಆ ದಿನ ಸಂಕ್ರಾಂತಿ ವೃತ್ತದಿಂದ

ಮತ್ತೊಂದು ಕಡೆಗೆ ತಿರುಗುವುದರಿಂದ ಆ ದಿನ ಹೊತ್ತು ದೇವರಿಗೇ ಪೂಜೆ. ಹೀಗೆ ತುಳುವರ ಸಂಸ್ಕೃತಿ ಅವರು ಆಚರಿಸುವ ಎಲ್ಲ ಹಬ್ಬಗಳಲ್ಲಿ ಎದ್ದು ಕಾಣುತ್ತದೆ."[೨] ಎಂದು 'ಬಿಸುಪರ್ಬ' ಆಚರಣೆಯ ಕುರಿತು ಅವರು ನೀಡಿರುವ ವಿವರಣೆಯನ್ನು ವಿಶೇಷವಾಗಿ ಲಕ್ಷಿಸಬೇಕು. 'ಬಿಸುಪರ್ಬ' ಕೃಷಿ ಸಂಸ್ಕೃತಿಯದ್ದು ಮತ್ತು ತುಳುವರು ಪ್ರಕೃತಿ ಆರಾಧಕರು ಎಂಬ ವಿಚಾರ ಗಮನಾರ್ಹವಾದುದು. ಯಾಕೆಂದರೆ 'ಬಿಸುಪರ್ಬ'ದಲ್ಲಿ ಯಾವುದೇ ದೇವರ ಮೂರ್ತಿಗೂ ಪೂಜೆ ಮಾಡುವ ಕ್ರಮ ಕಂಡುಬರುವುದಿಲ್ಲ. ಪಾಲ್ತಾಡಿಯವರು ಹೇಳುವಂತೆ 'ಬಿಸು' ಆಚರಣೆಯಂದು ಸೂರ್ಯ ದೇವರಿಗೇ ಪೂಜೆ ಎಂಬುದು ಸೂಕ್ತವೆನಿಸಿದರೂ ಈ ಆಚರಣೆಯಲ್ಲಿ ಎಲ್ಲಿಯೂ ಸೂರ್ಯನನ್ನು ಆರಾಧಿಸುವ ಕ್ರಮವು ನಮಗೆ ಕಂಡು ಬರುವುದಿಲ್ಲ. ಆದರೆ ಕೃಷಿ ಪ್ರಕೃತಿ ಆರಾಧನೆಯಾಗಿರುವುದರಿಂದ ಸೂರ್ಯನ ಪೂಜೆಯನ್ನು ಅಲ್ಲಗಳೆಯುವಂತಿಲ್ಲ. ಪ್ರಕೃತಿಯಲ್ಲಿ ಸೂರ್ಯನೂ ಒಳಗೊಳ್ಳುವ ತತ್ವವನ್ನು ಅರ್ಥಮಾಡಿಕೊಳ್ಳುವುದು ಜನಪದರಲ್ಲಿ ಕಂಡುಬರುವ ವಿಶಿಷ್ಟ ಅಂಶವಾಗಿದೆ. ಹಿರಿಯ ತುಳು ಜಾನಪದ ವಿದ್ವಾಂಸರಾದ ಪ್ರೊ. ಅಮೃತ ಸೋಮೇಶ್ವರ ಅವರು ಹೇಳುವಂತೆ ಹೊಸ ವರ್ಷದ ಆರಂಭ ದಿನವಾದ 'ವಿಷು'ವಿನಂದು ಮನೆಗಳಲ್ಲಿ ದೈವಾಲಯಗಳಲ್ಲೂ ವಿವಿಧ ಹಣ್ಣು ಹಂಪಲುಗಳನ್ನು ದೇವರಿಗೆ 'ಕಣಿ' ಇಡುವ ಕ್ರಮವಿದೆ. ಕಿರಿಯರು ಹಿರಿಯರೆಲ್ಲರ ಕಾಲುಮುಟ್ಟಿ ನಮಸ್ಕರಿಸಿ ಆಶೀರ್ವಾದ ಬೇಡುವ ವಾಡಿಕೆ ಉಲ್ಲೇಖನೀಯವೆನ್ನುವುದು ಈ ಸಂದರ್ಭದಲ್ಲಿ ಗಮನಾರ್ಹವಾಗಿದೆ.[೩] ಈ ವಿವರದಲ್ಲೂ 'ಕಣಿ' ಇಡುವ ವಿಚಾರ ಮತ್ತು ಕಿರಿಯರು ಹಿರಿಯರ ಕಾಲುಮುಟ್ಟಿ ನಮಸ್ಕರಿಸಿ ಆಶೀರ್ವಾದ ಬೇಡುವ ಕ್ರಮದ ಉಲ್ಲೇಖವಿದೆ. ಇಲ್ಲಿಯೂ ಭವಿಷ್ಯತ್ತಿನ ದಿನಗಳ ಸುಗಮ ನಿರ್ವಹಣೆಗೆ ದೈವ ದೇವರುಗಳ, ತೀರಿಕೊಂಡ ಹಿರಿಯರ ಮತ್ತು ಜೀವಂತವಿರುವ ಹಿರಿಯರ ಆಶೀರ್ವಾದ ಪಡೆಯುವ ಗೌರವ ಪೂರ್ವಕ ಕ್ರಮವನ್ನು ಗುರುತಿಸಬಹುದಾಗಿದೆ. ಹಿರಿಯರು ಎಂಬುದು ಜ್ಞಾನಿಗಳು, ಅನುಭವಸ್ಥರು ಮತ್ತು ಕಿರಿಯರಿಗೆ ಮಾರ್ಗದರ್ಶಕರು ಎಂಬ ನೆಲೆಯಲ್ಲಿ ಈ ಕಾಲುಮುಟ್ಟಿ ನಮಸ್ಕರಿಸಿ ಆಶೀರ್ವಾದ ಪಡೆಯುವ ಕ್ರಮವನ್ನು ವಿಶೇಷವಾಗಿ ಗಮನಿಸಬೇಕು.

'ಜಾನಪದ ಮಿನದನ' ಎಂಬ ಕೃತಿಯೊಂದರಲ್ಲಿಯೂ ಈ ಆಚರಣೆ ಕುರಿತು ಇನ್ನಷ್ಟು ವಿಶ್ಲೇಷಣಾ ಮಾಹಿತಿ ಇರುವುದನ್ನು ಗಮನಿಸಬೇಕು. "ಹಬ್ಬದ ಸಂಭ್ರಮ ಮೊದಲ ದಿನ ಸಂಕ್ರಮಣದಿಂದಲೇ ಪ್ರಾರಂಭವಾಗುತ್ತದೆ. ಮನೆ ಮನೆಗಳಲ್ಲಿ ಕಣಿ ಇಡುವ ಕ್ರಮವಿದೆ. ದೇವರ ಕೋಣೆಯಲ್ಲಿ ಇಲ್ಲವೇ ಮನೆಯ ಚಾವಡಿಯಲ್ಲಿ ತರಕಾರಿಗಳನ್ನೆಲ್ಲ ಓರಣವಾಗಿ ಇಡಲಾಗುತ್ತದೆ.

ಮನೆಯಲ್ಲಿರುವ ಆಭರಣಗಳು, ಹಣದ ಪೆಟ್ಟಿಗೆಯನ್ನು ಇಡಲಾಗುತ್ತದೆ ಹೊಸಬಟ್ಟೆ ಬರೆಗಳನ್ನು ಕೂಡಾ ಇಡುತ್ತಾರೆ. ತುದಿ ಬಾಳೆ ಎಲೆಯಲ್ಲಿ ಅಕ್ಕಿ ಹಾಕಿ ಅದರ ಮೇಲೆ ತೆಂಗಿನಕಾಯಿ, ಅಡಿಕೆ, ವೀಳ್ಯದೆಲೆ ಪಕ್ಕದಲ್ಲಿಟ್ಟು ಸ್ವಸ್ತಿಕ ಮಾಡಲಾಗುತ್ತದೆ. ಸ್ವಸ್ತಿಕದ ಸನಿಹದಲ್ಲಿ ಕಲಶಕನ್ನಡಿ ಇಡಲಾಗುತ್ತದೆ. ಈ ರೀತಿ ಮನೆಯಲ್ಲಿರುವ ಸಂಪತ್ತನ್ನು ಆರಾಧಿಸುವ ಆಚರಣೆಗೆ 'ಕಣಿ' ಇಡುವುದು ಎನ್ನುತ್ತಾರೆ. ಕಣಿಯನ್ನು ವಿವಿಧ ಹೂಗಳಿಂದ ಅಲಂಕರಿಸುತ್ತಾರೆ. ಕೆಲವರು ಸಂಕ್ರಮಣದ ದಿನ ರಾತ್ರಿಯೇ ಕಣಿಯಿಟ್ಟು ಬಿಡುತ್ತಾರೆ. ಮುಂಜಾನೆ ಮನೆಯವರು ಎದ್ದೊಡನೆ ಹೋಗಿ ಕಲಶದಲ್ಲಿಟ್ಟ ಕನ್ನಡಿಯಲ್ಲಿ ಮುಖ ನೋಡುವುದು ಪದ್ಧತಿ. ನಂತರ ಹೊಸ ಉಡುಪು ಧರಿಸಿ ಹಿರಿಯರ ಕಾಲಿಗೆ ನಮಸ್ಕಾರ ಮಾಡುತ್ತಾರೆ"[9]-ಎಂದು 'ಬಿಸು' ಆಚರಣೆಯ ಬಗ್ಗೆ ಮತ್ತಷ್ಟು ವಿವರವಿರುವುದು ಇನ್ನಷ್ಟು ಕುತೂಹಲ ಹುಟ್ಟಿಸುತ್ತದೆ.

ಹಾಗೆಯೇ ಅವರು ಮುಂದುವರೆಸುತ್ತಾ, "ಮಧ್ಯಾಹ್ನ ಪಾಯಸದೂಟ, ರಾತ್ರಿಹೊತ್ತು ಉದ್ದಿನ ದೋಸೆ, ವಿಶೇಷ ಪಲ್ಯಗಳಿಂದ ಕೂಡಿದ ಭೋಜನ ನಡೆಯುತ್ತದೆ. ತಮ್ಮ ಮನೆಗಳಲ್ಲಿ ಕಣಿ ಇಡಲು ಅವಕಾಶವಿಲ್ಲದ ಬಡವರು ಶ್ರೀಮಂತರ ಮನೆಯಲ್ಲಿಟ್ಟು ಕಣಿಯನ್ನು ನೋಡಿ ಸಂತೋಷ ಪಡುತ್ತಾರೆ. ಊರವರೆಲ್ಲರೂ ದೇವಾಲಯಕ್ಕೆ ಹೋಗಿ ಪೂಜೆಯಲ್ಲಿ ಪಾಲ್ಗೊಳ್ಳುತ್ತಾರೆ. ಹಿಂದೆ ಜಮೀನ್ದಾರರ ಮನೆಗಳಿಗೆ ಬಿಸುವಿನ ದಿನ ಒಕ್ಕಲಿನವರೆಲ್ಲ ಹೋಗಿ ಹಸಿರುವಾಣಿ(ತರಕಾರಿ ಹೊರೆ) ಒಪ್ಪಿಸಿ ದಣಿಯವರಿಗೆ ನಮಸ್ಕರಿಸಿ ಉಡುಗೊರೆ ಪಡೆಯುವ ಕ್ರಮವಿತ್ತು. ರೈತರು ಹಸಿರುವಾಣಿ ಒಪ್ಪಿಸಿದರೆ ಕುಶಲ ಕರ್ಮಿಗಳು ಅವರವರ ವೃತ್ತಿಗನುಸಾರವಾಗಿ ಮಣ್ಣು, ಬೆಳ್ಳಿ, ಮರ, ಕಬ್ಬಿಣದ ಚಿಕ್ಕ ಚಿಕ್ಕ ವಸ್ತುಗಳನ್ನು ತಯಾರಿಸಿ ಒಪ್ಪಿಸುತ್ತಿದ್ದರು. ಚಾಪೆ ಹೆಣೆಯುವವರು ಚಾಪೆ ನೀಡುತ್ತಿದ್ದರು. ಬಿಸುವಿನ ದಿನ ರೈತರು ಬೇಸಾಯದ ಕೆಲಸಕ್ಕೆ ಪ್ರಾರಂಭಿಸುವುದು ಪದ್ಧತಿ. ಗದ್ದೆಯಲ್ಲಿ ಒಂದು ಸಾಲು ಉತ್ತು ಗೊಬ್ಬರ, ಸೊಪ್ಪು ಅಥವಾ ಬೂದಿ ಚೆಲ್ಲಿ ನಾಲ್ಕಾರು ಬೀಜಗಳನ್ನು ಬಿತ್ತಿ ನೀರು ಹೊಯ್ದು ಸಾಂಕೇತಿಕವಾಗಿ ಬೇಸಾಯ ಪ್ರಾರಂಭಿಸುತ್ತಾರೆ. ಇದನ್ನು ತುಳುನಾಡಿನ ಉತ್ತರ ಭಾಗದಲ್ಲಿ ಆರೂಡು ಎನ್ನುತ್ತಾರೆ. ಆ ದಿನ ಸಣ್ಣ ಮಕ್ಕಳಿಗೆ ಕಿವಿ, ಮೂಗು ಚುಚ್ಚಿಸಿ ಆಭರಣ ತೊಡಿಸಲು ಒಳ್ಳೆಯ ದಿನ. ಪ್ರಾಯಕ್ಕೆ ಬಂದ ಹೆಣ್ಣು ಮಕ್ಕಳು ಆ ದಿನ ಸೀರೆ ಉಡಲು ಪ್ರಾರಂಭಿಸುತ್ತಾರೆ. ಇದನ್ನು 'ಮೇದಲೆ' ಹಾಕುವುದು ಎನ್ನುತ್ತಾರೆ. ಮಧ್ಯಾಹ್ನದ ಊಟವಾದ ಬಳಿಕ ತೆಂಗಿನಕಾಯಿ ಕುಟ್ಟುವ ಸ್ಪರ್ಧೆ, ಕೋಳಿ ಅಂಕ, ಕಬಡ್ಡಿ ಹೀಗೆ ಹಲವಾರು ಸ್ಪರ್ಧೆಗಳನ್ನು ನಡೆಸಿ ಜನರು ಸಂತೋಷ ಪಡುತ್ತಾರೆ. ಗತಿಸಿ ಹೋದ ಹಿರಿಯರಿಗೆ (ಗುರುಕಾರ್ನವರಿಗೆ) ಆ ದಿನ ಅಗೆಲು ಬಡಿಸಲಾಗುತ್ತದೆ. ಭೂತ,

ನಾಗರಿಗೆ ತಂಬಿಲ ನಡೆಸಲಾಗುತ್ತದೆ. ಬಿಸು ಹಬ್ಬವನ್ನು ತುಳುನಾಡಿನಲ್ಲಿ ಅಲ್ಲದೆ ಕೇರಳ ಮತ್ತು ಪಶ್ಚಿಮ ಬಂಗಾಳದಲ್ಲಿಯೂ ವಿಶೇಷ ರೀತಿಯಲ್ಲಿ ಆಚರಿಸಲಾಗುತ್ತದೆ. ತುಳುನಾಡಿನಲ್ಲಿರುವ ಗೌಡ ಸಾರಸ್ವತ ಬ್ರಾಹ್ಮಣರು, ವಿಶ್ವ ಬ್ರಾಹ್ಮಣರು, ಮಾರಾಠಿಯವರು ಮುಂತಾದ ಕೆಲವೊಂದು ಜಾತಿಯವರು ಚಾಂದ್ರಮಾನ ಯುಗಾದಿಯನ್ನು ಹೊಸವರ್ಷದ ಮೊದಲ ದಿನವೆಂಬುದಾಗಿ ಪರಿಗಣಿಸಿ ಆಚರಣೆ ನಡೆಸುತ್ತಾರೆ"[3] ಎಂದು ಹೇಳುವ ಈ ಮಾತುಗಳಲ್ಲಿ 'ಬಿಸುಪರ್ಬ'ದ ವ್ಯಾಪಕತೆ ಮತ್ತು ಇದು ಭಾರತೀಯ ಸಂಸ್ಕೃತಿಯಲ್ಲಿಯೇ ವಿಶಿಷ್ಟ ಸ್ಥಾನ ಪಡೆದಿರುವ ಅಂಶವು ವ್ಯಕ್ತವಾಗುತ್ತದೆ. ಈ ಹಿನ್ನೆಲೆಯಲ್ಲಿ ತುಳುವರ ಈ ಹಬ್ಬಕ್ಕೆ ಕೊಟ್ಟಿರುವ ಪ್ರಾಶಸ್ತ್ಯ ಮತ್ತು ಅದನ್ನು ಸ್ವೀಕರಿಸುವ ಮನೋಭಾವವನ್ನು ವಿಶೇಷವಾಗಿ ಗಮನಿಸಬೇಕು. ಇಲ್ಲಿ 'ಬಿಸು' ಆಚರಣೆ ಕೃಷಿ ಸಮುದಾಯದ ವರ್ಷಾರಂಭದ ಆಚರಣೆ ಮತ್ತು ಆ ದಿನ ಯಾವುದೇ ಕಾರ್ಯಕ್ರಮಗಳನ್ನು ಶುರುಮಾಡಲು ಜನಪದದ ಪ್ರಕಾರ ಶುಭದಿನ. ಹೆಣ್ಣು ಮಕ್ಕಳು 'ಸೀರೆಉಡುವುದು', 'ಕಿವಿ ಚುಚ್ಚಿಸುವುದು', 'ನಾಗತಂಬಿಲ', 'ಭೂತಗಳಿಗೆ ತಂಬಿಲ', ಹಿರಿಯರಿಗೆ 'ಅಗೆಲು' ಹಾಕುವಂತಹ ಕಾರ್ಯಕ್ರಮಗಳೂ ಆ ದಿನ ನಡೆಯುವುದು ತುಳುವರ ನಂಬಿಕೆಗಳನ್ನು ಅನಾವರಣಗೊಳಿಸುತ್ತದೆ. 'ಬಿಸು' ವರ್ಷಾರಂಭದ ದಿನವಾದ್ದರಿಂದ ಶುಭದಿನ ಹೇಗೋ ಅತ್ಯಂತ ಸಂಭ್ರಮದ ದಿನ ಕೂಡ. ಹಾಗಾಗಿ ಜಾನಪದ ಕ್ರೀಡೆಗಳಾದ 'ಕೋಳಿಅಂಕ', 'ತೆಂಗಿನಕಾಯಿ ಕುಟ್ಟುವುದು', 'ಕಬಡ್ಡಿ' ಹಾಗೂ 'ಸಾಮೂಹಿಕ ಬೇಟೆ' ಮೊದಲಾದವುಗಳನ್ನು ಮನೋರಂಜನೆಗಾಗಿ ತುಳುವರು ನಡೆಸುತ್ತಾರೆ. ಈಗಾಗಲೇ ತಿಳಿಸಿರುವ 'ಅಪ್ಪರೆ ಪಾಡುನ' ಕ್ರಮವನ್ನು ತುಳುನಾಡಿನ ಉತ್ತರ ಭಾಗದಲ್ಲಿ 'ಆರೂಡು' ಎಂದು ಕರೆಯುತ್ತಾರೆ ಮತ್ತು 'ಬಿಸು' ಆಚರಣೆಯನ್ನು ಕೇರಳ ಮತ್ತು ಪಶ್ಚಿಮ ಬಂಗಾಳದಲ್ಲಿಯೂ ವಿಶೇಷ ರೀತಿಯಲ್ಲಿ ಆಚರಿಸಲಾಗುತ್ತದೆ ಎಂಬುದು 'ಬಿಸು' ಆಚರಣೆಗೆ ಸಮಾನವಾದ ಆಚರಣೆಗಳು ದೇಶಾದ್ಯಂತ ಇಲ್ಲವೇ ಜಗತ್ತಿನಾದ್ಯಂತ ಇರುವುದನ್ನು ಪುಷ್ಟೀಕರಿಸುತ್ತದೆ.

ಡಾ.ಡಿ.ಆರ್.ಪಾಂಡುರಂಗ ಅವರು ಒಂದೆಡೆ ಹೇಳುವಂತೆ ದಕ್ಷಿಣ ಕನ್ನಡ ಜಿಲ್ಲೆಯ ಭೈರರು ಆಚರಣೆಗಳ ಸಂದರ್ಭದಲ್ಲಿ ಕಣಿ ಇಡುವುದು ಕನ್ನಿ ಕಂಬದ ಎದುರು ಎಂದು ಹೇಳುತ್ತಾರಲ್ಲದೆ, ಹಣೆಗೆ ಭಸ್ಮ ಹಚ್ಚಿ ಸೊಂಟಕ್ಕೆ ಒಂದು ಬಟ್ಟೆ ಕಟ್ಟಿಕೊಳ್ಳುತ್ತಾರೆ. ಈ ದಿನ ಕಾರ್ಯಕ್ರಮಕ್ಕೆ ಮಗಳು ಮತ್ತು ಅಳಿಯನನ್ನು ಕರೆಸುತ್ತಾರೆ. ಅವರಿಗೆ ಪಾಯಸ ಮಾಡುತ್ತಾರೆ. ಅಳಿಯನಿಗೆ ಪಂಚೆ ಮತ್ತು ಶಾಲು, ಮಗಳಿಗೆ ಸೀರೆ ಮತ್ತು ಕುಪ್ಪಸ ಕೊಡುತ್ತಾರೆ. ಆ ದಿವಸ ಕೋಳಿಯ ಪದಾರ್ಥ ಮತ್ತು ಸೀ ಅಡಿಗೆ ಮಾಡುತ್ತಾರೆ. ಮಾರನೆಯ ದಿನ ಎತ್ತುಗಳನ್ನು ಹೂಡಿ

ಬೀಜ ಬಿತ್ತುತ್ತಾರೆ. ತರಕಾರಿ ಗಿಡಗಳನ್ನು ನೆಡುತ್ತಾರೆ. ದಣಿಗಳ ಮನೆಯ ಕಾರ್ಯಗಳನ್ನು ಮಾಡಿಕೊಟ್ಟು ಅವರಿಂದ ಸಮ್ಮನ, ಪಂಚೆ, ಸೀರೆ, ವಸ್ತ್ರ ತೆಗೆದುಕೊಂಡು ಬರುತ್ತಾರೆ[೬] ಎಂದು ಹೇಳುವ ಮಾತಿನಲ್ಲಿ 'ಬಿಸು' ಹೊಸವರ್ಷಾರಂಭ ದಿನವಾದ್ದರಿಂದ ಪರಸ್ಪರ 'ಶುಭಾಶಯ ಕೋರುವುದು', 'ಉಡುಗೊರೆ ಹಂಚುವುದು', 'ಮದುವೆ ಮಾಡಿಕೊಟ್ಟ ಹೆಣ್ಣುಮಕ್ಕಳನ್ನು ತವರಿಗೆ ಕರೆಸಿಕೊಳ್ಳುವುದು'– ಹೀಗೆ ಕೌಟುಂಬಿಕ ಸಂಬಂಧಗಳನ್ನು ಗಟ್ಟಿಗೊಳಿಸಬಲ್ಲ ಆಚರಣೆಯ ಆಶಯವನ್ನು ಮನಗಾಣಬಹುದು.

"ಬಿಸು ಹೊಸವರ್ಷದ ಆಚರಣೆ. ಸೌರಮಾನ ಯುಗಾದಿಯಾದ ಏಪ್ರಿಲ್ ೧೪ನ್ನು ಹೊಸವರ್ಷವೆಂದು ತುಳುವರು ಪರಿಗಣಿಸಿದ್ದಾರೆ. ಅಂದು ದವಸ ಧಾನ್ಯಗಳನ್ನು ಪೂಜೆ ಮಾಡುತ್ತಾರೆ. ಹಿಂದಿನ ಪದ್ಧತಿಯಂತೆ ತಮ್ಮ ಒಡೆಯರ ಮನೆಗಳಿಗೆ ತಾವು ಬೆಳೆದ ತರಕಾರಿಗಳನ್ನು ಕಾಣಿಕೆ ಒಪ್ಪಿಸುವ ಪದ್ಧತಿಯು ಇತ್ತು ಮತ್ತು ಅಂದು ಸಾಮೂಹಿಕವಾಗಿ ಬೇಟೆಯಾಡುವ ಪದ್ಧತಿಯು ಇತ್ತು. ಇತ್ತೀಚೆಗೆ ಈ ಪದ್ಧತಿ ಭೂ ಒಡೆತನದಲ್ಲಾದ ಬದಲಾವಣೆಯಿಂದ ನಿಂತು ಹೋಗಿದೆ"[೭] ಎಂದು ತುಳುನಾಡಿನ ಮುಗೇರ ಜನಾಂಗದವರ ಆಚರಣೆಗಳಿಗೆ ಸಂಬಂಧಿಸಿದಂತೆ ಅಧ್ಯಯನ ಮಾಡಿದ ಡಾ.ಅಭಯ ಕುಮಾರ್ ಅವರು ಹೇಳುತ್ತಾರೆ. ಇಲ್ಲಿ ಈ ಆಚರಣೆಯ ದಿನ ಹಿಂದೆ ಸಾಮೂಹಿಕ ಬೇಟೆಯಾಡುವ ಕ್ರಮವಿತ್ತೆಂದು, ಹೇಳಿರುವುದನ್ನು ವಿಶೇಷವಾಗಿ ಲಕ್ಷಿಸಬಹುದು. ಇದು ತುಳುನಾಡಿನಲ್ಲಿ ಮೂಲದಲ್ಲಿ ಬೇಟೆಯಾಡಿ ಜೀವನ ನಡೆಸುತ್ತಿದ್ದ ಆದಿಮ ಸಂಸ್ಕೃತಿಯನ್ನು ಸಂಕೇತಿಸುತ್ತದೆ. ಮಾತ್ರವಲ್ಲ ಆಚರಣೆಗಳು ಕಾಲಕಾಲಕ್ಕೆ ಸಾಮಾಜಿಕ, ರಾಜಕೀಯ ಸ್ಥಿತ್ಯಂತರಗಳಿಗನುಗುಣವಾಗಿ ಬದಲಾವಣೆ ಹೊಂದುತ್ತವೆ ಎಂಬ ಬಗ್ಗೆ ಸೂಚನೆಯಿದೆ.

ಪಾಣರ ಜನಾಂಗೀಯ ಅಧ್ಯಯನಕ್ಕೆ ಸಂಬಂಧಿಸಿದಂತೆ ಅವರ ಹಬ್ಬಗಳ ಕುರಿತಾಗಿ ಅಧ್ಯಯನ ಮಾಡಿರುವ ವಿದ್ವಾಂಸರು "ಬಿಸು ಎಂದರೆ ಸೌರಮಾನ ಯುಗಾದಿ. ಪಗ್ಗು ಮೊದಲ ದಿನ (ಏಪ್ರಿಲ್ ೧೪) ಆಚರಿಸಲ್ಪಡುವ ಈ ಹಬ್ಬದಂದು ಪಾಣಾರರು ತಮ್ಮ ಒಡೆಯರ ಮನೆಗೆ ಕಾಣಿಕೆಯೊಂದಿಗೆ ತೆರಳುತ್ತಾರೆ. ಸಾಮಾನ್ಯವಾಗಿ ಇವರೇ ಹೆಣೆದು ಮಾಡಿದ ಚಾಪೆಯನ್ನು ಕಾಣಿಕೆಯಾಗಿ ನೀಡುವುದು ರೂಢಿ. ಒಡೆಯರಿಗೆ ಕಾಣಿಕೆ ಸಮರ್ಪಿಸಿ ಹಬ್ಬದೂಟ ಮಾಡಿ ಹಿಂತಿರುಗುತ್ತಾರೆ. ಸಂಪ್ರದಾಯ ಪ್ರಕಾರ ಒಡೆಯರು ಆ ದಿನ ಪಾಣಾರರಿಗೆ ಹೊಸ ಉಡುಪಿನ ಉಡುಗೊರೆ ನೀಡಬೇಕು. ತಲೆಗೆ ಎಣ್ಣೆ, ಹೊಟ್ಟೆಗೆ ಹಿಟ್ಟು ನೀಡಬೇಕು"[೮] ಎಂದು ಹೇಳುತ್ತಾರೆ. ಈ ಮಾತಲ್ಲಿ 'ಬಿಸು' ಆಚರಣೆಯ ದಿನ ಕುಲವೃತ್ತಿಯ ಉತ್ಪನ್ನಗಳಿಗೆ ಸಿಗುವ ಮಹತ್ವವನ್ನು

ಗಮನಿಸಬಹುದು. ಜೊತೆಗೆ ಈ ಆಚರಣೆ ಸಾಮಾಜಿಕವಾದ ಜಾತಿ ವ್ಯವಸ್ಥೆಯನ್ನು ಮತ್ತು ಬಡವ ಹಾಗೂ ಶ್ರೀಮಂತರ ನಡುವಿನ ಸಂಬಂಧವನ್ನು ಸುಸ್ಥಿತಿಯಲ್ಲಿಡುವಲ್ಲಿ ಸಹಕಾರಿಯಾಗುತ್ತದೆ ಎಂಬ ಅಂಶ ವ್ಯಕ್ತವಾಗುತ್ತದೆ.

ದಕ್ಷಿಣ ಕನ್ನಡ ಜಿಲ್ಲೆಯ ಹರಿಜನ ಮತ್ತು ಗಿರಿಜನರ ಸಾಮಾಜಿಕ ಇತಿಹಾಸದ ಬಗ್ಗೆ ಕೃತಿ ಬರೆದಿರುವ ಪಿ.ಕಮಲಾಕ್ಷ ಅವರು "ಜಿಲ್ಲೆಯಲ್ಲಿ ಹರಿಜನರಿಗೆ ಇದು ಮಹಾ ಹಬ್ಬದ ದಿನ; ಮಾತ್ರವಲ್ಲ ಅವರಿಗೆ ಹೊಸ ವರ್ಷ. ಅಂದು ಮನೆಯಲ್ಲಿರುವ ಕುಟುಂಬದವರು ಮತ್ತು ಇತರ ಕಿರಿಯರು ಯಜಮಾನನ ಕಾಲನ್ನು ಮುಟ್ಟಿ ನಮಸ್ಕರಿಸಬೇಕು. ಅಂದು ಬಹಳ ಸಂಭ್ರಮ, ಭಾರೀ ಭೋಜನ ಹಾಗೂ ಶುಭದಿನ"[೯] ಎಂದು 'ಬಿಸು' ಆಚರಣೆಯ ಕುರಿತು ತಿಳಿಸುತ್ತಾರೆ.

"ಯುಗಾದಿ ಹಬ್ಬ ವರ್ಷಾರಂಭದ ಹಬ್ಬ; ಬಿಸುಕಣಿ ಒಪ್ಪಿಸುವುದು, ಗದ್ದೆಗಳಿಗೆ ಕಣಿ ಇಡುವುದು ಅಂದಿನ ವಿಶೇಷ. ನೆಕ್ಕಿ ಮುಳ್ಳು ಸರೋಳಿ ಸೊಪ್ಪುಗಳನ್ನು ಗದ್ದೆಗಳಲ್ಲಿಟ್ಟು ಅವುಗಳ ಮೇಲೆ ಕಲ್ಲು ಇಡುತ್ತಾರೆ. ಇದನ್ನೆ ಕಣಿ ಇಡುವುದು ಎನ್ನುವುದು. ದಣಿಗಳಿಗೆ ಬಿಸು ಕಾಣಿಕೆ ಒಪ್ಪಿಸುವುದು, ಗೌರವ ಸೂಚಿಸುವುದು, ಮುಂದಿನ ಸಾಗುವಳಿಗೆ ಅನುಮತಿ ಬೇಡುವುದು ಬಿಸುಕಣಿ ಒಪ್ಪಿಸುವುದಾಗುತ್ತದೆ"[೧೦] ಎಂಬುದಾಗಿ ಡಾ.ವಾಮನ ನಂದಾವರ ಅವರು ನೀಡುವ 'ಬಿಸು' ಆಚರಣೆಯ ಸಂಕ್ಷಿಪ್ತ ಚಿತ್ರಣದಲ್ಲಿ ಕಣಿ ಇಡುವ ಕ್ರಮದ ವಿವರ, ಇತರರು ನೀಡುವ ವಿವರಣೆಗಿಂತ ಸ್ವಲ್ಪ ಭಿನ್ನವಾಗಿರುವುದನ್ನು ಗಮನಿಸಬಹುದು. 'ಅಪ್ಪರೆ ಪಾಡುನ' ವಿವರ ಇಲ್ಲಿಲ್ಲ. ಕೇವಲ 'ನೆಕ್ಕಿಕೋಲು' ಮತ್ತು 'ಸರೋಳಿತಪ್ಪು'ಗಳನ್ನು ಮಾತ್ರ ಗದ್ದೆಯಲ್ಲಿ ಹಾಕಿ ಅದರ ಮೇಲೆ 'ಕಲ್ಲುಇಡುವ' ಕ್ರಮವನ್ನು ಮಾತ್ರ ಇಲ್ಲಿ ಉಲ್ಲೇಖಿಸಲಾಗಿದೆ. ಅಂತೆಯೇ ಓರ್ವ ವಕ್ತೃ ನಾಗಬನ ಇರುವ ಮನೆಯವರು ಮಾತ್ರ ಅಪ್ಪರೆ ಪಾಡುನ ಆಚರಣೆಯನ್ನು ಮಾಡುತ್ತಾರೆ ಎನ್ನುತ್ತಾರೆ. ಹೀಗೆ ಬೇರೆ ಬೇರೆ ವಿದ್ವಾಂಸರು ಬೇರೆ ಬೇರೆ ಜನಾಂಗಗಳು 'ಬಿಸುಪರ್ಬ'ವನ್ನು ಆಚರಿಸುವ ಕುರಿತು ವಿವರ ನೀಡಿರುವಲ್ಲಿ ಈ ಆಚರಣೆಯ ಬೇರೆ ಬೇರೆ ನೆಲೆಗಳನ್ನು ಅರಿತುಕೊಳ್ಳಬಹುದಾಗಿದೆ.

ಮೀನ ಮಾಸ ಮುಗಿದು ಮೇಷ ಮಾಸ ಪ್ರಾರಂಭದ ಸಂಕ್ರಮಣ. ತುಳುವಿನ ಲೆಕ್ಕಾಚಾರದಂತೆ ಹೊಸವರುಷದ ಪ್ರಥಮ ತಿಂಗಳು 'ಪಗ್ಗು ತಿಂಗಳು' ಬರುವ ಸಂಕ್ರಮಣ. ಸೌರಮಾನ ವರ್ಷಾರಂಭ.

ತುಳುವರ ಯುಗಾದಿ ಸೌರಮಾನ ಲೆಕ್ಕದಲ್ಲಿ ಬರುತ್ತದೆ. 'ಪಗ್ಗು' ತಿಂಗಳೆಂದರೆ ಫಲದಿಂದ ಮರಗಳು ತುಂಬಿ ತುಳುಕಿ ಓಲಾಡುತ್ತವೆ. ಸಮೃದ್ಧಿಯಾಗಿರುತ್ತವೆ. ತರಕಾರಿಗಳು ಯಥೇಚ್ಛವಾಗಿ ಬೆಳೆದಿರುತ್ತವೆ.

ಯುಗಾದಿಯ 'ಕಣಿ'ಗೆ ಅರ್ಪಿಸದೆ ಹೊಸ ಫಲಗಳನ್ನು ತಿನ್ನಬಾರದೆಂಬ ನಂಬಿಕೆಯಿದೆ. ಅಂದು ಬೆಳಿಗ್ಗೆ ಬೇಗನೆ ಎದ್ದು ಎಲ್ಲರೂ ಸ್ನಾನಮಾಡಿ ಹೊಸ ಬಟ್ಟೆ ಧರಿಸುವ ಸಂಪ್ರದಾಯವೂ ಇದೆ. ತುಳುನಾಡಿನ ಜನ ಶ್ರಮ ಸಂಸ್ಕೃತಿಯವರಾದ್ದರಿಂದ ಇತರ ದಿನಗಳಲ್ಲಿ ರಾತ್ರಿ ಸ್ನಾನ ಮಾಡುವುದು ತುಳುವರಲ್ಲಿ ರೂಢಿ.

ಅಂತೆಯೇ ತುಳುನಾಡಿನ ಬಂಟಜನಾಂಗದ ಬಗ್ಗೆ ಅಧ್ಯಯನ ಮಾಡಿರುವ ಇಂದಿರಾ ಹೆಗ್ಗಡೆಯವರು ಆ ಜನಾಂಗದವರು ಈ ಆಚರಣೆಯನ್ನು ಹೇಗೆ ಆಚರಿಸುತ್ತಾರೆ ಎನ್ನುವುದರ ಬಗ್ಗೆ ಹೀಗೆ ಗಮನ ಸೆಳೆದಿದ್ದಾರೆ.

"ಚಾವಡಿಯ ಮುಂದಿನ ಮೊಗಸಾಲೆಯಲ್ಲಿ ಅಥವಾ ಚಾವಡಿಯಲ್ಲಿ ಒಂದು ನಿಲುವು ಗನ್ನಡಿಯನ್ನು ಗೋಡೆಗೊರಗಿಸಿ ಇಡುತ್ತಾರೆ. ಅದರ ಮುಂದೆ ಸೆಗಣಿ ಸಾರಿಸಿ ಮಂಡಲ ಬರೆಯುತ್ತಾರೆ. ಯುಗಾದಿಯ ಹಿಂದಿನ ದಿವಸ ಕಣಿ ಇಡುತ್ತಾರೆ. ಒಕ್ಕಲಿನ ಮನೆಯವರು ತಮ್ಮ ಕುಲಕಸುಬಿಗೆ ತಕ್ಕಂತೆ ತಾವು ತಯಾರಿಸಿದ ಪರಿಕರಗಳನ್ನು ತರುತ್ತಾರೆ. ಉದಾಹರಣೆಗೆ ಗಾಣಿಗ ಎಣ್ಣೆ, ಸೆಟ್ಟಿಗಾರ(ದೇವಾಂಗದ) ಹೊಸಬಟ್ಟೆ, ಮರದ ಆಚಾರಿ ಮರದಿಂದ ನಿರ್ಮಿಸಿದ ನೇಗಿಲು, ಕಬ್ಬಿಣದ ಆಚಾರಿ ಕಬ್ಬಿಣದ ಸಾಮಾನು, ಕುಂಬಾರ ಮಡಕೆ ಹಾಗೂ ಬ್ಯಾರಿ (ಮುಸ್ಲಿಮ್) ಗೇರು ಬೀಜ-ಹೀಗೆ ತಮ್ಮ ತಮ್ಮ ಭೂಮಿಯಲ್ಲಿ ಬೆಳೆಯುವ ಹಣ್ಣು ತರಕಾರಿ, ಬಾಳೆ, ಬೇವು, ಮಾವು ಇತ್ಯಾದಿಗಳನ್ನು ತಂದು ಕನ್ನಡಿಯ ಮುಂದೆ ಜೋಡಿಸುತ್ತಾರೆ. ಈ ಕ್ರಮವನ್ನು ಕಣಿ ಎನ್ನುತ್ತಾರೆ ಮನೆ ಮಂದಿ ಬೆಳಿಗ್ಗೆ ಎದ್ದ ಕೂಡಲೇ ಕಣಿ ನೋಡುತ್ತಾರೆ"[೧೧] ಎಂದು ಹೇಳಿರುವಲ್ಲಿ ಬಂಟಜನಾಂಗದ 'ಬಿಸು'ಆಚರಣೆಯ ಕ್ರಮಗಳನ್ನು ತಿಳಿಯಬಹುದು. ಆದರೆ ಆಚರಣೆಯಲ್ಲಿ ಗುರುತಿಸುವಂತಹ ವ್ಯತ್ಯಾಸಗಳೇನೂ ಕಂಡುಬರುವುದಿಲ್ಲ.

ಅವರು ಮುಂದುವರೆಸುತ್ತಾ, "ಪೇರೂರು (ಕಾಸರಗೋಡು) ದುಗ್ಗಲಾಯ 'ಸಾನ'ದಿಂದ ದುಗ್ಗಲಾಯಿ ದೈವ ಜೋಗ (ಪಾತ್ರಿ ಆವೇಶದಲ್ಲಿ)ದಲ್ಲಿ ಪೇರೂರು ಗುತ್ತು ಮನೆಗೆ ಬರುತ್ತದೆ. ಕಣಿಯ ಮುಂದೆ ನಿಂತು ಮನೆಯ ಯಜಮಾನ ಮದಿಪು ಹೇಳುತ್ತಾರೆ. ದೈವ ನುಡಿ ಕೊಡುತ್ತದೆ-'ಸಕಲ ಸಮೃದ್ಧಿಯನ್ನು ಈ ಮನೆಗೆ, ಈ ಮನೆಯ ಒಕ್ಕಲು ಮಕ್ಕಳಿಗೆ ತಂದೊಡ್ಡುವೆ' ಎಂದು ಅಭಯ ನೀಡುತ್ತದೆ. 'ತಾಯಿಯಾಗಿ ಎದೆ ಹಾಲು ಕುಡಿಸಿ ಪೊರೆವೆ.

ಸೋದರಮಾವನಾಗಿ ಬೆನ್ನ ಹಿಂದೆ ನಿಂತು ರಕ್ಷಣೆ ಕೊಡುವೆ. ಮಳೆಯಾಗಿ ಬರುವ ಅವಘಡವನ್ನು ಮೈಂದ್ (ಮಂಜು) ಆಗಿ ಕರಗಿಸುತ್ತೇನೆ. ಮಾಯೆಯ ಬೇಲಿ ಹಾಕಿ ಹೂವಿನ ಹಿತ್ತಲು ಕಾಯುವಂತೆ ನನ್ನ ಊರ ಸಮಸ್ತರನ್ನು ಕಾಯುತ್ತೇನೆ. ನಂಬಿ, ನಂಬಿದಲ್ಲಿ ಮೈದೋರುತ್ತೇನೆ'-ಎಂದು ಅಭಯ ನೀಡಿ ಅದರ ಸ್ಥಾನಕ್ಕೆ ಮರಳುತ್ತದೆ. ಜೆಪ್ಪು ಗುಡ್ಡೆ ಗುತ್ತಿನ ಮಾಗಣೆ ದೈವಸ್ಥಾನ ಕಂಚಿಸ್ಥಾನದಲ್ಲಿ ದೈವ ಮಾಧ್ಯಮನು ಮಾಗಣೆ ಸಮಸ್ತರನ್ನು ಜೊತೆ ಇರಿಸಿ ಕಣಿ ನೋಡುತ್ತಾನೆ. ಅದೇ ದಿನ ರಾತ್ರಿ ನೇಮ ಇದೆ.

ಇದೇ ಕ್ರಮದಲ್ಲಿ ಬಂಗರ ಸೀಮೆಯ ಅರಸು ದೈವಂಗಳ ಕೋಲ ವರ್ಷಾರಂಭದಂದು ನಡೆಯುತ್ತದೆ. ಏಪ್ರಿಲ್ ತಿಂಗಳ ಸಂಕ್ರಾಂತಿಯಂದು ಸಜಿಪ ಮಾಗಣೆಯ ಅರಸು ದೈವಂಗಳ ಆರಾಧನೆಯೂ ನಡೆಯುತ್ತದೆ. ಸಂಕ್ರಾಂತಿಯ ಮರುದಿನ ಹೊಸ ವರುಷ. ಆ ದಿನ ಅರಸು ದೈವದ ಕೊಡಿಮರ (ಧ್ವಜ ಸ್ತಂಭ) ಎದುರು ಕಣಿ ಇಡಲಾಗುತ್ತದೆ. ಮಾಗಣೆಯ ಸಮಸ್ತರು ಹೊಸ ವರುಷದ ಫಲಗಳನ್ನು ಇಲ್ಲಿಗೆ ತಂದು ಅರ್ಪಿಸುತ್ತಾರೆ.

ಆ ದಿನ ವರ್ಷದ ಫಲ ಓದುವ ಕ್ರಮವಿದೆ. ವಂಡಾರು ಹೆಗ್ಗಡೆಯವರ ಮನೆಯ ಮುಂದೆ ಕಂಬಳ ಗದ್ದೆಗೆದುರಾಗಿ 'ಅಂಬಾಗಿಲು' ಎಂದು ಕರೆಯಲಾಗುವ ಬೈ ಹುಲ್ಲಿನ ಪುಟ್ಟ ಗುಡಿಸಲು ಇದೆ. ಅಲ್ಲಿ ಯುಗಾದಿಯ ದಿನದಂದು ಊರು ಸೇರುತ್ತಾರೆ. ವಂಡಾರು ಹೆಗ್ಗಡೆಯವರ ಯಜಮಾನತ್ವದಲ್ಲಿ ಅಂದು ಹೊಸವರುಷದ ಫಲ ಪಂಡಿತರಿಂದ ಓದಿಸುತ್ತಾರೆ. ಅನಂತರ ಕಿರಿಯರು ಎಲ್ಲರೂ ಹಿರಿಯರ ಪಾದಸ್ಪರ್ಶ ಮಾಡಿ ಆಶೀರ್ವಚನ ಪಡೆಯುತ್ತಾರೆ. ಒಕ್ಕಲು ಮಕ್ಕಳು ಹಿರಿಯರ ಆಶೀರ್ವಚನ ಪಡೆಯುತ್ತಾರೆ.

ಎಲ್ಲರಿಗೂ ಅಲ್ಲಿಯೇ ಸಸ್ಯಾಹಾರಿ ಭೂರಿ ಭೋಜನ ಇರುತ್ತದೆ. ಒಕ್ಕಲು ಮನೆಯವರು ತಮ್ಮ ಮನೆಯಲ್ಲಿ ಅಡುಗೆ ಮಾಡುವಂತಿರಲಿಲ್ಲ. ಎಲ್ಲರಿಗೂ ಧಣಿಯ ಮನೆಯಲ್ಲಿಯೇ ಸಹ ಭೋಜನ. ಮರುದಿನ ಕೋಳಿ ಅಂಕ ಇರುತ್ತಿತ್ತು. ಈಗಲೂ ಕೆಲವೆಡೆ ಇದೆ. ಆ ದಿನ ಒಕ್ಕಲು ಮಕ್ಕಳು ಒಡೆಯನಿಗೆ ಕೋಳಿ ತಂದು ಕೊಡುತ್ತಾರೆ. ಭರ್ಜರಿ ಕೋಳಿ ಅಂಕ, ಭರ್ಜರಿ ಊಟ, ಕಳ್ಳು ಸರಬರಾಜು ಇರುತ್ತಿತ್ತು. ಕುಲಮನೆಯಲ್ಲಿ ಈಗಲೂ ಒಕ್ಕಲು ಮನೆಯವರು ಸಹಕರಿಸಿ ಕಣಿ ಇಡುತ್ತಾರೆ.

ಬಿಸುವಿನಂದು ನೇಗಿಲು ಕಟ್ಟಿ ಗದ್ದೆ ಉತ್ತು ಬಿತ್ತನೆ ಮಾಡುವ ಸಂಪ್ರದಾಯ ಇದೆ. ನೀರಿನ ಅನುಕೂಲ ಇದ್ದವರು ಆ ದಿನ ಗದ್ದೆಯ ಮಣ್ಣನ್ನು ನೆನೆಸಿ ಭತ್ತದ ಬಿತ್ತನೆ ಮಾಡುತ್ತಾರೆ. ನೀರಿನ ಅನುಕೂಲ ಇಲ್ಲದವರು ತಮ್ಮ ಬಿತ್ತನೆಯ ಗದ್ದೆಯ ಒಂದು ಮೂಲೆಯನ್ನು

ಹಾರೆಯಿಂದ ಕೊಚ್ಚುತ್ತಾರೆ. ಮನೆಯಲ್ಲಿ ಇದ್ದ ಬೀಜದ ಭತ್ತದ ಮುಡಿಯಿಂದ ಸ್ವಲ್ಪ ಭತ್ತವನ್ನು ಉದುರಿಸಿ ಯಜಮಾನನ ತಲೆಗೆ ಮುಂಡಾಸು ಕಟ್ಟಿ ಮಕ್ಕಳೊಂದಿಗೆ ಗದ್ದೆಗೆ ಹೋಗುತ್ತಾನೆ. ಭತ್ತದ ಬೀಜವನ್ನು ಹಿಡಿದು ಪೂರ್ವಕ್ಕೆ ಮುಖಮಾಡಿ ನಿಂತುಕೊಂಡು ಬಿತ್ತನೆ ಮಾಡುತ್ತಾನೆ. ಆ ಮೇಲೆ ನೀರು ಚಿಮುಕಿಸುತ್ತಾರೆ. ಆ ಬೀಜಕ್ಕೆ ಬೀಳುವ ಬಿಸಿಲಿನ ಶಾಖ ತಪ್ಪಿಸಲು ತರೊಳಿಮರದ ಸಣ್ಣ ರೆಂಬೆಗಳನ್ನು ಮಣ್ಣಿನಲ್ಲಿ ಊರಿ ನೆಳಲು ಬೀಳುವಂತೆ ಮಾಡುತ್ತಾರೆ. ಮುಂದೆ ಮಳೆ ಬಿದ್ದಮೇಲೆ ಇಡಿ ಗದ್ದೆಯಲ್ಲಿ ಬಿತ್ತನೆ ಮಾಡುತ್ತಾರೆ. ಆ ನೇಜಿ ಕೀಳುವಾಗ ಬಿಸುವಿನ ದಿನ ಬಿತ್ತಿದ ನೇಜಿಯನ್ನು ಈ ನೇಜಿಯೊಂದಿಗೆ ಬೆರೆಸುತ್ತಾರೆ"[೧೨] ಎಂದು ಹೇಳಿರುವ ವಿವರಣೆಯಲ್ಲಿ ಭೂತಗಳಿಗೆ 'ಅಗೆಲು'ಹಾಕುವ ವಿಚಾರವಿದ್ದು, ಒಟ್ಟಾರೆ 'ಬಿಸು'ಆಚರಣೆಯ ಕ್ರಮವನ್ನು ವಿವರಿಸಿರುವುದನ್ನು ಗಮನಿಸಬಹುದು.

ಬೇರೆ ಬೇರೆ ಅಧ್ಯಯನಕಾರರ 'ಬಿಸು' ಆಚರಣೆಗೆ ಸಂಬಂಧಿಸಿದ ಮೇಲಿನ ವಿವರಗಳಲ್ಲಿ ಬಹುಪಾಲು ಸಾಮ್ಯತೆ ಮತ್ತು ಐಕ್ಯತೆ ಇರುವುದು ಕಂಡು ಬರುತ್ತದೆ. 'ಕಣಿ ಇಡುವುದು', 'ಅಪ್ಪರೆ ಪಾಡುನ' ಮತ್ತು 'ಬುಳೆ ಕಾಣಿಕೆ' ಒಪ್ಪಿಸುವುದು ಇವು 'ಬಿಸು' ಆಚರಣೆಯ ಪ್ರಧಾನ ಕ್ರಿಯೆಗಳಾಗಿ ಗಮನ ಸೆಳೆಯುತ್ತವೆ. ಅಂತೆಯೇ 'ಬೇಟೆಯಾಡುವುದು', ಭೂತನಾಗರಿಗೆ 'ತನುತಂಬಿಲ' ಸೇವೆಗಳನ್ನು ನಡೆಸುವುದು, ಮಕ್ಕಳ 'ಕಿವಿಚುಚ್ಚುವುದು', 'ಪರಸ್ಪರ ಉಡುಗೊರೆ' ವಿನಿಮಯಮಾಡಿಕೊಳ್ಳುವುದು-ಇವೆಲ್ಲವು ಪ್ರಧಾನವಾಗಿ ಕಂಡುಬರುವ ಅಂಶಗಳಾಗಿವೆ. ಜೊತೆಗೆ ಈದಿನ 'ತೆಪ್ಪಂಗಾಯಿ' ಆಟವನ್ನೂ ಆಡುವುದು ಕೆಲವೆಡೆ ಕಂಡುಬರುತ್ತದೆ.

ಕೃಷಿ ಆರಾಧನೆ, ವರ್ಷಾರಂಭದ ದಿನ ಎಂಬಂತೆ 'ಧಣಿ-ಒಕ್ಕಲು' ವಿಷಯ ಇಲ್ಲಿ ಪ್ರಮುಖವಾಗುತ್ತದೆ. ಅಂತೆಯೇ ಕಿರಿಯರು ಹಿರಿಯರ ಪಾದಸ್ಪರ್ಶ ಮಾಡಿ ನಮಸ್ಕರಿಸಿ ಆಶೀರ್ವಾದ ಪಡೆಯುವುದೂ ಆಚರಣೆಯ ಪ್ರಮುಖ ಕ್ರಿಯೆಗಳಾಗಿ ಗಮನಸೆಳೆಯುತ್ತವೆ.

ಸಾಮಾಜಿಕ ಸಂಗತಿಗಳಾದ ಬಡವ ಬಲ್ಲಿದ, ಆಳುವವರು ಮತ್ತು ಆಳಾಗಿ ದುಡಿಯುವವರು ಮತ್ತು ವಿವಿಧ ಜಾತಿ ವ್ಯವಸ್ಥೆ ಹೀಗೆ ಇವುಗಳ ನಡುವಿನ ಸೌಹಾರ್ದ ಸಂಬಂಧಗಳನ್ನು ಸುಸ್ಥಿತಿಯಲ್ಲಿಡುವಲ್ಲಿಯೂ ಈ 'ಬಿಸು' ಆಚರಣೆ ಮಹತ್ವದ್ದಾಗಿದೆ. ಕಾಣಿಕೆ ಕೊಟ್ಟು ಉಡುಗೊರೆ ಪಡೆಯುವುದು ಮತ್ತು ಪರಸ್ಪರ ಶುಭಾಶಯಗಳನ್ನು ವ್ಯಕ್ತಪಡಿಸುವುದು ಹಾಗೂ ಹೊಸವರುಷದ 'ಭವಿಷ್ಯಫಲ'ವನ್ನು ಪಂಡಿತರಿಂದ ಓದಿಸುವ ಕ್ರಮ ಇತ್ಯಾದಿಗಳೂ 'ಬಿಸು' ಆಚರಣೆಯ ಮೂಲಕ ಜನಪದರ ಜೀವನದ ಆಶಯವನ್ನು ತಿಳಿಸುತ್ತವೆ. ಇವಕ್ಕೆ

ಪೂರಕವೆಂಬಂತೆ ಕಣಿಯಲ್ಲಿಟ್ಟ ಕನ್ನಡಿಯಲ್ಲಿ ಮನೆಮಂದಿ ಬೆಳಿಗ್ಗೆ ಎದ್ದು ಮುಖ ನೋಡುವುದು–ಹೊಸ ವರ್ಷದ ಹೊಸ ಸೃಷ್ಟಿಯ ಸಂಕೇತ ಎಂಬುದಾಗಿ ಭಾವಿಸಬಹುದು. 'ಬಿಸು' ಆಚರಣೆ (ಪಗ್ಗು ಸಿಂಗೊಡೆ)ಯಂದು ಹಣ ಇಲ್ಲವೆ ಯಾವುದೇ ವಸ್ತುವನ್ನು ಸಾಲ ಕೊಡಬಾರದೆಂಬ ನಂಬಿಕೆ ಜನಪದರಲ್ಲಿದೆ. ಇದಕ್ಕೆ 'ಬಿಸು' ವರ್ಷಾರಂಭದ ಶುಭದಿನ ಎಂಬುದು ಅವರು ಕೊಡುವ ಕಾರಣವಾಗಿದೆ. ಹಾಗೆ ನೋಡಿದರೆ ತುಳುನಾಡಿನಲ್ಲಿ ಯಾವುದೇ 'ಸಿಂಗೊಡೆ' (ತಿಂಗಳ ಮೊದಲ ದಿನ) ಯಂದು ಸಾಲ ಕೊಡಬಾರದೆಂಬ ಬಲವಾದ ನಂಬಿಕೆ ರೂಢಿಯಲ್ಲಿದೆ.

### ೪.೪: 'ಬಿಸು'ವಿಗೆ ಸಮಾನವಾದ ಆಚರಣೆಗಳು

'ಬಿಸು' ಆಚರಣೆಯನ್ನು ಹೋಲುವಂತಹ ಆಚರಣೆ ಕರ್ನಾಟಕದ ಇತರೆಡೆಗಳಲ್ಲಿಯೂ ಕಂಡುಬರುತ್ತದೆ. ಅದನ್ನು 'ಭೂಮಿಪೂಜೆ' ಎಂದು ಕರೆಯುತ್ತಾರೆ. "ಕೃಷಿಕರು ಬೇಸಾಯ ಹೂಡುವ ಮೊದಲು ಭೂಮಿಯನ್ನು ಪೂಜಿಸುವುದಕ್ಕೆ 'ಭೂಮಿಪೂಜೆ' ಎಂದು ಕರೆಯುತ್ತಾರೆ. ಗ್ರಾಮದೇವತೆಯ ಪೂಜೆಯ ನಂತರ ಈ ಪೂಜೆಯನ್ನು ಮಾಡುವರು. ಮುಂಗಾರು ಮಳೆ ಬಿದ್ದ ಮೇಲೆ ರೈತ ತನ್ನ ಬೇಸಾಯದ ಸಲಕರಣೆಗಳನ್ನೆಲ್ಲಾ ಕುಲುಮೆಗಾರನಿಂದ ದುರಸ್ತಿಪಡಿಸಿ ಒಕ್ಕಲು ಕಾರ್ಯಗಳನ್ನು ಪ್ರಾರಂಭಿಸುತ್ತಾನೆ.

ಒಂದು ಗೊತ್ತಾದ ಶುಭ ಮುಹೂರ್ತದಲ್ಲಿ ನೇಗಿಲಿಗೆ ಪೂಜೆಮಾಡಿ ನೈವೇದ್ಯ ಮಾಡಿದ ಮೇಲೆ ಹೊಲಕ್ಕೆ ಹೋಗಿ ಉಳುವರು. ಇದನ್ನು ಮೈಸೂರು ಕಡೆ 'ಹೊನ್ನಾರು' ಎಂದು ಕರೆಯುತ್ತಾರೆ. ಮೊದಲು ಜ್ಯೋತಿಷಿಯಿಂದ ಕುಟುಂಬದವರು 'ಹೆಸರುಬಲ' ಕೇಳುವರು. ಆಗ ಕುಟುಂಬದ ಯಾರ ಹೆಸರಿಗೆ ಒಳ್ಳೆಯದಾಗಿ ಬರುತ್ತದೋ ಅವರು ಜ್ಯೋತಿಷಿ ಹೇಳಿದ ದಿಕ್ಕಿನಿಂದ ನೇಗಿಲು ಹೂಡಿ ಆರಂಭದಲ್ಲಿ ಮೂರು ಅಥವಾ ಐದು ಸಾಲು ಉತ್ತಿ ಮನೆಗೆ ಹಿಂತಿರುಗುವರು. ಸಾಮಾನ್ಯವಾಗಿ ಬೂಮಿಪೂಜೆ ದಿನ ಕೇವಲ ಉಳುವ ಶಾಸ್ತ್ರ ಮಾಡುವುದೇ ಹೆಚ್ಚು ರೂಢಿಯಲ್ಲಿದ್ದರೂ ಕೆಲವರು ಸಂಜೆಯವರೆಗೆ ಉತ್ತಿ ಮನೆಗೆ ಬರುವರು"[೧೩] ಎಂಬ ಈ ವಿವರಣೆಯನ್ನು ಗಮನಿಸಿದರೆ ತುಳುನಾಡಿನ 'ಬಿಸು' ಆಚರಣೆಯೂ ಕೃಷಿಗೆ ಸಂಬಂಧಿಸಿದ 'ಭೂಮಿಪೂಜೆ' ಎಂಬುದು ಸ್ಪಷ್ಟವಾಗುತ್ತದೆ. ಜೊತೆಗೆ 'ಗೇರ್ ಇಡುವುದು'[೧೪] ಎಂಬ ಇನ್ನೊಂದು ರೀತಿಯ ಆಚರಣೆಯೂ ಮಲೆನಾಡು ಪ್ರದೇಶಗಳಲ್ಲಿ ಸಾಮಾನ್ಯವಾಗಿ ಎಲ್ಲ ಜನಾಂಗಗಳಲ್ಲಿಯೂ ಕಂಡುಬರುತ್ತದೆ. ಕೆಟ್ಟದು ಹೋಗಿ ಒಳ್ಳೆಯತನ ಬರಲಿ ಎಂಬುದೇ ಇದರ

ಉದ್ದೇಶವಾಗಿರುವುದಾಗಿ ಹೇಳಲಾಗುತ್ತದೆ. ಹಾಗೆಯೇ 'ಕೂರಿಗೆ ಹಬ್ಬ'[೧೫] ಎಂಬ ಆಚರಣೆಯೂ ಗದ್ದೆಗೆ ಬೀಜ ಬಿತ್ತುವ ದಿನ ಮುಂಜಾನೆ ಬಿತ್ತಿದ ಫಸಲು ಕೈಸೇರಲೆಂದು ಮಾಡುವ ಹಬ್ಬವಾಗಿ ಕಂಡುಬರುತ್ತದೆ. ಇದರಲ್ಲಿ ಇಷ್ಟದೇವರನ್ನು, ಭೂದೇವಿಯನ್ನು ಕುರಿತು, ಫಲವು ಯಾವ ವಿಘ್ನಗಳಿಗೂ ಸಿಲುಕದೆ ಅಭಿವೃದ್ಧಿ ಹೊಂದಿ ನಮ್ಮ ಕೈಗೆ ಹೆಚ್ಚಾಗಿ ಬರಲೆಂದು ಪ್ರಾರ್ಥನೆ ಮಾಡಿ ಬಿತ್ತಲಿಕ್ಕೆ ಶುರುಮಾಡುತ್ತಾರೆ ಎಂದು ಹೇಳಲಾಗುತ್ತದೆ. ಈ ಆಚರಣೆಯಲ್ಲಿಯೂ 'ಬಿಸು'ವಿನಂದು 'ಅಪ್ಪರೆ ಪಾಡುನ', ಕೈಬಿತ್ತ್ ದೀಪುನ' ಕ್ರಮದ ಆಶಯವಿರುವುದನ್ನು ಕಾಣಬಹುದು. ಉತ್ತರ ಕರ್ನಾಟಕದ ಕಡೆ ಕಂಡುಬರುವ ವ್ಯವಸಾಯಕ್ಕೆ ಸಂಬಂಧಿಸಿದ 'ಬಸವಣ್ಣನ ಪೂಜೆ'[೧೬] ಎಂಬ ಆಚರಣೆಯೂ ಹೆಚ್ಚು ಕಡಿಮೆ 'ಬಿಸು' ಆಚರಣೆಯ ಆಶಯವನ್ನೇ ಹೋಲುತ್ತದೆ.

### ೪.೫: 'ಬಿಸು' ಆಚರಣೆಯ ಒಟ್ಟೂ ಸ್ವರೂಪ

ಒಟ್ಟಾರೆಯಾಗಿ ಆಶಯಗಳೂ ಸೇರಿದಂತೆ ಬಿಸುಪರ್ಬದ ಒಟ್ಟೂ ಸ್ವರೂಪವನ್ನು ಈ ರೀತಿ ಕ್ರೋಢೀಕರಿಸಬಹುದು.

೧. 'ಬಿಸುಪರ್ಬ'ವನ್ನು 'ಪಗ್ಗು' ತಿಂಗಳ 'ಸಿಂಗೊಡೆ'(ಮೊದಲ ದಿನ)ಯಂದು ಆಚರಿಸುತ್ತಾರೆ.

೨. ವರ್ಷಾರಂಭ ದಿನ ಎಂಬ ಶುಭ ಸೂಚಕ ನೆಲೆಯಲ್ಲಿ ಈ ಆಚರಣೆ ನಡೆಯುತ್ತದೆ.

೩. ವಿಶೇಷವಾಗಿ ಭತ್ತ ಬೇಸಾಯಕ್ಕೆ ಸಂಬಂಧಿಸಿದ ಮಹತ್ವದ ಆಚರಣೆ ಇದಾಗಿದ್ದು, 'ಅಪ್ಪರೆ ಪಾಡುನ', 'ಬೆಳೆಕಾಣಿಕೆ ಒಪ್ಪಿಸುವುದು', ಮತ್ತು 'ಕಣಿ ಇಡುವುದು' ಈ ಕ್ರಮಗಳು ಇದರ ಪ್ರಧಾನ ಕ್ರಿಯಾಭಾಗಗಳಾಗಿವೆ.

೪. ಅಂದರೆ ತುಳುವರು ತಾವು ನಂಬುವ 'ಸತ್ಯ'ಗಳಾದ 'ಭೂತ–ನಾಗ'ಗಳಿಗೆ 'ಬೆಳೆಕಾಣಿಕೆ' ಸಮರ್ಪಿಸುತ್ತಾರೆ ಮತ್ತು ಅವುಗಳಿಗೆ ಭಕ್ತಿಯಿಂದ 'ಪರ್ವ' 'ತಂಬಿಲ' ನಡೆಸುತ್ತಾರೆ.

೫. 'ಒಕ್ಕಲುಕುಟುಂಬ' 'ಧಣಿ'ಗಳಿಗೆ(ಒಡೆಯರಿಗೆ) 'ಬೆಳೆಕಾಣಿಕೆ' ಸಲ್ಲಿಸಿ, ಅವರಿಂದ 'ಉಡುಗೊರೆ' ಪಡೆದು, ಮುಂದೆ ಕೃಷಿ ಮಾಡಲು ಅಪ್ಪಣೆ ಪಡೆಯುವ ಕ್ರಮವಿದೆ.

೬. ಮನೆಯಲ್ಲಿ ಹಿರಿಯರ ಕಾಲಿಗೆ ಬಿದ್ದು ಸಾಷ್ಟಾಂಗ ನಮಸ್ಕಾರ ಮಾಡಿ ಕಿರಿಯರು ಆಶೀರ್ವಾದ ಪಡೆಯುವ ಹಾಗೂ ಪರಸ್ಪರ ಉಡುಗೊರೆ ಹಂಚುವ ಕ್ರಮವಿದೆ, ಮತ್ತು ಸಣ್ಣ ಮಕ್ಕಳಿಗೆ ಕಿವಿಮೂಗು ಚುಚ್ಚಿಸುವ ಪದ್ಧತಿಯಿದೆ.

೭. ಬೇಟೆಯಾಡುವುದು, ಕೋಳಿ ಅಂಕ, ತೆಂಗಿನಕಾಯಿ ಕುಟ್ಟುವುದು ಮೊದಲಾದ ಜಾನಪದ ಕ್ರೀಡೆಗಳನ್ನು ಆ ದಿನ ಆಡುತ್ತಾರೆ.

೮. ಗೇರುಬೀಜ ಹಾಕಿದ ಪಾಯಸ 'ಬಿಸು' ಆಚರಣೆಯ ದಿನದ ವಿಶೇಷ ಅಡುಗೆಯಾಗಿತ್ತದೆ.

೯. 'ಏಣೇಲು ಬೆಳೆ' ಬೆಳೆಯುವ ಹಿನ್ನೆಲೆಯಲ್ಲಿ 'ಕೈಬಿತ್ತ್' ಇಡುವ ಕ್ರಮವಿದೆ.

---

**ಅಡಿ ಟಿಪ್ಪಣಿ**

೧. **ತುಳು ನಿಘಂಟು:** ಸಂಪುಟ-೫: ೧೯೯೭: ಡಾ.ಯು.ಪಿ.ಉಪಾಧ್ಯಾಯ: ರಾಷ್ಟ್ರಕವಿ ಗೋವಿಂದ ಪೈ ಸಂಶೋಧನ ಕೇಂದ್ರ, ಉಡುಪಿ:ಪುಟ-೨೩೨೮

೨. **ಕನ್ನಡಾನುವಾದ: ತುಳು ಸಂಸ್ಕೃತಿದ ಪೊಲಬು:** ೨೦೦೮: ಡಾ. ಪಾಲ್ತಾಡಿ ರಾಮಕೃಷ್ಣ ಆಚಾರ್: ಕರ್ನಾಟಕ ತುಳು ಸಾಹಿತ್ಯ ಅಕಾಡೆಮಿ, ಮಂಗಳೂರು: ಪುಟ-೫೨,೫೩

೩. **ತುಳುವ ಜಾನಪದ: ಕೆಲವು ನೋಟಗಳು:** ೨೦೦೭: ಡಾ. ಅಮೃತ ಸೋಮೇಶ್ವರ: ಪ್ರಸಾರಾಂಗ, ಕನ್ನಡ ವಿ.ವಿ., ಹಂಪಿ: ಪುಟ-೩೮

೪. **ಜಾನಪದ ಮಿನದನ:** ೧೯೯೭: ಡಾ.ಪಾಲ್ತಾಡಿ ರಾಮಕೃಷ್ಣ ಆಚಾರ್: ಸುಪ್ರಿಯಾ ಪ್ರಕಾಶನ, ಪುತ್ತೂರು: ಪುಟ-೭೧,೭೨

೫. **ಅದೇ:** ಪೂರ್ವೋಕ್ತ: ಪುಟ-೭೨

೬. **ದಕ್ಷಿಣ ಕನ್ನಡ ಜಿಲ್ಲೆಯ ಭೈರರು:** ೧೯೯೦: ಡಾ.ಡಿ.ಆರ್.ಪಾಂಡುರಂಗ: ರಾಷ್ಟ್ರಕವಿ ಗೋವಿಂದ ಪೈ ಸಂಶೋಧನ ಕೇಂದ್ರ, ಉಡುಪಿ: ಪುಟ-೧೫೯

೭. **ಮುಗೇರರು ಜನಾಂಗ-ಜಾನಪದ ಅಧ್ಯಯನ:** ೧೯೯೭: ಡಾ.ಅಭಯ ಕೌಕ್ರಾಡಿ: ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು; ಕರ್ನಾಟಕ ತುಳು ಸಾಹಿತ್ಯ ಅಕಾಡೆಮಿ ಮಂಗಳೂರು: ಪುಟ-೩೬,೩೭

೮. **ಪಾಣಾರ ಜನಾಂಗ-ಬದುಕು ಮತ್ತು ಸಂಸ್ಕೃತಿ:** ತುಳುನಾಡಿನಲ್ಲಿ ಭೂತಾರಾಧನೆ: ೨೦೦೪: ಡಾ.ಪಾಲ್ತಾಡಿ ರಾಮಕೃಷ್ಣ ಆಚಾರ್: ಪ್ರಸಾರಾಂಗ, ಮಂಗಳೂರು ವಿಶ್ವವಿದ್ಯಾನಿಲಯ: ಪುಟ-೪೫

೯. **ದಕ್ಷಿಣ ಕನ್ನಡ ಜಿಲ್ಲೆಯ ಹರಿಜನ ಮತ್ತು ಗಿರಿಜನರ ಸಾಮಾಜಿಕ ಇತಿಹಾಸ:** ೧೯೯೪: ಪಿ.ಕಮಲಾಕ್ಷ: ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು: ಪುಟ-೧೨೯

೧೦. **ಪಿಂಗದನ:** ೧೯೮೭: ವಾಮನ ನಂದಾವರ: ಹೇಮಾಂಶು ಪ್ರಕಾಶನ, ಮಂಗಳೂರು: ಪುಟ-೬೨

೧೧. **ಬಂಟರು: ಒಂದು ಸಮಾಜೋ ಸಾಂಸ್ಕೃತಿಕ ಅಧ್ಯಯನ:** ೨೦೦೪: ಇಂದಿರಾ ಹೆಗ್ಗಡೆ: ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು: ಪುಟ-೪೬೯

೧೨. **ಅದೇ:** ಪೂರ್ವೋಕ್ತ: ಪುಟ-೪೬೯, ೪೭೦

೧೩. **ಕನ್ನಡ ಜಾನಪದ ವಿಶ್ವಕೋಶ:** ಸಂಪುಟ-೨: ೧೯೮೫: (ಸಂ.) ಡಾ.ಚಂದ್ರಶೇಖರ ಕಂಬಾರ: ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು: ಪುಟ-೧೫೧೩

೧೪. **ಅದೇ:** ಪೂರ್ವೋಕ್ತ: ಪುಟ-೬೮೦

೧೫. **ಅದೇ:** ಪೂರ್ವೋಕ್ತ: ಪುಟ-೪೬೫

೧೬. **ಅದೇ:** ಪೂರ್ವೋಕ್ತ: ಪುಟ-೧೩೮೩

■■■

# ಅಧ್ಯಾಯ-೫

## ತುಳುನಾಡಿನ ವಾರ್ಷಿಕ ಆವರ್ತನದ ಆಚರಣೆ-'ಪತ್ತನಾಜೆ'

# ಅಧ್ಯಾಯ–೫

# ತುಳುನಾಡಿನ ವಾರ್ಷಿಕ ಆವರ್ತನದ ಆಚರಣೆ–'ಪತ್ತನಾಜೆ'

೫.೧ 'ಪತ್ತನಾಜೆ'–ಅರ್ಥ

೫.೨: 'ಪತ್ತನಾಜೆ'–ಆಚರಣೆಯ ವಿಧಾನ

೫.೩: 'ಪತ್ತನಾಜೆ' ಆಚರಣೆ–ವಿಶ್ಲೇಷಣೆ

೫.೪: 'ಪತ್ತನಾಜೆ'ಗೆ ಸಮಾನವಾದ ಅಚರಣೆಗಳು

೫.೫: 'ಪತ್ತನಾಜೆ'–ಆಚರಣೆಯ ಒಟ್ಟೂ ಸ್ವರೂಪ

# ಅಧ್ಯಾಯ-೫
# ತುಳುನಾಡಿನ ವಾರ್ಷಿಕ ಆವರ್ತನದ ಆಚರಣೆ 'ಪತ್ತನಾಜೆ'

## ೫.೧: 'ಪತ್ತನಾಜೆ'-ಅರ್ಥ

'ಪತ್ತನಾಜೆ' ಎಂದರೆ 'ಬೇಶ' ತಿಂಗಳಲ್ಲಿ ಹತ್ತು ಹೋಗುವ ದಿನದಂದು ಆಚರಿಸುವ ಆಚರಣೆ. ಬೇಶ ತುಳುವರ ಎರಡನೆಯ ತಿಂಗಳು. ತುಳುವರ ಧಾರ್ಮಿಕ, ಸಾಮಾಜಿಕ, ಇಲ್ಲವೆ ಸಾಂಸ್ಕೃತಿಕವಾದ ಆ ವರ್ಷದ ಎಲ್ಲಾ ಕಾರ್ಯಕ್ರಮಗಳೂ 'ಪತ್ತನಾಜೆ'ಯಂದು ಮುಕ್ತಾಯವಾಗುತ್ತವೆ. ಮತ್ತೆ 'ಸೋಣ' ತಿಂಗಳ ನಂತರವೇ ಯಾವುದೇ ಕಾರ್ಯಕ್ರಮಗಳನ್ನು ಪ್ರಾರಂಭಿಸುವುದು ಪರಂಪರಾಗತವಾಗಿ ಬೆಳೆದು ಬಂದಿದೆ. ವಿಶೇಷವಾಗಿ ಭೂತಾರಾಧನೆ, ನಾಗಾರಾಧನೆಗಳಂತಹ ಧಾರ್ಮಿಕ ಕಾರ್ಯಕ್ರಮಗಳು, ಯಕ್ಷಗಾನ ಬಯಲಾಟದಂತಹ ಸಾಂಸ್ಕೃತಿಕ ಕಲಾಪಗಳು, ಮದುವೆ-ಮುಂಜಿ, ಮನೆಒಕ್ಕಲು ಮುಂತಾದ ಸಾಮಾಜಿಕ ಉತ್ಸವಾಚರಣೆಗಳು 'ಪತ್ತನಾಜೆ'ಯಂದು ಮುಕ್ತಾಯವಾಗುತ್ತವೆ.

'ಪತ್ತನಾಜೆ' ಪದಕ್ಕೆ "ವೃಷಭ ಮಾಸದ ಹತ್ತನೆಯ ದಿನ; ಭೂತಾರಾಧನೆ, ಉತ್ಸವ, ಯಕ್ಷಗಾನ, ಮೊದಲಾದ ಧಾರ್ಮಿಕ, ಸಾಂಸ್ಕೃತಿಕ ಆಚರಣೆಗಳು ಮುಕ್ತಾಯವಾಗುವ ದಿನ. ಅನಂತರ ಮಳೆಗಾಲ ಪ್ರಾರಂಭವಾಗುವುದರಿಂದ ಈ ದಿನದ ಬಳಿಕ ಮಳೆಗಾಲ ಕೊನೆಯವರೆಗೆ ಇಂತಹ ಕಾರ್ಯಕ್ರಮಗಳು ನಡೆಯುವುದಿಲ್ಲ; The tenth day of the second solar month (The concluding day for all religious and cultural functions of the season like Bhuta worship, Yakshagana play etc."[೧] ಎಂಬ ವಿವರಣೆ ತುಳು ನಿಘಂಟಿನಲ್ಲಿರುವುದನ್ನು ಗಮನಿಸಬಹುದು.

## ೫.೨: 'ಪತ್ತನಾಜೆ'-ಆಚರಣೆಯ ವಿಧಾನ

'ಪತ್ತನಾಜೆ' ಹೆಸರೇ ಸೂಚಿಸುವಂತೆ 'ಬೇಶ' ತಿಂಗಳಲ್ಲಿ ಹತ್ತು ಹೋಗುವ ದಿನ. ಆ ತಿಂಗಳ ಹತ್ತನೇ ದಿನವನ್ನು 'ಪತ್ತನಾಜೆ' ಎಂದು ಕರೆಯುತ್ತಾರೆ. 'ಪತ್ತನಾಜೆ' ಎನ್ನುವುದು ತುಳುವರಿಗೆ ಕಾಲ ಬದಲಾವಣೆಯ, ಋತು ಪರಿವರ್ತನೆಯ ಒಂದು ನಿರ್ದಿಷ್ಟ ಗಡುವು ಆಗಿದೆ. ಕೌಟುಂಬಿಕವಾದ ಎಲ್ಲ ಧಾರ್ಮಿಕ, ಸಾಂಸ್ಕೃತಿಕ, ಸಾಮಾಜಿಕ ಕಾರ್ಯಕ್ರಮಗಳನ್ನು 'ಪತ್ತನಾಜೆ' ದಿನಕ್ಕೆ ಮುಕ್ತಾಯಗೊಳಿಸುವುದೇ ಒಂದು ಆಚರಣೆಯಾಗಿ ರೂಢಿಯಲ್ಲಿ ಬಂದಿರುವುದು ಕಂಡು

ಬರುತ್ತದೆ. ಈ ಮೇಲಿನ ಧಾರ್ಮಿಕ ಸಾಮಾಜಿಕ ಸಾಂಸ್ಕೃತಿಕ ಕಾರ್ಯಕ್ರಮಗಳಷ್ಟೇ ಅಲ್ಲ; ಹಟ್ಟಿಗೆ ತರಗೆಲೆ ಸಂಗ್ರಹಿಸುವುದು, ಒಲೆಗೆ ಕಟ್ಟಿಗೆ ಸಂಗ್ರಹಿಸುವುದು, 'ಏಣೇಲು' ಬೆಳೆಗೆ ನೇಜಿ ಹಾಕುವಂತಹುದು, ಗದ್ದೆ ಉಳುಮೆ ಮಾಡಿಡುವುದು, ಮರದಿಂದ ತೆಂಗಿನಕಾಯಿ ತೆಗೆಸಿಡುವುದು, ಕೊತ್ತಳಿಗೆಗಳನ್ನು ಸಂಗ್ರಹಿಸುವುದು ಮುಂತಾದ ಅಗತ್ಯದ ಕೆಲಸಗಳನ್ನು 'ಪತ್ತನಾಜೆ'ಯ ಗಡುವಿನೊಳಗೆ ಮುಗಿಸುತ್ತಾರೆ. ಇವುಗಳ ಜೊತೆಗೆ ದೊಡ್ಡ ದೊಡ್ಡ ದೈವಗಳಿಗೆ 'ಕಾಲಾವಧಿ ಅಗೆಲು' ಬಡಿಸುವುದು, 'ಕೋಲ' ಕೊಡುವುದು, ನಾಗನಿಗೆ 'ತಂಬಿಲ', 'ಪರ್ವ' ಮಾಡುವುದು ಮುಂತಾದವುಗಳನ್ನು 'ಪತ್ತನಾಜೆ'ಯೊಳಗೆ ಮಾಡಿ ಮುಗಿಸಬೇಕು. ಒಂದು ವೇಳೆ 'ಪತ್ತನಾಜೆ'ಗೆ ಮೊದಲು ಸಾಧ್ಯವಾಗಿಲ್ಲ ಎಂದಾದಲ್ಲಿ 'ಪತ್ತನಾಜೆ' ಕೊನೆಯ ಗಡುವು ಆಗಿರುತ್ತದೆ. ಆ ದಿನ ಉಳಿದ ಹಬ್ಬಗಳಂತೆ ಮನೆಯ ಹೆಂಗಸರು ಮನೆಯನ್ನು ಸೆಗಣಿ ಸಾರಿಸಿ ಪರಿಶುದ್ಧಗೊಳಿಸುತ್ತಾರೆ. ಕೆಲವರು ಮನೆಯಲ್ಲಿ ಆರಾಧಿಸುವ/ನಂಬುವ ಎಲ್ಲ ಭೂತಗಳಿಗೆ ಆ ದಿನ 'ಕಾಲದಿ'(ಕಾಲಾವಧಿ) ಉತ್ಸವ ಮಾಡುತ್ತಾರೆ. ಹಾಗಾಗಿ 'ದೈವಸ್ಥಾನ', 'ಚಾವಡಿ' ಶುದ್ಧ ಮಾಡುತ್ತಾರೆ. 'ಮಣೆಮಂಚ'ವನ್ನು ಗುಡಿಸುತ್ತಾರೆ. 'ಮುದ್ರೆ' ಚಿಮುಕಿಸುತ್ತಾರೆ. ಹೋಮ ಮಾಡುತ್ತಾರೆ. ಭೂತಗಳಿಗೆ, ನಾಗನಿಗೆ 'ಅಗೆಲು', 'ತಂಬಿಲ' ಇತ್ಯಾದಿಗಳನ್ನು ಕೊಡುತ್ತಾರೆ. 'ಪರ್ವ'ವನ್ನು ಮಾಡುತ್ತಾರೆ. ನೆರೆ ಹೊರೆಯವರನ್ನು, ಬಂಧು-ಬಳಗವನ್ನು ಆಹ್ವಾನಿಸುತ್ತಾರೆ. ತಾಯಿ ಕುಟುಂಬದ 'ಕಾಲಾವಧಿ'ಯ 'ತಂಬಿಲ'ಕ್ಕೆ ಕುಟುಂಬದ ದೂರ ದೂರದಲ್ಲಿದ್ದ ಪೀಳಿಗೆಯವರು ಎಲ್ಲರೂ ಆ ದಿನ ತವರು ಮನೆಯಲ್ಲಿ ಸೇರುತ್ತಾರೆ. ಹಿಂಗಾರದ ಚೂರು ಕೈಯಲ್ಲಿ ಹಿಡಿದುಕೊಂಡು ಮಣೆಮಂಚದ ಎದುರು ನಿಲ್ಲುತ್ತಾರೆ. ಮನೆಯ ಯಜಮಾನ ಇಲ್ಲವೆ ಸೇರಿದವರಲ್ಲಿ ತಿಳಿದವರೊಬ್ಬರು ಹೀಗೆ 'ನುಡಿಕಟ್ಟ್' (ಪ್ರಾರ್ಥನೆ) ಸಲ್ಲಿಸುತ್ತಾರೆ.

"ಸ್ವಾಮೀ ದೈವಗಳೇ, ಯಾವ ಕಾಲದಲ್ಲಿ ತುಳುನಾಡಿನ ಈ ಪಂಚವರ್ಣದ ನಾಗನಡೆಯ ಪುಣ್ಯಭೂಮಿಯಲ್ಲಿ ನೀವು ನೆಲೆಯಾಗಿದ್ದೀರಿ ಎಂದು ನಮಗೆ ತಿಳಿಯದು. ನಮ್ಮ ಹಿರಿಯರು ನಂಬಿಕೊಂಡು ಬಂದಂತೆ ನಾವೂ ನಡೆದುಕೊಂಡು ಬಂದಿದ್ದೇವೆ. ಅದರಂತೆ ಇವತ್ತು ನಿಮಗೆ 'ಕಾಲಾವಧಿ'ಯ 'ಭೋಗ-ತಂಬಿಲ' ಕೊಡುತ್ತಿದ್ದೇವೆ. ನಾಲ್ಕು ದಿನ ಬೇಗ ಕೊಡಬೇಕಿತ್ತು. ನಾಲ್ಕು ದಿನ ತಡವಾಗಿ ಹೋಯಿತು. ಸ್ವಾಮೀ ದೈವಗಳೇ, ಈ ದಿನ ನಿಮ್ಮ ಸ್ಥಾನ ಚಾವಡಿಯ ಬಾಗಿಲಲ್ಲಿ ಗುಡಿಸಿರುವ ಕಸದಲ್ಲಿ, ಸಾರಿಸಿದ ಸೆಗಣಿಯಲ್ಲಿ, ಮಾಡಿದ ಶುದ್ಧದಲ್ಲಿ, ಉರಿಸಿದ ನಂದಾದೀಪದಲ್ಲಿ, ಏರಿಸಿದ ಮೊಗಮೂರ್ತಿಯಲ್ಲಿ, ಇಟ್ಟ ಸ್ವಸ್ತಿಕದಲ್ಲಿ, ಮಾಡಿದ ಅಲಂಕಾರದಲ್ಲಿ, ಬಡಿಸಿದ 'ಅಗೆಲ'ಲ್ಲಿ, 'ಮುದ್ರೆ'ಯಲ್ಲಿ, ಹೋಮದಲ್ಲಿ, ತೂತು

ಮಾಡಿದ ಎಳನೀರಲ್ಲಿ, ಪರವೂರಿನ 'ಪೂಜಾರಿ'ಯನ್ನು ತಂದು ನಿಲ್ಲಿಸಿದ ದರ್ಶನದಲ್ಲಿ, ಕೊಟ್ಟ ಮಾತಿನಲ್ಲಿ, ಕತ್ತರಿಸಿದ ಕೋಳಿಯಲ್ಲಿ ಅನೇಕ ತರದ ತಪ್ಪುಗಳಾಗಿರಬಹುದು. ಸ್ವಾಮೀ ದೈವಗಳೇ, ಒಂದು ವೇಳೆ ವಿಷಘಳಿಗೆ ಇದ್ದರೂ ಅಮೃತವನ್ನಾಗಿ ಮಾಡಿ, ನಿಮ್ಮನ್ನು ಸೃಷ್ಟಿಮಾಡಿದ ದೇವರ ಪಾದ ಹಿಡಿದುಕೊಳ್ಳಿ; ಗ್ರಾಮದೇವರನ್ನು ನೆನಪಿಸಿಕೊಳ್ಳಿ. ಭೂಮಿಯ ಒಡೆಯನಾಗಿರುವ ನಾಗದೇವರಿಗೆ ಸಂಧಿ ಹೇಳಿ. ವಿಷಘಳಿಗೆಯನ್ನು ಗರುಡನ ಬಾಯಿಗೆ ಹಾಕಿಸಿಕೊಂಡು, ಅಮೃತಘಳಿಗೆ ಮಾಡಿಕೊಂಡು ಕೊಟ್ಟಂತಹ 'ಭೋಗ-ತಂಬಿಲ'ವನ್ನು ಸಂತೋಷದಲ್ಲಿ ಸ್ವೀಕಾರ ಮಾಡಿಕೊಳ್ಳಿ. ನಂಬಿದ ಸಂಸಾರದ ಹೆಣ್ಣು ಕೊಟ್ಟಲ್ಲಿಗಾಗಲಿ, ಹೆಣ್ಣು ತಂದಲ್ಲಿಗಾಗಲಿ ಏನೂ ತೊಂದರೆಯಿಲ್ಲದೆ ಕಾಪಾಡಿ. ಹೊಟ್ಟೆಪಾಡಿಗಾಗಿ ಪರವೂರಿಗೆ ಹೋದ ಮಕ್ಕಳ ಹಣೆಗೆ ಒಂದುಚೂರೂ ತೊಂದರೆಯಾಗದಂತೆ ಕಾಪಾಡಿಕೊಂಡು ಬನ್ನಿ ಎಂದು ಹತ್ತು ಮಂದಿ ಸೇರಿಕೊಂಡು ಬೇಡುತ್ತಿದ್ದೇವೆ."

ಹೀಗೆ ದೈವಗಳಿಗೆ ಸಂತೋಷವಾದರೆ ಮನುಷ್ಯರಿಗೂ ಸಂತೋಷ. ದೈವ 'ತಂಬಿಲ'ದ ಕೋಳಿ ಪದಾರ್ಥದ ಪರಿಮಳವೇ ವಿಶಿಷ್ಟವಾದುದು ಎನ್ನುತ್ತಾರೆ. ಕುಟುಂಬದಲ್ಲಿ ಹಿಂದೆ ಗತಿಸಿಹೋದ ಪಿತೃಗಳ ಆರಾಧನೆಯೂ ಈದಿನ ನಡೆಯುತ್ತದೆ. ಭೂತದ ಗುಡಿಗಳಲ್ಲಿ 'ತಂಬಿಲ', 'ಕೋಲ'ಗಳು ನಡೆದ ಬಳಿಕ ಅವುಗಳ ಬಾಗಿಲು ಮುಚ್ಚುತ್ತಾರೆ. ಊರಿನ ದೇವಾಲಯಗಳಲ್ಲೂ 'ಪತ್ತನಾಜೆ'ಯ ದಿನ ವಿಶೇಷ ಪೂಜೆ ಇತ್ಯಾದಿ ನಡೆಯುತ್ತದೆ. 'ಪತ್ತನಾಜೆ'ಯಂದು ಹಲಸಿನಕಾಯಿಯ ಪಲ್ಯವನ್ನು ವಿಶೇಷ ಪದಾರ್ಥವನ್ನಾಗಿ ಮಾಡುತ್ತಾರೆ. ಹಲಸಿನಹಣ್ಣಿನ 'ಗಟ್ಟಿ' ಮಾಡಿ ಪಿತೃಗಳಿಗೆ ಬಡಿಸುತ್ತಾರೆ. ಭೂತಗಳಿಗೆ ಬಡಿಸಲು ತಯಾರಿಸಿದ ಕೋಳಿ ಇಲ್ಲವೇ ಯಾವುದೇ ಪದಾರ್ಥವನ್ನು ರಾತ್ರಿ ಊಟಕ್ಕೆ ಬಳಸುತ್ತಾರೆ. 'ಪತ್ತನಾಜೆ'ಯ ಗಡುವಿನೊಳಗಾಗಿ ಭೂಮಿಯನ್ನು ಉತ್ತು ಹಸನುಗೊಳಿಸಿ ಮುಂದೆ ನೇಜಿ ನಾಟಿಗಾಗಿ ಸಿದ್ಧಗೊಳಿಸಿರಬೇಕು. ಅಂತೆಯೇ ಆ ದಿನ ಆ ವರ್ಷದ ಕೊನೆಯ ಯಕ್ಷಗಾನ ಬಯಲಾಟ ನಡೆಯುತ್ತದೆ. ಕಾಲಿಗೆ ಕಟ್ಟಿದ ಗೆಜ್ಜೆ ಆ ದಿನ ಬಯಲಾಟ ಆಡಿ ಬಿಚ್ಚಿಸುತ್ತಾರೆ. 'ಪತ್ತನಾಜೆ ಬತ್ತ್‌ಂಡ್, ಜತ್ತಿ ಆಟೊ ಉಂತ್‌ಡ್'(ಪತ್ತನಾಜೆ ಬಂತು, ಹೊರಟ ಆಟ ನಿಂತಿತು) ಎಂಬ ಗಾದೆಯೇ ಇದೆ. (ಭೂತಾರಾಧನೆಗೆ ಸಂಬಂಧಿಸಿದಂತೆ ಅನುಬಂಧ ಪುಟ-II ರಲ್ಲಿನ ಚಿತ್ರ-೧.೨.೧ ರಿಂದ ೧.೨.೫ ಇವುಗಳನ್ನು ಗಮನಿಸಬಹುದು.)

## ೫.೩: 'ಪತ್ತನಾಜೆ' ಆಚರಣೆ–ವಿಶ್ಲೇಷಣೆ

'ಪತ್ತನಾಜೆ' ಆಚರಣೆ ಕೇವಲ ಒಂದು ಆಚರಣೆಯಲ್ಲ. 'ಪತ್ತನಾಜೆ' ಒಂದು ವರ್ಷದ ಆವರ್ತನದ ಗಡುವು ಆಗಿರುವುದನ್ನು ವಿಶೇಷವಾಗಿ ಗಮನಿಸಬೇಕು. ಅಂದರೆ ತುಳುವರಿಗೆ ಕಾಲ ಬದಲಾವಣೆಯ ಋತುಪರಿವರ್ತನೆಯ ಒಂದು ನಿರ್ದಿಷ್ಟ ಗಡು 'ಪತ್ತನಾಜೆ' ಆಗಿದೆ. ಆದುದರಿಂದ ಆ ದಿನ ಭತ್ತ ಬೇಸಾಯವನ್ನು ಅವಲಂಬಿಸಿರುವ ಹಲವು ಆಚರಣೆ ಆರಾಧನೆಗಳು ನಡೆಯುತ್ತವೆ. ಇದಕ್ಕೆ ಕಾರಣವೇನೆಂದರೆ–

ಮೊದಲನೆಯದಾಗಿ 'ಪತ್ತನಾಜೆ' ಮಳೆಗಾಲ ಆರಂಭಕ್ಕೆ ಮೂಹೂರ್ತ ದಿನವೆಂದು ಜನರು ನಂಬಿದ್ದಾರೆ. 'ಪತ್ತನಾಜೆಗ್ ಪತ್ತ್ ಪನಿ ಬರ್ಸಾಂಡಲಾ ಬರೊಡು' ('ಪತ್ತನಾಜೆ'ಗೆ ಹತ್ತು ಹನಿ ಮಳೆಯಾದರೂ ಸುರಿಯಬೇಕು) ಎಂಬ ಗಾದೆಯೇ ಇದೆ. 'ಪತ್ತನಾಜೆ' ಮಳೆಗಾಲ ಆರಂಭವಾಗುವ ಸಂಕ್ರಮಣ ಕಾಲ ಘಟ್ಟವಾದ್ದರಿಂದಲೇ ಆ ದಿನದಂದು ಎಲ್ಲ ಕಾರ್ಯಕ್ರಮಗಳನ್ನು, ದೈವ–ದೇವರುಗಳಿಗೆ 'ತಂಬಿಲ', 'ಪರ್ವ', 'ಕೋಲ'ಗಳನ್ನು ನಡೆಸುವುದು ಈ ಆಚರಣೆಯ ವಿಶೇಷ ವಿಧಿಯಾಗಿದೆ. ಆ ವರ್ಷದ ಬೇಸಾಯಕ್ಕೆ ವರ್ಷಾರಂಭ ದಿನವಾದ 'ಬಿಸು' ಆಚರಣೆಯ ಮೂಲಕ ನಾಂದಿ ಹಾಡಿರುತ್ತಾರೆ ಎಂಬುದನ್ನು ಈಗಾಗಲೇ ಗಮನಿಸಿದ್ದೇವೆ. ಆದರೂ 'ಪತ್ತನಾಜೆ'ಯ ನಂತರ ಮಳೆಗಾಲ ಅಧಿಕೃತವಾಗಿ ಶುರುವಾಗುತ್ತದೆಯಾದ್ದರಿಂದ ಆ ದಿನ ದೈವ–ದೇವರುಗಳಿಗೆ ಕೊಡಬೇಕಾದ ಸೇವೆಗಳನ್ನೆಲ್ಲ ಮಾಡಿ ಮುಗಿಸಿ ಅವರಿಂದ ಅಭಯವನ್ನು ಪಡೆಯುವುದು, 'ಪತ್ತನಾಜೆ' ಗಡುವಿನಂದು ನಡೆಸುವ ಎಲ್ಲ ಆಚರಣೆಗಳ ಉದ್ದೇಶವಾಗಿ ಕಂಡು ಬರುತ್ತದೆ. ಅಂದರೆ ತುಳುವರಿಗೆ ಮೊದಲಿನಿಂದಲೂ ಭೂತಗಳಲ್ಲಿ ವಿಶೇಷ ಭಯ ಭಕ್ತಿ ಕಂಡುಬರುತ್ತದೆ. 'ದೇವೆರೆಡ ಬಗ್ತಿದಾಂತಿನಾಯೆಲಾ ಭೂತೊಲೆಗ್ ಪೋಡ್ಯುವೆ'(ದೇವರಲ್ಲಿ ಭಕ್ತಿ ಇಲ್ಲದವನೂ ಭೂತಗಳಿಗೆ ಹೆದರುತ್ತಾನೆ), 'ಅಗೆಲ್ ಪಾಡಿಬುಕ್ಕೊ ಬಗಲೆ ತತ್ತ್ಂಡ್'(ಅಗೆಲು ಹಾಕಿದ ಮೇಲೆ ರಗಳೆ ತಪ್ಪಿತು) ಮೊದಲಾದ ಗಾದೆಗಳೇ ಹುಟ್ಟಿಕೊಂಡಿವೆ.

ಎರಡನೆಯದಾಗಿ ತುಳುನಾಡಿನಲ್ಲಿ ಮಳೆಗಾಲ ಪ್ರಾರಂಭವಾದರೆ ಮನೆಯಿಂದ ಹೊರಗೆ ಬರಲು ಸಾಧ್ಯವಿಲ್ಲ ಎನ್ನುವ ರೀತಿಯ ವಿಪರೀತ ಮಳೆಯಾಗುವುದು ಇಲ್ಲಿನ ನಿಸರ್ಗ ನಿಯಮ. ಇಂತಹ ಮಳೆಗಾಲದಲ್ಲಿ ಯಾವುದೇ ಕಾರ್ಯಕ್ರಮಗಳನ್ನು ಮಾಡುವುದೂ ಸಾಧ್ಯವಿಲ್ಲ ಎಂಬ ಕಾರಣದಿಂದ ಬೇಸಿಗೆಯ ಅಂತ್ಯದ ಗಡುವಾದ 'ಪತ್ತನಾಜೆ' ಆಚರಣೆಯಾಗುತ್ತದೆ.

ಮೂರನೆಯದಾಗಿ ಹಿಂದಿನಕಾಲದಲ್ಲಿ ಜನ ಬಡತನದಲ್ಲಿದ್ದರು. ಅದರಲ್ಲೂ ಮಳೆಗಾಲದಲ್ಲಂತೂ ಹೊಟ್ಟೆಗಿಲ್ಲದೆ ಉಪವಾಸ ಬೀಳುತ್ತಿದ್ದರಂತೆ. ಹಾಗಾಗಿ ಮಳೆಗಾಲದಲ್ಲಿ ಯಾವುದೇ ಕಾರ್ಯಕ್ರಮ ಮಾಡಲು ಸಾಧ್ಯವಾಗುತ್ತಿರಲಿಲ್ಲ. ಇದಕ್ಕಾಗಿ 'ಪತ್ತನಾಜೆ'ಯೊಳಗೆ ಎಲ್ಲ ಕಾರ್ಯಕ್ರಮಗಳನ್ನು ಮಾಡಿ ಮುಗಿಸುವ ಕ್ರಮ ಆಚರಣೆಯಲ್ಲಿ ಬಂದಿರಬೇಕು.

"ತುಳುನಾಡಿನಲ್ಲಿ ವರ್ಷದ ಆರಂಭ ಪಗ್ಗು ತಿಂಗಳಿನಿಂದ ಆದರೂ ಮಳೆಗಾಲ ಪ್ರಾರಂಭವಾಗುವುದು ಬೇಸ್ಯ ತಿಂಗಳ ಹತ್ತನೇ ದಿನದಿಂದ. ಈ ದಿನವನ್ನು ಪತ್ತನಾಜೆ ಎನ್ನುತ್ತಾರೆ"[೨] ಎಂದು ತುಳು ಜಾನಪದ ವಿದ್ವಾಂಸರು ಹೇಳುತ್ತಾರೆ. ಈ ಮಾತಿನ ಹಿನ್ನೆಲೆಯಲ್ಲಿ ನೋಡಿದಾಗ 'ಪತ್ತನಾಜೆ'ಯನ್ನು ಬೇಸಿಗೆಯ ಮತ್ತು ಮಳೆಗಾಲದ ಸಂಧಿಕಾಲದ ದಿನವೆಂದು ಗುರುತಿಸಲಾಗಿದೆ. ಅಂದರೆ ತುಳುವರಿಗೆ ವರ್ಷದಲ್ಲಿ ಎರಡೇ ಕಾಲ; ಮರ್ಯಾಲ ಮತ್ತು ಅರೆಗಾಲ. (ಮಳೆಗಾಲ ಮತ್ತು ಬೇಸಿಗೆಕಾಲ) 'ಪತ್ತನಾಜೆ' ಆಚರಣೆಯ ಆ ಸಮಯದಲ್ಲಿ ತುಳುನಾಡಿನಲ್ಲಿ ಧಾರಾಳವಾಗಿ ಹಲಸಿನಹಣ್ಣು ಸಿಗುತ್ತದೆ. ಹಾಗಾಗಿ ಆ ದಿನ ಹಲಸಿನಕಾಯಿಯ ಪಲ್ಯ, ಹಲಸಿನ ಹಣ್ಣಿನ ಗಟ್ಟಿ, ಹಲಸಿನಹಣ್ಣಿನ ಪಾಯಸ, ಹಲಸಿನಹಣ್ಣಿನ ಚಂಗುಳಿ ಇತ್ಯಾದಿಯನ್ನು ಮಾಡಿ ದೈವ ದೇವರಿಗೆ, ಪಿತೃಗಳಿಗೆ ಬಡಿಸುತ್ತಾರೆ. ಹಿಂದಿನ ಕಾಲದಲ್ಲಿ ಬಡತನ ಇತ್ತೆಂಬ ಕಾರಣಕ್ಕೆ ಮತ್ತು ಪ್ರಕೃತಿಯಲ್ಲಿ ಹಲಸು ಧಾರಾಳ ದೊರೆಯುತ್ತಿತ್ತು ಎಂಬ ಕಾರಣಕ್ಕೆ ಇದರ ಬಳಕೆ ಆಚರಣೆಯಲ್ಲಿ ಬಂದಿರುವುದು ವೇದ್ಯವಾಗುತ್ತದೆ. ಮಾತ್ರವಲ್ಲ, ಹಲಸಿನ ಕಾಯಿಯ ಪಲ್ಯ ಮಾಡಿ ಸೇವಿಸುವುದರಿಂದ ಮೈಯಲ್ಲಿ ಬೀಳುವ ಕಜ್ಜಿ ಮೊದಲಾದ ನಂಜಿರೋಗಗಳ ನಿವಾರಣೆಯಾಗುತ್ತವೆ; ಮತ್ತು ಇದರಲ್ಲಿ ಆರೋಗ್ಯವನ್ನು ವೃದ್ಧಿಗೊಳಿಸುವ ಪೌಷ್ಟಿಕಾಂಶಗಳಿರುತ್ತವೆ ಎಂದು ಹೇಳಲಾಗುತ್ತದೆ. ಈ ಅಭಿಪ್ರಾಯವನ್ನು 'ಗುಜ್ಜೆ ತಿಂದ್'ಂಡ ಗಜ್ಜಿ ಬೂರುಜಿ' (ಹಲಸಿನ ಮಿಡಿ ತಿಂದರೆ ಕಜ್ಜಿ ಬೀಳುವುದಿಲ್ಲ), 'ಗುಜ್ಜೆದ ಕಜಿಪುನು ಸಜ್ಜಿಡ್ ತಿಂದೆ' (ಹಲಸಿನ ಮಿಡಿಯ ಪದಾರ್ಥವನ್ನು ಸರೀ ತಿಂದೆ) ಮೊದಲಾದ ಗಾದೆ ನುಡಿಗಳು ಸಮರ್ಥಿಸುತ್ತವೆ. "ಆ ದಿನ ದೈವ ದೇವರಲ್ಲಿ ಪಿತೃಗಳಿಗೆ ಭಕ್ತಿಯಿಂದ ಕೊಡುವುದನ್ನು ಕೊಟ್ಟು ಮಳೆಗಾಲವನ್ನು ಚೆನ್ನಾಗಿ ನಡೆಸಿಕೊಡಿ ಎಂದು ಬೇಡುವ ಕ್ರಮವಿದೆ ಮತ್ತು ಈ ಆಚರಣೆಯಲ್ಲಿ ತುಳುವರ ಸಂಗ್ರಹ ಪ್ರವೃತ್ತಿ ಮತ್ತು ಮುಂದಾಲೋಚನೆಯು ಕಂಡು ಬರುತ್ತದೆ"[೩] ಎಂಬ ಮಾತು 'ಪತ್ತನಾಜೆ'ಯ ಆಶಯವನ್ನು ಹೇಳುತ್ತದೆ. ಸಕಾಲಿಕ ಮಳೆ ಮತ್ತು ಸಮೃದ್ಧ ಬೆಳೆಯನ್ನು ಅನುಗ್ರಹಿಸುವಂತೆ ನಂಬಿದ ಶಕ್ತಿಗಳನ್ನು ಬೇಡಿಕೊಳ್ಳುವ ಆಶಯ ಇಲ್ಲಿದೆ.

ತುಳುವರು ಅನಾದಿ ಕಾಲದಿಂದಲೂ ದೈವಗಳನ್ನು ನಂಬಿಕೊಂಡು ಬಂದವರು. ದೈವಗಳಲ್ಲಿ ಕೆಲವು ಈಶ್ವರ ದೇವರ ಗಣಗಳೆಂದು ಹೇಳುತ್ತಾರೆ. ಕೆಲವು ಪ್ರಾಣಿ ಜಾತಿಯವು. ತುಳು ಭೂಮಿಯಲ್ಲಿ ಹುಟ್ಟಿ ಬಂದು ಸತ್ಯ-ಧರ್ಮವನ್ನು ಕಾಯ್ದುಕೊಂಡು, ದುಷ್ಟಶಕ್ತಿಗಳನ್ನು, ಅರಸರನ್ನು ಎದುರುಹಾಕಿಕೊಂಡು ಕೊನೆಗೊಂದು ದಿನ ಜೀವ ಬಿಟ್ಟು ದೈವಗಳಾದವು ಕೆಲವು. ಕಲ್ಕುಡ, ಪಂಜುರ್ಲಿ, ವರ್ತೆಪಂಜುರ್ಲಿ, ಜುಮಾದಿ, ಬಬ್ಬರ್ಯೆ, ಮೈಸಂದಾಯೆ, ಕೊಡಮಂದಾಯೆ, ಚಾಮುಂಡಿ, ರಕ್ತೇಶ್ವರಿ, ಪಿಲಿಚಾಮುಂಡಿ, ಗುಳಿಗ-ಹೀಗೆ ದೈವಗಳ ಪಟ್ಟಿ ಬೆಳೆಯುತ್ತದೆ. 'ಕಾರ್ತೆಲ್' ತಿಂಗಳ ('ಏಣೇಲು') ಬೇಸಾಯಕ್ಕೆ ಎತ್ತು-ನೊಗ-ನೇಗಿಲು ಗದ್ದೆಗೆ ಇಳಿಯಬೇಕಾದರೆ ನಂಬುವ ಮಣೆಮಂಚದ ದೈವಗಳಿಗೆ ಭೋಗ ತಂಬಿಲ ಕೊಟ್ಟು ಅವರ ಅಪ್ಪಣೆ ಪಡೆಯಬೇಕು. ಹೆಚ್ಚಿನ ದೈವಗಳು ರಕ್ತಾಹಾರದವು. ಹಾಗಾಗಿ 'ಪತ್ತನಾಜೆ'ಯ ನಂತರ ದೈವಗಳಿಗೆ 'ಅಗೆಲು', 'ತಂಬಿಲ', 'ಕೋಲ' ಇತ್ಯಾದಿ ನಡೆಸುವಂತಿಲ್ಲ ಎಂಬ ನಂಬಿಕೆ ತುಳುನಾಡಿನವರದು. ಈ ನಂಬಿಕೆ ತುಳುನಾಡಿನ ದಕ್ಷಿಣ ಭಾಗದಲ್ಲಿ ಹೆಚ್ಚಾಗಿದ್ದು, ಉತ್ತರ ಭಾಗದಲ್ಲಿ ಅಷ್ಟಾಗಿ ಕಂಡುಬರುವುದಿಲ್ಲ.

ಬನ್ನಂಜೆ ಬಾಬು ಅಮೀನ್ ಅವರು 'ಪತ್ತನಾಜೆ'ಗೂ 'ಕೃಷ್ಣಾಷ್ಟಮಿ'ಗೂ ನಿಕಟ ಸಂಬಂಧವಿದೆ ಎಂದು ಹೇಳುವ ಐತಿಹ್ಯವೊಂದು ಹೀಗಿದೆ- "ಮಳೆಗಾಲದಲ್ಲಿ ಅಷ್ಟಮಿಯ ಸಮಯ ತುಳು ನೆಲದ ಒಬ್ಬ ಬಡಪಾಯಿ ತನ್ನ ಮನೆಯಲ್ಲಿ ಹಬ್ಬ ಮಾಡಲು ಒಂದು ಹಿಡಿ ಅಕ್ಕಿ ಕಾಳು ಕೂಡಾ ಇಲ್ಲದಿರುವುದರಿಂದ ತುಂಬ ನೊಂದುಕೊಂಡಳು. ಆದರೂ ಮಕ್ಕಳಿರುವ ಮನೆಯಲ್ಲಿ ಅಡ್ಡೆ (ಅಕ್ಕಿಯಿಂದ ಮಾಡುವ ತಿಂಡಿ) ಮಾಡಿ ಹಬ್ಬ ಆಚರಿಸಬೇಕೆಂಬ ಧಾರ್ಮಿಕ ಆಸ್ಥೆ ಮಾತ್ರ ಅವಳಲ್ಲಿ ವಿಶೇಷವಾಗಿತ್ತು. ಹಾಗಾಗಿ ಅವಳು ತನ್ನ 'ಕಡೀರ ಮಗನ್' (ಹಿರಿಯ ಮಗನನ್ನು) ಹೆರವರಲ್ಲಿ ಅಡವಿಟ್ಟು ಅರ್ಧ ಸೇರು ಅಕ್ಕಿ ಸಾಲ ತಂದು ಹಬ್ಬ ಮಾಡಿದಳು. ಆದರೆ ಅರ್ಧ ಸೇರಕ್ಕಿಗೆ ಒತ್ತೆ ಇರಿಸಿದ ಮಗನನ್ನು ಬಿಡಿಸಿ ತರಬೇಕಲ್ಲ. ಆ ಕಷ್ಟ ಕಾಲದಲ್ಲಿ ಅಷ್ಟಕ್ಕೂ ಅನುಕೂಲವಿಲ್ಲದೆ ಆ ಬಡಪಾಯಿ ಕೊನೆಗೆ 'ಮಾಯಿ' ತಿಂಗಳಲ್ಲಿ ಹತ್ತು ಹೋಗುವಾಗ ಸಾಲ ತೀರಿಸಿ ಒತ್ತೆ ಇರಿಸಿದ್ದ ಮಗನನ್ನು ಬಿಡಿಸಿ ತಂದಳಂತೆ. ಇಷ್ಟು ದೀರ್ಘ ಕಾಲ ಕಂದನನ್ನು ದೂರವಿರಿಸಿದ ಹೆತ್ತೊಡಲ ವೇದನೆ ಎಷ್ಟಿರಬೇಡ? ಅದಕ್ಕಾಗಿ ಪ್ರೀತಿಯ ಕಂದನಿಗೆ 'ಪತ್ತ' (ತುಳುವರು ಅಕ್ಕಿಯಿಂದ ಮಾಡುವ ಒಂದು ವಿಧದ ತಿಂಡಿ) ಕಾಯಿಸಿ ಆ ಸಿಹಿ ಕಡುಬನ್ನು ತಿನ್ನಲಿಟ್ಟು ಸತ್ಕರಿಸಿದಳಂತೆ. ಆದುದರಿಂದ ಮಾಯಿ ತಿಂಗಳ ಹತ್ತು ಹೋಗುವ ದಿನಕ್ಕೆ ತುಳುನಾಡಿನ ಕೆಲವೆಡೆ ಪತ್ತನಾಜೆ ಎಂದೇ ಕರೆಯುವರು. ಈಗಲೂ ಆ ದಿನ 'ಪತ್ತ' ಕಾಯಿಸಿ

ಹಿರೇ ಮಗನಿಗೆ ಮೊದಲು ತಿನ್ನಿಸುವ ರೂಢಿ ನಡೆದುಬಂದಿದೆ. ಆದರೆ ತೆಂಕಲಾಗೆ (ದಕ್ಷಿಣಕ್ಕೆ) ಅಂದರೆ ಮಂಗಳೂರು, ಪುತ್ತೂರು ಪ್ರದೇಶಗಳಲ್ಲಿ ಬೇಷ ತಿಂಗಳಲ್ಲಿ ಹತ್ತು ಹೋಗುವಾಗ ಪತ್ತನಾಜೆ ಆಚರಿಸುವರು. ಆ ಬಳಿಕ ಹಬ್ಬ ಆಚರಣೆಯಿಲ್ಲ. ದೈವಗಳಿಗೆ ಭೋಗ ತಂಬಿಲವನ್ನು ಆ ದಿನದ ಮೊದಲೇ ನಡೆಸುವರು".[೪]

ಮೇಲಿನ ವಿವರಗಳಿಂದ 'ಪತ್ತನಾಜೆ'ಯ ಪದನಿಷ್ಪತ್ತಿಯ ಬಗೆಗಿನ ಕಥೆ ಮತ್ತು 'ಪತ್ತನಾಜೆ'ಯನ್ನು 'ಮಾಯಿ' ಹತ್ತರಂದು ಆಚರಿಸುವ ದಿನ ವ್ಯತ್ಯಾಸದ ಭಿನ್ನ ಮಾಹಿತಿ ದೊರೆಯುತ್ತದೆ. ಉಳಿದಂತೆ ವಿವರಗಳು ಸಾಮ್ಯವಿದ್ದರೂ ಈ ಭಿನ್ನ ಮಾಹಿತಿಯನ್ನು ಪ್ರಾದೇಶಿಕ ವ್ಯತ್ಯಾಸದ ನೆಲೆಯಿಂದ ಗಮನಿಸಬೇಕಾಗುತ್ತದೆ. ಯಾಕೆಂದರೆ ಒಂದು ತುಳು ಗಾದೆ 'ಮಾಯಿಡ್ದ್ ಬುಕ್ಕೊ ಮರ್ಯಾಲ; ಆಟಿಡ್ದ್ ಬುಕ್ಕೊ ಅರೆಗಾಲ'(ಮಾಯಿ ತಿಂಗಳಿಂದ ಮಳೆಗಾಲ ಆಟಿ ತಿಂಗಳಿಂದ ಬೇಸಿಗೆಕಾಲ) ಎಂದು ಹೇಳಿದರೆ ಮತ್ತೊಂದು ಗಾದೆ 'ಬೇಶಡ್ದ್ ಬುಕ್ಕೊ ಮರ್ಯಾಲ' (ಬೇಶ ತಿಂಗಳಿಂದ ಮಳೆಗಾಲ) ಎಂದು ಹೇಳುತ್ತದೆ. ಇಲ್ಲಿಯೂ ಪ್ರಾದೇಶಿಕವಾದ ವ್ಯತ್ಯಾಸದಿಂದ ಮಳೆ ಪ್ರಾರಂಭವಾಗುವ ಕಾಲದ ನೆಲೆಯಲ್ಲಿ ಗಾದೆಯು ಹುಟ್ಟಿಕೊಂಡಿರಬಹುದಾದ ಸಾಧ್ಯತೆಯಿರುವುದು ಸ್ಪಷ್ಟವಾಗುತ್ತದೆ.

ಆದರೆ 'ಪತ್ತನಾಜೆ' ಎಂಬುದು 'ಬೇಶ' ತಿಂಗಳ ಹತ್ತನೇ ದಿನ ಎಂಬ ಅರ್ಥದ ಹಿನ್ನೆಲೆಯಲ್ಲಿಯೇ ಹುಟ್ಟಿಕೊಂಡಿರುವ ಸಾಧ್ಯತೆಯಿದೆ.

ಈ ಹಿನ್ನೆಲೆಯಲ್ಲಿ 'ಪತ್ತನಾಜೆ' ಕಾಲಪರಿವರ್ತನೆಯನ್ನು ಸೂಚಿಸುವ ಮೂಲಕ ತುಳುನಾಡಿನ ವಾರ್ಷಿಕ ಆವರ್ತನದ ಎಲ್ಲ ಚಟುವಟಿಕೆಗಳನ್ನು ವ್ಯವಸ್ಥಿತವಾಗಿ ಮುಂದುವರಿಸಿಕೊಂಡು ಹೋಗಲು ಅನುವುಮಾಡಿಕೊಡುತ್ತದೆ. 'ಬಿಸು' ಆಚರಣೆಯಲ್ಲಿ ಹೇಗೆ 'ಏಣೇಲು' ಬೆಳೆ ಮಾಡಲು ಕಾಲಬದ್ಧ ಸೂಚನೆಯಿರುತ್ತದೋ, 'ಪತ್ತನಾಜೆ' ಆಚರಣೆಯಲ್ಲಿ ಇತರ ಎಲ್ಲ ಚಟುವಟಿಕೆಗಳನ್ನು ಸಂಪೂರ್ಣ ನಿಲ್ಲಿಸಿ ಮುಂದೆ ಅಗತ್ಯವಾಗಿ 'ಏಣೇಲು' ಬೇಸಾಯವನ್ನು ಮಾಡಲು ಚಾಲನೆ ನೀಡುವ ಶುಭದಿನದ ಸೂಚನೆಯಿದೆ. 'ಬಿಸು'ವಿನಂದು 'ಕೈಬಿತ್ತ್' ಇಟ್ಟರೂ ಮುಂದೆ 'ಪತ್ತನಾಜೆ'ಯೊಳಗೆ ನೇಜಿ ಹಾಕಿರುತ್ತಾರೆ. ಅದು ಬೆಳೆದು ನಾಟಿಗೆ ಬಂದಿತ್ತದೆ. ಮಳೆಗಾಲವೂ ಆರಂಭವಾಗುತ್ತದೆ. ಎಲ್ಲರೂ ನೇಜಿ ತೆಗೆಯುವ, ನಾಟಿ ಮಾಡುವ, ಉಳುಮೆ ಮಾಡುವ ಕೃಷಿಕಾರ್ಯಕ್ಕೆ ಇಳಿಯಬೇಕಾಗುತ್ತದೆ. ಈ ಹಿನ್ನೆಲೆಯಲ್ಲಿ 'ಪತ್ತನಾಜೆ' ಆಚರಣೆಯ ಪಾತ್ರ ಗಮನಾರ್ಹವಾದುದು. ಆ ವೇಳೆಗೆ ಮಾಡಬೇಕಾದ ಎಲ್ಲ ಚಟುವಟಿಕೆಗಳನ್ನು ಪೂರ್ಣಗೊಳಿಸಿ, ದೈವ-ನಾಗಗಳಿಗೆಲ್ಲ 'ಪರ್ವ', 'ತಂಬಿಲ' ಕೊಡುವುದರಲ್ಲಿ

ವಿಶೇಷ ಅರ್ಥವನ್ನೂ ಗಮನಿಸಬಹುದು. ಮಳೆ, ಬಿಸಿಲು, ಫಸಲುಗಳ ಕಾಲಪರಿವರ್ತನೆಯ ಆವರ್ತನದ ನೆಲೆಯಲ್ಲಿ ತುಳುನಾಡಿನ ಪ್ರತಿಯೊಂದು ಚಟುವಟಿಕೆಗಳು ನಡೆಯುವುದನ್ನು 'ಪತ್ತನಾಜೆ' ಆಚರಣೆಯು ಅತ್ಯಂತ ಸ್ಪಷ್ಟವಾಗಿ ತಿಳಿಸುತ್ತದೆ. ಇದಕ್ಕೆ ಪೂರಕವಾಗಿ 'ಪತ್ತನಾಜೆಡ್ದ್ ಬೊಕ್ಕ ಪರ್ಬ ಇಜ್ಜಿ' (ಪತ್ತನಾಜೆಯ ಬಳಿಕ ಹಬ್ಬವಿಲ್ಲ), 'ಪತ್ತನಾಜೆ ಬತ್ತಂಡ್, ಜತ್ತಿ ಆಟೊ ಉಂತ್‌ಂಡ್'(ಪತ್ತನಾಜೆ ಬಂತು, ಬಯಲಾಟ ನಿಂತಿತು) ಎಂಬ ಗಾದೆ ಮಾತುಗಳು ಚಾಲ್ತಿಯಲ್ಲಿವೆ. ಜೊತೆಗೆ ಸಕಾಲದಲ್ಲಿ ಚೆನ್ನಾಗಿ ಮಳೆಯಾಗಲಿ, ಸಮೃದ್ಧ ಬೆಳೆಯಾಗಲಿ, ಕುಟುಂಬದ ಸದಸ್ಯರಿಗಾಗಲಿ, ದನಕರು ಜಾನುವಾರುಗಳಿಗಾಗಲಿ, ಬೆನ್ನಿಬೇಸಾಯಕ್ಕಾಗಲಿ ಮಳೆಗಾಲದಲ್ಲಿ ಯಾವುದೇ ರೀತಿಯ ತೊಂದರೆಯಾಗದಂತೆ ಕಾಪಾಡಬೇಕೆಂದು ಬೇಡಿಕೊಳ್ಳುವುದನ್ನು 'ಪತ್ತನಾಜೆ' ಆಚರಣೆಯಲ್ಲಿ ಗಮನಿಸಬಹುದು.

### ೫.೪: 'ಪತ್ತನಾಜೆ'ಗೆ ಸಮಾನವಾದ ಆಚರಣೆಗಳು

ಈ ಆಚರಣೆಯಲ್ಲಿ ನಡೆಯುವುದು ಮುಖ್ಯವಾಗಿ ಕೃಷಿಚಟುವಟಿಕೆಗೆ ಸಂಬಂಧಿಸಿದಂತೆ ದೈವರಾಧನೆಯಾಗಿರುವುದರಿಂದ ಸಾಮಾನ್ಯವಾಗಿ ಇದಕ್ಕೆ ಸಮಾನವಾಗಿ ಕರ್ನಾಟಕದ ಬೇರೆ ಬೇರೆ ಕಡೆಗಳಲ್ಲಿ ಕೆಲವು ಆಚರಣೆಗಳು ಕಂಡುಬರುತ್ತವೆ. ಉದಾಹರಣೆಗೆ: 'ಬೂದನ ರಾಸಿಪೂಜೆ',[೫] 'ತೊಡನಟ್ಟಿಶಾಸ್ತ್ರ',[೬] 'ಅಗೆತೆಗೆಯುವುದು',[೭] 'ಅಡವಿಬಡ್ಡಿಪೂಜೆ',[೮] 'ಆದ್ರಿಮಳೆಹಬ್ಬ'[೯] ಇತ್ಯಾದಿ ಆಚರಣೆಗಳಲ್ಲಿ 'ಪತ್ತನಾಜೆ' ಆಚರಣೆಯ ಹಿಂದಿರುವ ಆಶಯಗಳೇ ಕಂಡುಬರುತ್ತವೆ.

### ೫.೫: 'ಪತ್ತನಾಜೆ' ಆಚರಣೆಯ ಒಟ್ಟೂ ಸ್ವರೂಪ

ಒಟ್ಟಿನಲ್ಲಿ ಈ ಆಚರಣೆಗೆ ಸಂಬಂಧಿಸಿದಂತೆ ಈ ಕೆಳಗಿನ ಅಂಶಗಳನ್ನು ವಿಶೇಷವಾಗಿ ಗಮನಿಸಬಹುದು.

೧. 'ಬೇಶ' ತಿಂಗಳ ಹತ್ತು ಹೋಗುವಂದು ಈ ಆಚರಣೆ ನಡೆಯುತ್ತದೆ.

೨. ತುಳುನಾಡಿನ ಚಟುವಟಿಕೆಗಳಿಗೆ ಸಂಬಂಧಿಸಿದಂತೆ 'ಪತ್ತನಾಜೆ' ಒಂದು ಗಡುವು ಆಗಿದೆ. ವಿಶೇಷವಾಗಿ ಮಳೆಗಾಲದ 'ಏಣೇಲು' ಬೇಸಾಯ ಕಾರ್ಯಕ್ಕೆ ಪೂರ್ವಸಿದ್ಧತೆ ಮತ್ತು ಮಳೆಗಾಲವನ್ನು ಸುರಕ್ಷಿತವಾಗಿ ಕಳೆಯಲು ತಯಾರಾಗುವ ಅಂತಿಮ ಗಡುವು ಇದಾಗಿದೆ.

೩. ಭೂತಾರಾಧನೆ ಮತ್ತು ನಾಗಾರಾಧನೆಗಳಿಗೆ ಸಂಬಂಧಿಸಿದಂತೆ 'ಪತ್ತನಾಜೆ' ಆಚರಣೆಯಲ್ಲಿ ವಿಶೇಷ ಆದ್ಯತೆ ನೀಡುತ್ತಾರೆ. ಈ ಮೂಲಕ ಅಗೋಚರ ಶಕ್ತಿಗಳನ್ನು ನಂಬುವ ಕ್ರಿಯೆ ವ್ಯಕ್ತವಾಗುತ್ತದೆ.

೪. ಕುಟುಂಬ ಸಂಸಾರ, ನೆರೆಹೊರೆ, ಬಂಧುಮಿತ್ರರ ಸಂಮಿಲನಕ್ಕೊಂದು ಅವಕಾಶದ ದಿನವಾಗಿ 'ಪತ್ತನಾಜೆ' ಆಚರಣೆ ಮಹತ್ವದ್ದಾಗಿ ಕಂಡುಬರುತ್ತದೆ.

೫. ಈ ಆಚರಣೆಯ ಅಂಗವಾಗಿ ಆ ದಿನ ತುಳುಜಾನಪದ ಕ್ರೀಡೆಗಳಾದ 'ಕೋಳಿಅಂಕ', 'ಬೇಟೆಯಾಡುವುದು', 'ತೆಂಗಿನಕಾಯಿ ಕುಟ್ಟುವುದು', 'ತೆಪ್ಪಂಗಾಯಿ' ಆಟಗಳು ನಡೆಯುತ್ತವೆ.

೬. ಕೋಳಿಪದಾರ್ಥ ಮತ್ತು ರೊಟ್ಟಿ ಇಲ್ಲವೆ ಇತರ 'ಅಡ್ಯೆ'(ಅಕ್ಕಿ ತಿಂಡಿ) 'ಪತ್ತನಾಜೆ' ರಾತ್ರಿಯ ವಿಶೇಷ ಅಡುಗೆಯಾಗಿರುತ್ತದೆ.

೭. ಮಳೆಗಾಲ ಆರಂಭದ ಕಾಲನಿರ್ಣಯ ದಿನವಾಗಿ ಈ ಆಚರಣೆಯನ್ನು ಗುರುತಿಸಲಾಗುತ್ತದೆ.

೮. ಜನನ ಮರಣಾದಿ ಸೂತಕಗಳು ಇದ್ದಲ್ಲಿ ಈ ಆಚರಣೆ ನಡೆಯುವುದಿಲ್ಲ.

---

**ಅಡಿ ಟಿಪ್ಪಣಿ**

೧. **ತುಳು ನಿಘಂಟು:** ಸಂಪುಟ–೫: ೧೯೯೭: ಡಾ.ಯು.ಪಿ.ಉಪಾಧ್ಯಾಯ: ರಾಷ್ಟ್ರಕವಿ ಗೋವಿಂದ ಪೈ ಸಂಶೋಧನ ಕೇಂದ್ರ, ಉಡುಪಿ: ಪುಟ–೧೯೯೧
೨. **ಜಾನಪದ ಮಿನದನ:** ೧೯೯೭: ಡಾ.ಪಾಲ್ತಾಡಿ ರಾಮಕೃಷ್ಣ ಆಚಾರ್: ಸುಪ್ರಿಯ ಪ್ರಕಾಶನ, ಪುತ್ತೂರು: ಪುಟ–೫೭
೩. **ಕನ್ನಡಾನುವಾದ:** ತುಳು ಸಂಸ್ಕೃತಿದ ಪೊಲಬು: ೨೦೦೮: ಡಾ.ಪಾಲ್ತಾಡಿ ರಾಮಕೃಷ್ಣ ಆಚಾರ್: ಕರ್ನಾಟಕ ತುಳು ಸಾಹಿತ್ಯ ಅಕಾಡೆಮಿ, ಮಂಗಳೂರು: ಪುಟ–೪೩, ೪೪
೪. **ತುಳು ಜಾನಪದ ಆಚರಣೆಗಳು:** ೧೯೯೪: ಬನ್ನಂಜೆ ಬಾಬು ಅಮೀನ್: ಕೆಮ್ಮಲಜೆ ಜಾನಪದ ಪ್ರಕಾಶನ, ಉಡುಪಿ: ಪುಟ–೧೫೦
೫. **ಕನ್ನಡ ಜಾನಪದ ವಿಶ್ವಕೋಶ:** ಸಂಪುಟ–೨: ೧೯೮೫: (ಸಂ.)ಡಾ.ಚಂದ್ರಶೇಖರ ಕಂಬಾರ: ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು: ಪುಟ– ೧೪೨೧
೬. **ಅದೇ:** ಪೂರ್ವೋಕ್ತ: ಪುಟ – ೯೬೬
೭. **ಅದೇ:** ಸಂಪುಟ–೧: ಪೂರ್ವೋಕ್ತ: ಪುಟ–೨೯
೮. **ಅದೇ:** ಪೂರ್ವೋಕ್ತ: ಪುಟ–೪೨
೯. **ಅದೇ:** ಪೂರ್ವೋಕ್ತ: ಪುಟ–೧೩೦

■■■

# ಅಧ್ಯಾಯ–೬

## ತುಳುನಾಡಿನ ವಾರ್ಷಿಕ ಆವರ್ತನದ ಆಚರಣೆ–'ಆಟಿ ಅಮಾವಾಸ್ಯೆ'

# ಅಧ್ಯಾಯ–೬

## ತುಳುನಾಡಿನ ವಾರ್ಷಿಕ ಆವರ್ತನದ ಆಚರಣೆ–'ಆಟಿ ಅಮಾವಾಸ್ಯೆ'

# ಅಧ್ಯಾಯ-೬

# ತುಳುನಾಡಿನ ವಾರ್ಷಿಕ ಆವರ್ತನದ ಆಚರಣೆ 'ಆಟಿ ಅಮಾವಾಸ್ಯೆ'

## ೬.೧: 'ಆಟಿ ಅಮಾವಾಸ್ಯೆ'-ಅರ್ಥ

ತುಳುವರಿಗೆ 'ಆಟಿ' ನಾಲ್ಕನೆಯ ತಿಂಗಳು. (ಕರ್ಕಾಟಕಮಾಸ) ಮೂರನೆಯ ತಿಂಗಳಾದ 'ಕಾರ್ತೆಲ್'ನಲ್ಲಿ ಹೇಳಿಕೊಳ್ಳುವಂತಹ ಆವರ್ತನದ ಆಚರಣೆಗಳು ಯಾವುದೂ ಕಂಡು ಬರುವುದಿಲ್ಲ. 'ಆಟಿ' ತಿಂಗಳು ಮಳೆಗಾಲದ ಮಧ್ಯ ಭಾಗವಾಗಿದ್ದು, ಎಡೆಬಿಡದೆ ಮಳೆ ಸುರಿಯುವ ತಿಂಗಳು. ಈ ತಿಂಗಳಲ್ಲಿ ಬರುವ ಅಮಾವಾಸ್ಯೆಯಂದು ತುಳುವರು ಅತ್ಯಂತ ಶ್ರದ್ಧೆಯಿಂದ 'ಆಟಿ ಅಮಾವಾಸ್ಯೆ' ಆಚರಿಸುತ್ತಾರೆ.

'ಆಟಿದ ಅಮಾವಾಸ್ಯೆ' ಎಂಬ ಪದಕ್ಕೆ "ಕರ್ಕಟ ಮಾಸದ ಅಮಾವಾಸ್ಯೆ. ಸಮುದ್ರ ಸ್ನಾನ, ಹಾಲೆಮರದ ಕೆತ್ತೆಯ ರಸಪಾನ, ಭೂತಗಳಿಗೆ ಅಗೆಲ್ ಅರ್ಪಿಸುವುದು ಮೊದಲಾದವುಗಳು ಈ ದಿನದ ವಿಶೇಷ ಆಚರಣೆಗಳು; The new moon day in the month of aati. Bathing in the sea, drinking the juice extracted from the bark of the tree Alstonia Sholaris, offering agelu to the Bhutas are the special performance of this days"[೧] ಎಂಬುದಾಗಿ ತುಳು ನಿಘಂಟಿನಲ್ಲಿ ಅರ್ಥ ವಿವರಣೆಯಿದೆ.

## ೬.೨: 'ಆಟಿ ಅಮಾವಾಸ್ಯೆ'-ಆಚರಣೆಯ ವಿಧಾನ

'ಆಟಿ ಅಮಾವಾಸ್ಯೆ'ಯ ಹಿಂದಿನ ದಿನ ಇಲ್ಲವೆ ಅದೇ ದಿನ ಬೆಳಿಗ್ಗೆ ಬೇಗ ಹೆಂಗಸರು ಮನೆಯನ್ನು ಸೆಗಣಿ ಸಾರಿಸಿ ಶುದ್ಧಗೊಳಿಸುತ್ತಾರೆ. ಹಾಗೆಯೇ ಅಮಾವಾಸ್ಯೆಯ ಹಿಂದಿನ ದಿನ ಮನೆಯ ಯಜಮಾನ ಗುಡ್ಡೆಗೋ ಕಾಡಿಗೋ ಹೋಗಿ 'ಪಾಲೆ'(ಹಾಲೆ) ಮರವನ್ನು ಹುಡುಕುತ್ತಾನೆ. ಅದರ ಬುಡದಲ್ಲಿ 'ವೀಳ್ಯ' ಮತ್ತು ಒಂದು 'ಬೊಳ್ಳ್ ಕಲ್ಲ್'(ಬೆಣಚು ಕಲ್ಲು)ನ್ನು ಇಟ್ಟು ಮದ್ದಾದ ಮದ್ದೆಲ್ಲ ಈ ಮರದಲ್ಲಿ ಬಂದು ಸೇರಲಿ; ನಾನು ನಾಳೆ ಬೆಳಿಗ್ಗೆ ನಿನ್ನಲ್ಲಿಗೆ ಬರುವಾಗ ನೀನು ನಮಗೆ ಮದ್ದು ಕೊಡಬೇಕು ಎಂದು ಪ್ರಾರ್ಥಿಸಿ ಒಂದು 'ನೂಲು' ಕಟ್ಟಿ ಬರುತ್ತಾನೆ. ಮರುದಿನ ಮುಂಜಾನೆ ಬೆಳಕು ಹರಿಯುವ ಮೊದಲೇ ಮನೆಯ ಯಜಮಾನ ಎದ್ದು ಬೆತ್ತಲೆಯಾಗಿ ಆ ಮರದ ಬಳಿಗೆ ಹೋಗುತ್ತಾನೆ. ಹೋಗಿ ಹಾಲೆಮರಕ್ಕೆ ಒಂದು ಸುತ್ತು

ಪ್ರದಕ್ಷಿಣೆ ಬಂದು ಕೈ ಮುಗಿದು ಹಿಂದಿನ ದಿನ ಅಲ್ಲಿಟ್ಟಿದ್ದ ಬೆಣಚು ಕಲ್ಲಿನಿಂದ ಮರದ ಕಾಂಡವನ್ನು ಜಜ್ಜಿ ಸಿಪ್ಪೆಯನ್ನು ತೆಗೆದು ಹಿಡಿದುಕೊಂಡು ಮನೆಗೆ ಬರುತ್ತಾನೆ. ಮನೆಯಲ್ಲಿ ಹೆಂಗಸರು ಈ ಹಾಲೆಮರದ ಸಿಪ್ಪೆಯನ್ನು ಅರೆಯುವ ಕಲ್ಲಿನಲ್ಲಿ ಇಲ್ಲವೆ ಕಡೆಯುವ ಕಲ್ಲಿನಲ್ಲಿ ಅರೆದೋ, ಕಡೆದೋ ಇಲ್ಲವೇ ಜಜ್ಜಿ ರಸ ತೆಗೆಯುತ್ತಾರೆ. ಹೀಗೆ ಕಡೆಯುವಾಗ ಇಲ್ಲವೇ ಜಜ್ಜುವಾಗ ಬೆಳ್ಳುಳ್ಳಿ, ಕರಿಮೆಣಸು, ಶುಂಠಿ, ಓಮ, ಇತ್ಯಾದಿ ವಸ್ತುಗಳನ್ನು ಬೆರೆಸುತ್ತಾರೆ. ಕೊನೆಗೆ ಬೆಣಚು ಕಲ್ಲೊಂದನ್ನು ಬಿಸಿ ಮಾಡಿ ಆ ರಸದಲ್ಲಿ ಮುಳುಗಿಸಿ ಒಗ್ಗರಣೆ ಕೊಡುತ್ತಾರೆ. ಹೀಗೆ ಮನೆಯ ಯಜಮಾನ 'ಪಾಲೆ'(ಹಾಲೆ)ಯ ಸಿಪ್ಪೆ ತಂದದ್ದನ್ನು ಮನೆಯ ಹೆಂಗಸರು ರಸ ತೆಗೆದು ತಯಾರಿಸಿಡುತ್ತಾರೆ. ಇತ್ತ ಮನೆಯ ಯಜಮಾನ ಮತ್ತು ಇತರ ಗಂಡಸರು 'ಏಣೇಲು' ಬೆಳೆಗೆ ನೇಜಿ ನೆಟ್ಟ ಗದ್ದೆಗಳಿಗೆ, ಹಟ್ಟಿ ಗೊಬ್ಬರದ ರಾಶಿಗೆ, 'ನಟ್ಟಿಕಾಯಿದೊಂಪ'(ತರಕಾರಿ ತೋಟ)ಗಳಿಗೆಲ್ಲ 'ಕಳ್ಳಿ' ಕುತ್ತಿ ಬರುತ್ತಾರೆ. ಕೆಲವರು ಗದ್ದೆಗೆ 'ಕಾಪು' ಕುತ್ತುತ್ತಾರೆ. ಮತ್ತೆ ಕೆಲವರು ಕಾಸರ್ಕನ ಮರದ ಗೆಲ್ಲುಗಳನ್ನು ಕುತ್ತುವುದು ಉಂಟು. ಆದರೆ 'ಆಟಿ ಅಮಾವಾಸ್ಯೆ'ಯ ದಿನ 'ಕಳ್ಳಿ' ಅಥವಾ 'ಕಾಪು' ಕುತ್ತುವುದೇ ಹೆಚ್ಚಾಗಿ ಕಂಡು ಬರುತ್ತದೆ. 'ಕಾಸರ್ಕನ ಗೆಲ್ಲ'ನ್ನು ಇಲ್ಲವೇ 'ತರೋಳಿ ಗೆಲ್ಲ'ನ್ನು ಗದ್ದೆಯಲ್ಲಿ ನೇಜಿ ನೆಟ್ಟ ತಕ್ಷಣವೇ ಕುತ್ತುತ್ತಾರೆ. 'ಆಟಿ ಅಮಾವಾಸ್ಯೆ'ಯಂದು 'ಕಳ್ಳಿ' ಕುತ್ತುವುದೇ ಪದ್ಧತಿ.

'ಆಟಿ ಅಮಾವಾಸ್ಯೆ'ಯ ಹಿಂದಿನ ದಿನವೇ ಗಂಡಸರು ಈ 'ಕಳ್ಳಿ' ಕುತ್ತುವ ಇಲ್ಲವೇ 'ಕಾಪು' ಹಾಕುವ ವ್ಯವಸ್ಥೆಗೆ ಸಿದ್ಧತೆ ಮಾಡಿಕೊಳ್ಳುತ್ತಾರೆ. ತಮ್ಮ ತಮ್ಮ ಮನೆಗಳಲ್ಲಿ ಬೇಕಾಗುವಷ್ಟು 'ಕಳ್ಳಿ'ಯ ಕೊಂಬೆಗಳನ್ನು ಗುಡ್ಡದಿಂದ ಸಂಗ್ರಹಿಸುತ್ತಾರೆ. ಅಷ್ಟೇ ಸಂಖ್ಯೆಯಲ್ಲಿ ಬಿದಿರಿನ 'ಅಂಡೆ' (ಬೊಂಬು)ಗಳನ್ನು, ಒಂದಾಳು ಉದ್ದದ ಕೋಲುಗಳನ್ನು ತಯಾರಿಸುತ್ತಾರೆ. ಅದರ ಮಧ್ಯಭಾಗದಲ್ಲಿ ಗಂಟು ಬರುವಂತೆ ಉಳಿದೆರಡು ಕಡೆಗಳಲ್ಲಿ ದೊಡ್ಡ ದೊಡ್ಡ ಟೊಳ್ಳುಗಳಿರುವಂತದ್ದನ್ನು ಸಂಗ್ರಹಿಸುತ್ತಾರೆ. ಈ ಬಿದಿರಿನ 'ಅಂಡೆ'ಯ ಒಂದು ಟೊಳ್ಳಿನಲ್ಲಿ ಚೂರು ಮಣ್ಣು ತುಂಬಿಸುತ್ತಾರೆ. ಅದರಲ್ಲಿ 'ಕಳ್ಳಿ'ಯ ಒಂದು ಕೊಂಬೆಯನ್ನು ಇಡುತ್ತಾರೆ. ಹೀಗೆ 'ಕಳ್ಳಿ'ಯನ್ನಿಟ್ಟು ಅದರ ಸುತ್ತ 'ಈಚಲು ಮರ', 'ರಾವು ಬೀಜ', 'ಕರಿಯನೆಕ್ಕಿ', 'ಬಿಳಿನೆಕ್ಕಿ', 'ಬಿದಿರು', 'ಒಟೆ', 'ನೆಲ್ಲಿ' ಮೊದಲಾದ ಮರಗಳ ಸೊಪ್ಪುಗಳನ್ನು ಜೋಡಿಸಿಡುತ್ತಾರೆ. ಹೀಗೆ ಬಿದಿರ 'ಅಂಡೆ'ಯ ಒಂದು ತುದಿಯಲ್ಲಿ 'ಕಳ್ಳಿ' ಇಟ್ಟು ಒಂದಾಳು ಉದ್ದದ ಕೋಲಿನ ಒಂದು ತುದಿಗೆ ಬಿದಿರ 'ಅಂಡೆ'ಯ ಇನ್ನೊಂದು ಭಾಗದ ಟೊಳ್ಳಿನ ಮೂಲಕ ಸಿಕ್ಕಿಸುತ್ತಾರೆ. ಕೋಲಿನ ಇನ್ನೊಂದು ತುದಿಯನ್ನು ಚೂಪು ಮಾಡಿಡುತ್ತಾರೆ. ಹೀಗೆ 'ಕಳ್ಳಿ' ಕುತ್ತಲು ತಯಾರಿ

ನಡೆಸುತ್ತಾರೆ. ಕೆಲವರು ಬಿದಿರ 'ಅಂಡೆ'ಯ ಬದಲಿಗೆ ಕೋಲಿನ ಒಂದು ತುದಿಗೆ 'ಮುಳಿ' ಹುಲ್ಲನ್ನು ಕಟ್ಟಿ ಅದರಲ್ಲಿ ಮಣ್ಣು ಮತ್ತು ಇತರ ವಸ್ತುಗಳನ್ನಿಟ್ಟು 'ಕಳ್ಳಿ' ಕಟ್ಟುತ್ತಾರೆ. ಮತ್ತೆ ಕೆಲವರು ಒಂದಾಳು ಗಾತ್ರದ ಮೂರು ಕೋಲುಗಳ ಸಹಾಯದಿಂದ 'ಮುಕ್ಕಾರ್' ಮಾಡುತ್ತಾರೆ. ಅದರ ಮೇಲ್ಭಾಗದಲ್ಲಿ 'ಮಾದೆರ್ ಬೀಳ'ನ್ನು ಸುತ್ತಿ 'ಕಾಪು' ಮಾಡುತ್ತಾರೆ. ಆ 'ಕಾಪಿ'ನಲ್ಲಿ 'ಕಳ್ಳಿ' ನೆಟ್ಟು ಅವುಗಳನ್ನು ಗದ್ದೆಗಳಿಗೆ ನೆಡುವ ಕ್ರಮವೂ ಇದೆ. ಹೀಗೆ ಅಮಾವಾಸ್ಯೆಯ ದಿನ ಬೆಳಿಗ್ಗೆ ಗಂಡಸರು 'ಕಳ್ಳಿ' ನೆಡುವ ಕ್ರಮವನ್ನು ಮಾಡುತ್ತಾರೆ. ಇನ್ನೊಂದು ಕಡೆಗೆ ಹೆಂಗಸರು 'ಪಾಲೆ' (ಹಾಲೆ)ಮರದ ರಸ ತಯಾರಿಸಿ ನೀರಿನಲ್ಲಿ ದಾನ ಬಿಡಲು ಸಿದ್ಧತೆ ನಡೆಸುತ್ತಾರೆ. ೫ ವೀಳ್ಯದೆಲೆ, ೧ ಅಡಿಕೆ, ೧ ತೆಂಗಿನಕಾಯಿ, ನಾಲ್ಕಾಣೆ, ಇಲ್ಲವೆ ಒಂದು ಮುಕ್ಕಾಲ್ ಪೈಸೆ, ದಾಸವಾಳ, 'ಇಟ್ಟೇವು', 'ನೈಕಂಬುರ್ಲ', 'ರಥಹೂವು', 'ನೆಲಮುಚ್ಚಿರ್' ಹೂವು, ಹಾಲು ಹೂವು ಇವೇ ಮೊದಲಾದ ವಿವಿಧ ಜಾತಿಯ ೭ ಬಗೆಯ ಹೂವುಗಳು, ಬತ್ತಿ ಹಾಗೂ ಗಂಧ ಹಾಗೂ ಭತ್ತ, ಹೆಸರು, ಗೋಧಿ, ಕಡಲೆ, ಅವರೆ, ಎಳ್ಳು, ಉದ್ದು, ಹುರುಳಿ, ತೊಗರಿ ಮೊದಲಾದ ನವಧಾನ್ಯಗಳನ್ನು ಒಟ್ಟುಮಾಡಿ ಇಡುತ್ತಾರೆ. ಇವುಗಳನ್ನೆಲ್ಲ ಒಂದು ಕದಳಿಬಾಳೆಯ ತುದಿ ಎಲೆಯಲ್ಲಿ ಜೋಡಿಸುತ್ತಾರೆ. ಇವುಗಳನ್ನು ಹಿಡಿದು ಮನೆಯ ಯಜಮಾನನ ನೇತೃತ್ವದಲ್ಲಿ ನೀರು ಹರಿಯುವ ತೋಡಿಗೋ, ನದಿಗೋ ಹೋಗುತ್ತಾರೆ. ಅಲ್ಲಿ ಎಲ್ಲರೂ ಸಾಲಾಗಿ ನಿಲ್ಲುತ್ತಾರೆ. ಬಾಳೆ ಎಲೆಯ ತುದಿಯಲ್ಲಿ ಬತ್ತಿ ಉರಿಸಿಟ್ಟು ಎಲೆಯನ್ನು ಕೈಯಲ್ಲಿ ಹಿಡಿದುಕೊಂಡು ಎಲ್ಲರ ತಲೆಗೂ ಮೂರು ಸುತ್ತು ತಂದು ಕೈ ಮುಗಿಯುತ್ತಾನೆ. ನಂತರ ನೀರಿನಲ್ಲಿ ದಾನ ಬಿಡುತ್ತಾನೆ. ಬಳಿಕ ಎಲ್ಲರೂ ನೀರಿನಲ್ಲಿ ಮುಳುಗಿ ಸ್ನಾನಮಾಡಿ ಮನೆಗೆ ಹಿಂತಿರುಗುತ್ತಾರೆ. ಇಲ್ಲಿಯವರೆಗೆ ಎಲ್ಲರೂ ಬರಿಹೊಟ್ಟೆಯಲ್ಲಿರುತ್ತಾರೆ. ಮನೆಗೆ ಬಂದು ಆಗಲೇ ತಯಾರಿಸಿಟ್ಟಿದ್ದ 'ಪಾಲೆ'(ಹಾಲೆ) ಮರದ ರಸವನ್ನು ಅರ್ಧ ಅರ್ಧ ಕುಡ್ತೆಯಷ್ಟೊ ಇಲ್ಲವೇ ಸ್ವಲ್ಪ ಸ್ವಲ್ಪ ಸೇವಿಸುತ್ತಾರೆ. 'ಪಾಲೆ'(ಹಾಲೆ) ರಸ ಅತ್ಯಂತ ಕಹಿ ಇರುವುದರಿಂದ ರಸ ಕುಡಿದಾದ ಮೇಲೆ ಬೆಲ್ಲ ತಿನ್ನುವುದೂ ಉಂಟು. ಕುಟುಂಬದ ಸದಸ್ಯರು ಎಲ್ಲಿದ್ದರೂ 'ಆಟಿ ಅಮಾವಾಸ್ಯೆ'ಯ ದಿನ ಮನೆಗೆ ಬರುತ್ತಾರೆ. ಈ ಆಚರಣೆಯಲ್ಲಿ ಭಕ್ತಿ ಸಂಭ್ರಮಗಳಿಂದ ಪಾಲ್ಗೊಳ್ಳುತ್ತಾರೆ. ಈ ಆಚರಣೆಯ ಸಂತೋಷಾರ್ಥವಾಗಿ ಬೇಟೆಗೆ ಹೋಗುವುದು, ಕೋಳಿಅಂಕ ಮಾಡುವುದು, ತೆಂಗಿನಕಾಯಿ ಕುಟ್ಟುವಂತಹ ಜಾನಪದ ಆಟಗಳು ನಡೆಯುತ್ತವೆ. ಅಂತೆಯೇ ಚೆನ್ನೆಮಣೆಯಾಟವನ್ನು ವಿಶೇಷವಾಗಿ 'ಆಟಿ'ತಿಂಗಳುದ್ದಕ್ಕೂ ಆಚರಿಸುತ್ತಾರೆ. ಕೆಲವು ಮನೆಗಳಲ್ಲಿ ಈ ದಿನ 'ಹಟ್ಟಿಮಾರಿ' ಆಚರಣೆ ಮಾಡುವುದಿದೆ. ಅಂದರೆ

ಹಟ್ಟಿಗೆ, ಜಾನುವಾರುಗಳಿಗೆ ಸಂಬಂಧಿಸಿದ ಆಚರಣೆ ಇದಾಗಿದ್ದು, ಹಂದಿ ಇಲ್ಲವೆ ಕೋಳಿಯನ್ನು ಬಲಿ ಕೊಡುವುದಾಗಿದೆ.

ಇಷ್ಟೆಲ್ಲ ಕ್ರಿಯಾಚರಣೆಗಳು ಆದ ಮೇಲೆ ಉಪಾಹಾರ ಮಾಡುತ್ತಾರೆ. ಆ ದಿನದ ಬಳಗ್ಗಿನ ಉಪಾಹಾರಕ್ಕೆ ಹೆಂಗಸರು 'ಮರಚೇವು'(ಮರಕೆಸು)ವನ್ನು ಹಾಕಿದ 'ಪತ್ರೊಡೆಅಡ್ಯೆ' (ಅಕ್ಕಿತಿಂಡಿ) ಮಾಡಿರುತ್ತಾರೆ. ಎಲ್ಲರೂ 'ಪತ್ರೊಡೆ' ಸೇವಿಸುತ್ತಾರೆ. ಉಳಿದಂತೆ ಕೆಲವು ಮನೆಗಳಲ್ಲಿ ರಾಹು, ಕಲ್ಲುರ್ಟಿ, ಗುಳಿಗ ಮೊದಲಾದ ಸಣ್ಣ ಸಣ್ಣ ಭೂತಗಳಿಗೆ ಬಡಿಸುತ್ತಾರೆ. ಈ ಭೂತಗಳಿಗೆ ಮಧ್ಯಾಹ್ನ ಇಲ್ಲವೆ ಸಂಜೆ 'ಅಗೆಲು' ಬಡಿಸಿ ಪ್ರಾರ್ಥನೆ ಮಾಡಿ ಕೈ ಮುಗಿಯುತ್ತಾರೆ. ಮಧ್ಯಾಹ್ನ ಎಂದಿನಂತೆ ಊಟ ನಡೆಯುತ್ತದೆ. ರಾತ್ರಿ ಭೂತಗಳಿಗೆ ಬಡಿಸಿದ ಮನೆಯಲ್ಲಿ ಸಾಮಾನ್ಯವಾಗಿ ಕೋಳಿ ಪದಾರ್ಥವಿರುತ್ತದೆ. ರೊಟ್ಟಿ ಮಾಡುತ್ತಾರೆ. ಕೆಲವರು ಮೀನು ಪದಾರ್ಥ ಮಾಡಿದರೆ ಕೆಲವರು ತರಕಾರಿ ಪದಾರ್ಥ ಮಾಡಿ ಏನಾದರೂ 'ಅಡ್ಯೆ' (ಅಕ್ಕಿತಿಂಡಿ) ಮಾಡುವುದುಂಟು. ಸಾಮಾನ್ಯವಾಗಿ 'ಆಟಿ ಅಮಾವಾಸ್ಯೆ'ಗೆ ರೊಟ್ಟಿ ಮಾಡುವುದು ಹೆಚ್ಚು ಕಂಡು ಬರುತ್ತದೆ. ಗುಡ್ಡೆಯಲ್ಲಿ ಬೆಳೆಯುವ 'ಕೇನೆಕಂಡೆ' (ಕೆಸುಗೆಡ್ಡೆ) ತಂದು ಅಕ್ಕಿಯ ಜೊತೆಗೆ ಕಡೆದು 'ಕೇನೆದ ಪುಂಡಿ' ಮಾಡುತ್ತಾರೆ. ಬೆಳಿಗ್ಗೆಯ 'ಪಾಲೆ' (ಹಾಲೆ) ಮರದ ರಸ, 'ಪತ್ರೊಡೆ' ಮತ್ತು ರಾತ್ರಿಯ 'ಅಡ್ಯೆ' (ಅಕ್ಕಿತಿಂಡಿ) ಪದಾರ್ಥ ಇವುಗಳನ್ನು ಮನುಷ್ಯ ಸ್ವೀಕರಿಸುವ ಮೊದಲು 'ಕುಲೆ'ಗಳಿಗೆ (ಪಿತೃಗಳಿಗೆ) ಬಡಿಸುವುದುಂಟು. ಈ ಕೆಲಸವನ್ನು ಮನೆಯ ಹೆಂಗಸರೇ ಹೆಚ್ಚಾಗಿ ಮಾಡುತ್ತಾರೆ. ಹೀಗೆ 'ಆಟಿ ಅಮಾವಾಸ್ಯೆ'ಯನ್ನು ತುಳುವರು ಅತ್ಯಂತ ಭಕ್ತಿ ಶ್ರದ್ಧೆಯಿಂದ ವ್ಯವಸ್ಥಿತವಾಗಿ ನಡೆಸಿಕೊಂಡು ಬರುವುದು ಅಧ್ಯಯನದಿಂದ ತಿಳಿದು ಬರುತ್ತದೆ. ಆದರೆ ಹುಟ್ಟು ಸಾವುಗಳ ಸೂತಕಗಳು ಬಂದರೆ ಈ ಆಚರಣೆಯನ್ನು ಮಾಡುವುದಿಲ್ಲ. ('ಆಟಿ ಅಮಾವಾಸ್ಯೆ' ಆಚರಣೆಗೆ ಸಂಬಂಧಿಸಿದಂತೆ ಅನುಬಂಧ ಪುಟ-III ರಲ್ಲಿನ ಚಿತ್ರ-೧.೩.೧ ರಿಂದ ೧.೩.೧೦ ಇವುಗಳನ್ನು ಗಮನಿಸಬಹುದು.)

### ೬.೩: 'ಆಟಿ ಅಮಾವಾಸ್ಯೆ' ಆಚರಣೆ-ವಿಶ್ಲೇಷಣೆ

ಸೌರಮಾನ ಪದ್ಧತಿ ಪ್ರಕಾರ ನಾಲ್ಕನೇ ತಿಂಗಳು ಕರ್ಕಟಮಾಸ. ಇದನ್ನು ತುಳುವರು 'ಆಟಿ' (ಆಷಾಢ) ತಿಂಗಳೆಂದು ಕರೆಯುತ್ತಾರೆ. ಈಗಾಗಲೇ ಪೀಠಿಕೆಯಲ್ಲಿ ಹೇಳಿದಂತೆ 'ಆಟಿ' ತಿಂಗಳು ಒಂದೆ ವಿಪರೀತ ಮಳೆ ಸುರಿಯುವ ಕಾಲವಾಗಿತ್ತಂತೆ. ಮಳೆಯಿಲ್ಲವಾದಲ್ಲಿ ತಡೆಯಲಾಗದ ಬಿರು ಬಿಸಿಲು. ತುಳು ಗಾದೆಯ ಪ್ರಕಾರ 'ಆಟಿದ ದೊಂಬುಗು ಆನೆದ ಬೆರಿಲಾ

ಪುಡವು' ('ಆಟಿ'ಯ ಬಿಸಿಲಿಗೆ ಆನೆಯ ಬೆನ್ನು ಕೂಡ ಒಡೆದೀತು.) ಹೀಗೆ ವಿಪರೀತ ಮಳೆ ಇಲ್ಲವೇ ಸಹಿಸಲಾಗದ ಬಿಸಿಲು ಇದ್ದುದರಿಂದ ವಾತಾವರಣದಲ್ಲಿ ಏರುಪೇರು ವೈರುಧ್ಯಗಳುಂಟಾಗಿ ರೋಗ ರುಜಿನಗಳು ಹರಡಿಕೊಳ್ಳುತ್ತವೆ. ಈ ರೀತಿ ರೋಗರುಜಿನಗಳು ಬರುತ್ತಿದ್ದುದರಿಂದ ಮತ್ತು ಅನುಕೂಲಕರವಲ್ಲದ ಹವಾಮಾನದಿಂದ ಮನೆಬಿಟ್ಟು ಹೊರಗಡೆ ದುಡಿಯಲು ಹೋಗಲೂ ಅವಕಾಶವಿಲ್ಲದಂತಹ ಪರಿಸ್ಥಿತಿ ಒಂದೆಡೆಯಾದರೆ, ಮತ್ತೊಂದೆಡೆ ಆ ಕಾಲದಲ್ಲಿ ತೀರಾ ಬಡತನದ ಸಂದರ್ಭ ಬೇರೆ. 'ಸುಗ್ಗಿ' ಬೆಳೆಯ ಅಕ್ಕಿಯೆಲ್ಲ 'ಆಟಿ' ತಿಂಗಳ ವೇಳೆಗೆ ಮುಗಿದಿರುತ್ತದೆ. ನಂತರ 'ಪೊಲಿ'(ಬಡ್ಡಿ)ಗೆ ಅಕ್ಕಿ ಸಾಲ ತರುತ್ತಿದ್ದರಂತೆ. ಇಂತಹ ದಿನಗಳಲ್ಲಿ ಅಟ್ಟ ಖಾಲಿಯಾಗುತ್ತಿದ್ದುದರಿಂದ ಮತ್ತು ಹೊರಗಡೆ ಕೆಲಸಕ್ಕೆ ಹೋಗಲು ಸಾಧ್ಯವಿಲ್ಲದ್ದರಿಂದ 'ಆಟಿ' ತಿಂಗಳಲ್ಲಿ 'ಅಟ್ಟ' ಗುಡಿಸುವ ಕ್ರಮವನ್ನು ಇಟ್ಟು ಕೊಂಡಿದ್ದರು. ಹಾಗಾಗಿ 'ಆಟಿಡ್ ಅಟ್ಟ ಅಡಿಪ್ಪೊಡು' (ಆಟಿಯಲ್ಲಿ ಅಟ್ಟಗುಡಿಸಬೇಕು) ಎಂಬ ಗಾದೆಯೇ ಹುಟ್ಟಿಕೊಂಡಿದೆ. ಅಂತೆಯೇ ಚೆನ್ನಮಣೆ ಆಟವಾಡುತ್ತಿದ್ದರು. "ಆಹಾರ ಸಂಗ್ರಹದ ಕೊರತೆ, ಹವಾಮಾನದ ಏರುಪೇರು, ಇದರಿಂದ ಉಂಟಾಗುವ ರೋಗರುಜಿನಗಳು ಮನುಷ್ಯ ಮನಸ್ಸಿನ ದುರ್ಬಲತೆ, ಧಾರಾಕಾರ ಮಳೆ–ಜೊತೆಗೆ ಉರಿ ಬಿಸಿಲು, ಶ್ರಮದ ನಿರ್ವಹಣೆಗೆ ತತ್ತರ, ಇವೆಲ್ಲದರ ಒಟ್ಟು ಪರಿಣಾಮವಾಗಿ ಆಟಿಯ ಸುತ್ತ ಭಯದ ಮತ್ತು ಧಾರುಣತೆಯ ಕಲ್ಪನೆಯನ್ನು ಸೃಷ್ಟಿಸುವಂತೆ ಮಾಡಿದೆ ಮತ್ತು ಈ ಬಗೆಯ ಸ್ಥಿತ್ಯಂತರದಿಂದ ಪಾರಾಗಲು ತಾತ್ಕಾಲಿಕ ಪರಿಹಾರ ಹಾಗೂ ಸಾಂತ್ವನ ಕಂಡು ಕೊಳ್ಳುವ ದೃಷ್ಟಿಯಿಂದ ಕೆಲವೊಂದು ವಿಧಿ ನಿಷೇಧಗಳನ್ನು, ಕೆಲವೊಂದು ಆಚರಣೆಗಳನ್ನು, ಹಾಗೆಯೇ ಆರಾಧನೆಗಳನ್ನು ನಡೆಸುತ್ತಾರೆ"[೨] ಎಂದು ವಿದ್ವಾಂಸರು ನೀಡುವ ವಿಶ್ಲೇಷಣೆ ಅರ್ಥವತ್ತಾಗಿದೆ. ಈ ನೆಲೆಯಲ್ಲಿ 'ಆಟಿ' ತಿಂಗಳು ತುಳುವರಿಗೆ ನಿಷೇಧದ ತಿಂಗಳು. ಅನಿಷ್ಟದ ಕಾಲ. 'ಕರಕರಿತ್ತಾಯಗ್ ಆಟಿ; ಸುಕತ್ತಾಯಗ್ ಸುಗ್ಗಿ' (ಕಿರಿಕಿರಿಯವನಿಗೆ ಆಟಿ; ಸುಖಪಡುವವನಿಗೆ ಸುಗ್ಗಿ) ಎಂಬ ಗಾದೆಮಾತೇ ಆಟಿ ಅನಿಷ್ಟದ ತಿಂಗಳು ಎಂಬುದನ್ನು ಸ್ಪಷ್ಟಪಡಿಸುತ್ತದೆ. ಈ ಅನಿಷ್ಟದ ನಿವಾರಣೆಗಾಗಿ ಕಂಡುಕೊಂಡ ಬೇರೆ ಬೇರೆ ರೀತಿಯ ಪರಿಹಾರ ಮಾರ್ಗಗಳೇ ಆಚರಣೆಗಳಾಗಿವೆ. ಅಂತಹವುಗಳಲ್ಲಿ 'ಆಟಿ ಅಮಾವಾಸ್ಯೆ'ಯ ಆಚರಣೆಯೂ ಒಂದು. ಜಾನಪದ ತಜ್ಞರಾದ ಡಾ.ಪೂವಪ್ಪ ಕಣಿಯೂರು ಅವರು 'ಆಟಿ' ತಿಂಗಳ ವೈಶಿಷ್ಟ್ಯಗಳನ್ನು ಆಚರಣೆಗಳು, ಆರಾಧನೆಗಳು, ವಿಧಿ ನಿಷೇಧಗಳು ಎಂದು ಮೂರು ಭಿನ್ನ ನೆಲೆಗಳಲ್ಲಿ ಅಧ್ಯಯನ ಮಾಡಬಹುದೆಂದು ಅಧ್ಯಯನ ಯೋಗ್ಯವಾದ ಮಾತನ್ನು ಹೇಳಿದ್ದಾರೆ.[೩] ಹಾಗಾಗಿ 'ಆಟಿ' ತಿಂಗಳ ಆಚರಣೆ ಎಂದರೆ 'ಆಟಿ ಅಮಾವಾಸ್ಯೆ'.

'ಆಟಿ ಅಮವಾಸ್ಯೆ'ಯೆಂದರೆ ಒಂದಷ್ಟು ಆಚರಣೆಗಳ ಅಮಾವಾಸ್ಯೆ. ಯಾಕೆಂದರೆ 'ಆಟಿ ಅಮಾವಾಸ್ಯೆ' ಆಚರಣೆಯ ವಿಧಾನವನ್ನು ಗಮನಿಸುವಾಗ ಐದು ಮುಖ್ಯ ಆಚರಣೆಗಳು ಕಂಡು ಬರುತ್ತವೆ.

೧. ಹಾಲೆರಸ ಕುಡಿಯುವುದು

೨. ದಾನ ಬೀಡುವುದು

೩. ತೀರ್ಥ ಸ್ನಾನ ಮಾಡುವುದು

೪. ಕಳ್ಳಿ/ಕಾಪು ಕುತ್ತುವುದು

೫. ಭೂತಗಳಿಗೆ ಅಗೆಲು ಹಾಕುವುದು

**೬.೩.೧: ಹಾಲೆರಸ ಕುಡಿಯುವುದು**

'ಆಟಿ ಅಮವಾಸ್ಯೆ'ಯ ದಿನ ಮದ್ದಾದ ಮದ್ದೆಲ್ಲ ಹಾಲೆಮರದಲ್ಲಿ ಸೇರಿಕೊಳ್ಳುತ್ತವೆ. ಹಾಗಾಗಿ ಆ ದಿನ ಬರೀ ಹೊಟ್ಟೆಗೆ ಆ ಮದ್ದನ್ನು ರಸದ ರೂಪದಲ್ಲಿ ಕುಡಿದರೆ ಮುಂದೆ ಯಾವುದೇ ರೋಗ ರುಜಿನಗಳು ಬರುವುದಿಲ್ಲ ಎಂಬ ನಂಬಿಕೆ ಜನಪದರಲ್ಲಿದೆ. ಈ ನಂಬಿಕೆಗೆ ಪೂರಕವೆಂಬಂತೆ ಹಿಂದಿನ ದಿನವೇ 'ಪಾಲೆ'(ಹಾಲೆ)ಮರದ ಬುಡಕ್ಕೆ ಹೋಗಿ ಪ್ರಾರ್ಥನೆ ಮಾಡಿಕೊಳ್ಳುವುದನ್ನು ಗಮನಿಸಬಹುದು.

ನಾಟಿ ವೈದ್ಯದ ಬಗ್ಗೆ ಅಧ್ಯಯನ ಮಾಡಿರುವ ಡಾ.ಬಿ.ಶಿವರಾಮ ಶೆಟ್ಟಿಯವರು ಈ ಕುರಿತು ಹೀಗೆ ಅಭಿಪ್ರಾಯ ಪಡುತ್ತಾರೆ-"ವರ್ಷಾವಧಿಯ ಕಾಲರಹಿತ ಅವಧಿಯಾದ ಆಟಿ ತಿಂಗಳ ಕಾಲದ ಬದ್ಧತೆಯನ್ನು ಮಿತಿಗೊಳಿಸಿ, ನಿರ್ದಿಷ್ಟಗೊಳಿಸಿ ಅಮಾವಾಸ್ಯೆಯ ದಿನ ಕತ್ತಲು ಕಳೆದು ಬೆಳಕು ಮೂಡುವ ಮೇರೆಯ ಅಥವಾ ತಿರುವಿನ ಕ್ಷಣದಲ್ಲಿ ಮದ್ದು ಕುಡಿಯುವ ಆಚರಣೆ ನಡೆಯುತ್ತದೆ...... ಇಲ್ಲಿಯ ಕಾಲ ಸಂಕ್ರಮಣ ಸ್ಥಿತಿಯಲ್ಲಿದೆ. ಕತ್ತಲೆಯಿಂದ ಬೆಳಕಿನೆಡೆಗೆ ತಿರುಗುವ ತಿರುವಿನ ಸ್ಥಿತಿಯಲ್ಲಿದೆ. ಸ್ಥಳದ ನೆಲೆಯಲ್ಲಿ ಕಾಲ ಮತ್ತು ಔಷಧಿ ನೈಸರ್ಗಿಕವಾಗಿರುವಂತೆ ಕಾಲದಲ್ಲಿ ಮದ್ದು ಸಂಗ್ರಹಿಸುವ ವಿಧಾನವೂ ನೈಸರ್ಗಿಕವಾಗಿರುತ್ತದೆ....... ಬಟ್ಟೆ ತೊಡದೆ ಮರದಡಿ ಹೋಗಬೇಕು. ಕಬ್ಬಿಣವನ್ನು ಉಪಯೋಗಿಸದೆ ಕಲ್ಲಿನಿಂದ ಜಜ್ಜಿ ತೊಗಟೆ ತೆಗೆಯಬೇಕು ಅನ್ನುವ ವಿಧಿ ನಿಷೇಧಗಳು, ನಿಸರ್ಗದತ್ತ ಉತ್ಪನ್ನಗಳನ್ನು ನೈಸರ್ಗಿಕವಾಗಿ ಸಂಗ್ರಹಿಸಬೇಕು ಎಂಬುದನ್ನು ಸೂಚಿಸುತ್ತದೆ........ ಇಲ್ಲಿ ಅಸಮತೋಲನಗೊಳ್ಳುವ ದೇಹ ಪ್ರಕೃತಿಯನ್ನು ಪ್ರಕೃತಿ ವೈದ್ಯದ ಮೂಲಕ ಸಮತೋಲನಕ್ಕೆ

ತರುತ್ತದೆ. ಆಟಿ ಅಮವಾಸ್ಯೆಯ ಮದ್ದು ಕುಡಿಯುವ ಆಚರಣೆ ಜನಪದ ವೈದ್ಯದ ಸ್ವರೂಪವನ್ನು ವಿಧಿ ಬದ್ಧಗೊಳಿಸುತ್ತದೆ"[3] ಎನ್ನುವ ವಿಚಾರವು ಗಮನಾರ್ಹವಾದುದು. ಅಂದರೆ ಪ್ರಕೃತಿಯ ಕೂಸಾಗಿ ಹುಟ್ಟಿಕೊಂಡ ಮಾನವ ಸಂಸ್ಕೃತಿಯ ಚೌಕಟ್ಟಿನಲ್ಲಿ ಬದುಕಲು ಕಲಿತಾಗ ಸಹಜವಾಗಿ ನಿಸರ್ಗದತ್ತ ಸಮಸ್ಯೆ ಸವಾಲುಗಳು ಎದುರಾದವು. ಅವುಗಳನ್ನು ಮತ್ತೆ ಪ್ರಕೃತಿಯಲ್ಲಿನ ವಸ್ತುವೈವಿಧ್ಯಗಳಿಂದಲೇ ಪರಿಹರಿಸಿಕೊಳ್ಳುವ ತಿಳುವಳಿಕೆಯ ಸಂಗತಿಗಳು ವಿಶಿಷ್ಟವಾಗಿವೆ. ಕಾಲಕಾಲಕ್ಕೆ ಪ್ರಕೃತಿ ತಂದೊಡ್ಡುವ ಪ್ರತಿಯೊಂದು ಕಾಯಿಲೆ-ಕಸಾಲೆಗಳಿಗೂ ಪ್ರಕೃತಿಯಲ್ಲಿಯೇ ಪರಿಹಾರವಿರುವುದನ್ನು ಇದರಿಂದ ಗಮನಿಸಬಹುದು.

ರೋಗ ನಿರೋಧಕವಾಗಿ 'ಪಾಲೆ' (ಹಾಲೆ)ಮರದ ರಸವನ್ನು ಒಂದು ನಿರ್ದಿಷ್ಟ ಸನ್ನಿವೇಶದಲ್ಲಿ ಮದ್ದಾಗಿ ಕುಡಿಯುವ ಈ ಆಚರಣೆಯನ್ನು ಕುರಿತು ಜನಪದರು ತಮ್ಮದೇ ಆದ ರೀತಿಯಲ್ಲಿ ಈ ಕೆಳಗಿನಂತೆ ವಿವರಣೆಯನ್ನು ಕೊಡುತ್ತಾರೆ.

- 'ಆಟಿ ಅಮಾವಾಸ್ಯೆ'ಯಂದು ಬೆಳಿಗ್ಗೆ ಬರಿ ಹೊಟ್ಟೆಗೆ 'ಪಾಲೆ'(ಹಾಲೆ)ಮರದ ರಸವನ್ನು ಕುಡಿದರೆ ಆ ವರ್ಷದುದ್ದಕ್ಕೂ ಯಾವುದೇ ಕಾಲದಲ್ಲಿ ರೋಗಗಳು ಬರುವುದಿಲ್ಲ.
- ಅಮಾವಾಸ್ಯೆಯ ಹಿಂದಿನ ದಿನ 'ಪಾಲೆ'(ಹಾಲೆ)ಮರದ ತೊಗಟೆಯನ್ನು ಮಜ್ಜಿಗೆಯಲ್ಲಿ ನೆನಸಿ ಮರುದಿನ ಬೆಳಗ್ಗಿನ ವೇಳೆಯಲ್ಲಿ ಅರೆದು ಅದರ ರಸವನ್ನು ಮಕ್ಕಳಿಗೆ ಕುಡಿಸಿದರೆ ವರ್ಷಪೂರ್ತಿ ಮದ್ದು ಕೊಡುವ ಅಗತ್ಯವಿಲ್ಲ; ಮತ್ತು ಮಕ್ಕಳಲ್ಲಿ ಕಂಡುಬರುವ ಹುಳಬಾಧೆಗೆ ಇದು ದಿವ್ಯೌಷಧ.
- ಅಮಾವಾಸ್ಯೆಯ ಮೊದಲ ರಾತ್ರಿ ಬೇರೆ ಬೇರೆ ಕಡೆಗಳಿಂದ ನಾನಾ ಜಾತಿಯ ಹಾವು ಪಕ್ಷಿಗಳು ಬಂದು ಮರದಲ್ಲಿ ನೆಲೆಸುತ್ತವೆ. ಇದರಿಂದ ಹಲವು ಕಡೆಯ ಹಲವು ರೀತಿಯ ಔಷಧದ ಅಂಶಗಳು ಹಾಲೆ ಮರದಲ್ಲಿ ಕೂಡಿಕೊಳ್ಳುತ್ತವೆ.
- ಬೆತ್ತಲೆಯಾಗಿ ಹೋಗಿ ತೊಗಟೆಯನ್ನು ತೆಗೆದರೆ ಮಾತ್ರ ತೊಗಟೆಯಲ್ಲಿ ಮದ್ದಿನ ಅಂಶಗಳಿರುತ್ತವೆ.
- 'ಬೊಲ್ಲ್‌ಕಲ್ಲ್' (ಬಿಳಿಕಲ್ಲಿ) ನಿಂದ ಜಜ್ಜಿ ಇಲ್ಲವೆ ಹಲ್ಲಿನಿಂದ ಕಚ್ಚಿ ತೊಗಟೆಯನ್ನು ತೆಗೆಯಬೇಕು.
- ಕತ್ತಿ ಅಥವಾ ಕಬ್ಬಿಣದ ಸಾಧನವನ್ನು ಈ ಕೆಲಸಕ್ಕೆ ಉಪಯೋಗಿಸಬಾರದು. ಒಂದು ವೇಳೆ ಉಪಯೋಗಿಸಿದರೆ ಮದ್ದು ವಿಷವಾಗುವುದು.

- ಬೆಣಚು ಕಲ್ಲೊಂದನ್ನು ಕೆಂಡದಲ್ಲಿ ಬಿಸಿ ಮಾಡಿ 'ಪಾಲೆ'(ಹಾಲೆ)ರಸಕ್ಕೆ ಮುಳುಗಿಸಿ ಕುಡಿಯಬೇಕು.
- ಅಮಾವಾಸ್ಯೆಯ ಮೊದಲ ದಿನವೇ 'ಪಾಲೆ'(ಹಾಲೆ)ಮರದ ಬಳಿ ಹೋಗಿ ಅದರ ಬುಡದಲ್ಲಿ 'ವೀಳ್ಯ-ತಾಂಬೂಲ' ಇಟ್ಟು, ಮರದ ಕಾಂಡಕ್ಕೆ ಒಂದು 'ನೂಲು' ಕಟ್ಟಿ. ಮರುದಿನ ಬೆಳಿಗ್ಗೆ ತಾನು ಬರುವಾಗ ತನಗೆ ಮದ್ದು ಕೊಡುವಂತೆ ಪ್ರಾರ್ಥಿಸಿ ಬರಬೇಕು.
- ಯಾರೂ ನೋಡದಂತೆ ಜನ ಏಳುವ ಮೊದಲೇ ಮದ್ದನ್ನು ಸಂಗ್ರಹಿಸಬೇಕು- ಇತ್ಯಾದಿ.

'ಪಾಲೆ'(ಹಾಲೆ)ಮರಕ್ಕೆ ಮೊದಲದಿನ ಸಂಜೆಯೇ ಹೋಗಿ 'ವೀಳ್ಯ-ತಾಂಬೂಲ'ವಿಟ್ಟು, 'ನೂಲು'ಕಟ್ಟಿ ಬರುವ ಬಗ್ಗೆ ಜನಪದರು ಅದನ್ನು 'ಮೂಲಿಗೆ' ಎನ್ನುತ್ತಾರೆ. ಆದರೆ ವಾಸ್ತವವಾಗಿ ಅದು ಮರುದಿನ ಬೆಳಗಾಗುವುದರೊಳಗೆ ಆ ಮರದ ತೊಗಟೆ ತರಲು ಹೋಗುವುದರಿಂದ ಅದರ ಗುರುತು ಹಿಡಿಯಲು ಸಹಾಯವಾಗಲೆಂದು ಈ ರೀತಿ 'ನೂಲು'ಕಟ್ಟುವ ಕ್ರಮ ಬಂದಿರಬೇಕು. ಹಾಗೆಯೇ ತೊಗಟೆ ತರಲು ಬೆತ್ತಲೆಯಾಗಿಯೇ ಹೋಗಬೇಕೆಂಬುದು ಜನಪದರ ನಂಬಿಕೆ. ಇಲ್ಲವಾದಲ್ಲಿ ಅದರಲ್ಲಿ ಮದ್ದಿನಾಂಶವು ಇರುವುದಿಲ್ಲವೆಂದು ಹೇಳಲಾಗುತ್ತದೆ. ಈ ರೀತಿಯ ನಗ್ನತೆಗೆ ಸಂಬಂಧಿಸಿದಂತೆ ಪ್ರಪಂಚದಾದ್ಯಂತ ಬಹಳಷ್ಟು ನಂಬಿಕೆ ಆಚರಣೆಗಳು ಇರುವುದು ಕಂಡುಬರುತ್ತದೆ. ಅಂದರೆ ಮುಖ್ಯವಾಗಿ ನಗ್ನತೆಗೆ ದುಷ್ಟಶಕ್ತಿಗಳು ಹೆದರುತ್ತವೆ ಎಂಬ ಬಲವಾದ ನಂಬಿಕೆ ಜನಪದರಲ್ಲಿದೆ. ಈ ಹಿನ್ನೆಲೆಯಲ್ಲಿ 'ಆಟಿ ಅಮಾವಾಸ್ಯೆ' ದಿನ ಮುಂಜಾನೆ ಬೆಳಕು ಮೂಡುವುದರೊಳಗೆ ಕಾಡಿಗೆ ಹೋಗುವಾಗ ಮಾಯೆಯಲ್ಲಿರುವ ದುಷ್ಟಶಕ್ತಿಗಳಿಂದ ತಮ್ಮನ್ನು ರಕ್ಷಿಸಿಕೊಳ್ಳುವ ನೆಲೆಯಲ್ಲಿ ಈ ಕ್ರಮ ಹುಟ್ಟಿಕೊಂಡಿರಬೇಕೆಂದು ಹೇಳಬಹುದು. ಅದೂ ಅಮಾವಾಸ್ಯೆ ದಿನಗಳಲ್ಲಿ ಭೂತ ಪಿಶಾಚಿಗಳು ಹೆಚ್ಚಾಗಿ ಓಡಾಡುತ್ತವೆ ಎಂಬ ನಂಬಿಕೆ ತುಳುನಾಡಲ್ಲಿ ಹೆಚ್ಚಾಗಿರುವುದು ಇದನ್ನು ಇನ್ನಷ್ಟು ಪುಷ್ಟೀಕರಿಸುತ್ತದೆ.

ಈ ಹಿನ್ನೆಲೆಯಲ್ಲಿ ನಗ್ನತೆಗೆ ಸಂಬಂಧಪಟ್ಟಂತೆ ಕನ್ನಡ ಜಾನಪದ ವಿಶ್ವಕೋಶದಲ್ಲಿ ನೀಡಿರುವ ವಿವರಣೆಯನ್ನು ವಿಶೇಷವಾಗಿ ಇಲ್ಲಿ ಗಮನಿಸಬಹುದು.

"ಮಳೆಯನ್ನು ಬರಿಸುವ ಇಲ್ಲವೆ ನಿಲ್ಲಿಸುವ ಸಮಾರಂಭಗಳಲ್ಲಿ ಅಥವಾ ದುಷ್ಟಶಕ್ತಿಗಳನ್ನು ಹೆದರಿಸುವಲ್ಲಿ ಸಾಮಾನ್ಯವಾಗಿ ನಗ್ನತೆ ಬಹುಮುಖ್ಯವಾಗುತ್ತದೆ. ಒಬ್ಬ ಹೆಂಗಸು

ತನ್ನ ಬಟ್ಟೆಗಳನ್ನು ಬಿಚ್ಚಿ ಬಿರುಗಾಳಿಯನ್ನು ತಡೆಯಬಹುದು ಎಂದು ಪ್ಲಿನಿ ವರದಿ ಮಾಡುತ್ತಾನೆ. ಕೆಲವು ಮೊರಕ್ಕಾನ್ ಬುಡಕಟ್ಟುಗಳಲ್ಲಿ ಹೆಂಗಸರು ನಿರ್ಜನ ಪ್ರದೇಶದಲ್ಲಿ ಬಟ್ಟೆಗಳನ್ನು ಕಳಚಿ ಮಳೆ ಬರಿಸುವುದಕ್ಕಾಗಿ ಚೆಂಡಾಟವನ್ನಾಡುತ್ತಾರೆ. ದಕ್ಷಿಣ ಭಾರತದಲ್ಲಿ ಮಳೆಯನ್ನು ನಿಲ್ಲಿಸುವುದಕ್ಕಾಗಿ ಗಂಡಸರು ಏರಿಯ ಮೇಲೆ ನಗ್ನರಾಗಿ ನಿಂತು ನಗಾರಿಗಳನ್ನು ಬಡಿಯುತ್ತಾರೆ. ಭಾರತದಲ್ಲಿ ಮಳೆಗೆ ಸಂಬಂಧಿಸಿದ ಇನ್ನೂ ಕೆಲವು ಸಮಾರಂಭಗಳಲ್ಲಿ ಹೆಂಗಸರು ನಗ್ನರಾಗಿ, ಬಾವಿಗಳ ಬಳಿ ಅಥವಾ ಕೂಡು ಹಾದಿಗಳ ಬಳಿ ಕೆಲವು ಧಾರ್ಮಿಕ ವಿಧಿಗಳನ್ನು ನಡೆಸುತ್ತಾರೆ. ಭೂತಗಳು ಎಷ್ಟೋವೇಳೆ ಸಭ್ಯವಾಗಿದ್ದು ನಗ್ನ ದೇಹವನ್ನು ಕಂಡರೆ ಹೆದರಿಕೊಳ್ಳುತ್ತವೆ. ಟ್ರಾನ್ಸಿಲ್ವೇನಿಯಾ ರೈತರು ಸೂರ್ಯೋದಯಕ್ಕೆ ಮೊದಲು ತಮ್ಮ ಹೊಲಗಳಲ್ಲಿ ನಗ್ನರಾಗಿ ನಡೆಯುತ್ತಾ ಗಂಧಕವನ್ನು ಉರಿಸಿ, ಧಾನ್ಯದ ಒಂದು ತೆನೆಯನ್ನು ಬಾಯಲ್ಲಿ ಕಚ್ಚಿಕೊಂಡು ಮಾತಾಡದೆ ಮನೆಗೆ ತೆರಳುವುದರ ಮೂಲಕ ಪಕ್ಷಿಗಳು ಹೊಲಗಳನ್ನು ಧ್ವಂಸಮಾಡುವುದನ್ನು ತಡೆಯುತ್ತಾರೆ. ಇತರೆಡೆಗಳಲ್ಲಿ ಹೆಂಗಸರು ಇಂಥದೇ ವಿಧಿಗಳನ್ನು ಆಚರಿಸುತ್ತಾರೆ. ಫಿಲಿಪಿನ್ಸ್‌ನ ಟ್ಯಗಲಾಗ್‌ಗಳು ದುಷ್ಟಶಕ್ತಿಗಳನ್ನು ಹೆದರಿಸುವುದು ಈ ರೀತಿ: ಹೆಂಡತಿ ಬಾಣಂತಿತನದಲ್ಲಿರುವಾಗ ಆಕೆಯ ಗಂಡ ಕತ್ತಿ ಹಾಗೂ ಗುರಾಣಿಗಳನ್ನು ಹಿಡಿದು ಮನೆಯ ಛಾವಣಿಯ ಮೇಲೆ ನಗ್ನನಾಗಿ ನಿಲ್ಲುತ್ತಾನೆ. ಆತನ ಸ್ನೇಹಿತರು ನಗ್ನರಾಗಿ ಅಣಕು ಯುದ್ಧದಲ್ಲಿ ತೊಡಗುತ್ತಾರೆ.

ತಾನು ಗಂಡುವೇಷದಲ್ಲಿರುವ ಹೆಂಗಸು ಎಂಬುದನ್ನು ಶತ್ರುಗಳಿಗೆ ತಿಳಿಸುವುದಕ್ಕಾಗಿ ನಗ್ನಳಾಗಿ ನಿಲ್ಲುವ ಸಾಹಸಿ ಹುಡುಗಿಯ ಕಥೆ ಪ್ಯೂಬ್ಲೊ ಇಂಡಿಯನ್ನರಲ್ಲಿ ಪ್ರಚಲಿತವಿದೆ. ದುಷ್ಟಶಕ್ತಿಗಳು ನಗ್ನತೆಗೆ ಹೆದರುತ್ತವೆ ಎಂಬ ನಂಬಿಕೆ ಈ ಕಥೆಯನ್ನು ಸಂಬಂಧಿಸಬಹುದು"[೫] ಎಂಬ ಈ ವಿಶ್ಲೇಷಣೆ ಸ್ವಾರಸ್ಯಕರವಾಗಿದೆ. ಈ ಮೂಲಕ 'ಆಟಿ ಅಮಾವಾಸ್ಯೆ' ದಿನ ಬೆಳಿಗ್ಗೆ 'ಪಾಲೆ'(ಹಾಲೆ)ಮರದ ತೊಗಟೆ ತರಲು ಹೋಗುವ ವ್ಯಕ್ತಿ ಬೆತ್ತಲೆಯಾಗಿ ಹೋಗುವುದರ ಔಚಿತ್ಯವನ್ನು ಅರ್ಥಮಾಡಿಕೊಳ್ಳಬಹುದು. ಹಾಗೆಯೇ ಇಷ್ಟಾರ್ಥ ಸಿದ್ಧಿಗಾಗಿ 'ಬೆತ್ತಲ ಸೇವೆ' ಆಚರಣೆಗಳನ್ನು ಮಾಡುವುದು ಸಮಾಜದಲ್ಲಿ ಕಂಡುಬರುತ್ತದೆ. ಉದಾಹರಣೆಗೆ ಶಿವಮೊಗ್ಗ ಜಿಲ್ಲೆಯ ಸೊರಬ ತಾಲೂಕಿನ ಚಂದ್ರಗುತ್ತಿಯ ರೇಣುಕಾಂಬೆಗೆ ಪ್ರತಿವರ್ಷ ಶಿವರಾತ್ರಿ ಮುಗಿದು ಒಂಬತ್ತನೇ ದಿನ ಅಸಂಖ್ಯಾತ ಭಕ್ತರು 'ಬೆತ್ತಲ ಸೇವೆ' ಸಲ್ಲಿಸುವುದು ರೂಢಿಯಲ್ಲಿದೆಯೆಂದು ಹೇಳಲಾಗುತ್ತದೆ.[೬] ಇನ್ನು 'ಪಾಲೆ'(ಹಾಲೆ)ರಸಕ್ಕೆ ಬೆಣಚು ಕಲ್ಲನ್ನು ಬಿಸಿಮಾಡಿ ಒಗ್ಗರಣೆ ಕೊಡುವ ವಿಚಾರವನ್ನು ಪರಿಶೀಲಿಸಿದಾಗ ತಿಳಿಯುವುದೇನೆಂದರೆ, ಹಾಗೆ ಮಾಡುವುದರಿಂದ ಆ

ಹಸಿ ಹಸಿ ಹಾಲೆರಸದಲ್ಲಿ ಇರಬಹುದಾದ ರೋಗಕಾರಕ ಬ್ಯಾಕ್ಟೀರಿಯಾಗಳು ನಾಶವಾಗುತ್ತವೆ. ಅಂದರೆ ಬೆಣಚು ಕಲ್ಲಿನಲ್ಲಿ ವಿಶೇಷವಾಗಿ ರೋಗನಿರೋಧಕ ಗುಣವಿದೆಯೆಂದು ಹೇಳಲಾಗುತ್ತದೆ.

ಮದ್ದು ಕುಡಿಯುವ ಬಗ್ಗೆ ಜನಪದರು ನೀಡುವ ವಿವರಣೆಯನ್ನು ವಿದ್ವಾಂಸರು ಈ ರೀತಿ ವಿಶ್ಲೇಷಿಸುತ್ತಾರೆ–"ತುಳುವರ ಕಾಲಗಣನೆ ಪ್ರಕಾರ ಮೊದಲ ಎರಡು ತಿಂಗಳು ಬೇಷ, ಕಾರ್ತೆಲ್ (ಮೇ–ಜೂನ್, ಜೂನ್–ಜುಲೈ) ಮಳೆಗಾಲದ ಆರಂಭದ ತಿಂಗಳುಗಳಾಗಿದ್ದು, ಈ ಕಾಲದಲ್ಲಿ ಗದ್ದೆಗಳಲ್ಲಿ ಬೇಸಾಯದ ಕೆಲಸ ಆರಂಭಗೊಂಡಿರುತ್ತದೆ. ಬೀಜ ಬಿತ್ತುವ ಮತ್ತು ನೆಡುವ ಕೆಲಸ ನಡೆಯುತ್ತಿರುತ್ತವೆ. ಭತ್ತದ ಸಸಿಗಳನ್ನು ನೆಡುವ ಸಮಯದಲ್ಲಿ ಗದ್ದೆಯ ನೀರಲ್ಲಿ ನಿಂತು ಮಳೆಯಲ್ಲಿ ನೆನೆಯುತ್ತಾ ಬಿಡುವಿರದೆ ಕೆಲಸ ಮಾಡುತ್ತಿರುತ್ತಾರೆ. ಆ ಹೊತ್ತಲ್ಲಿ ಹೆಚ್ಚಾಗಿ ಹುರಿದ ಹುಣಸೆ ಬೀಜಗಳನ್ನು ತಿನ್ನುತ್ತಿರುತ್ತಾರೆ. ಈ ಕಾರಣದಿಂದ ಹೊಟ್ಟೆಯಲ್ಲಿ ಹುಳಬಾಧೆ ಕಾಣಿಸಿಕೊಳ್ಳುತ್ತದೆ. ಇದನ್ನು ತಡೆಯುವುದಕ್ಕಾಗಿ ಅಮಾವಾಸ್ಯೆಯ ದಿನದಂದು ಹಾಲೆಮರದ ರಸವನ್ನು ಕುಡಿಯಬೇಕು.

ಜನಪದ ವೈದ್ಯ ವಿಧಾನದಲ್ಲಿ ಹಾಲೆಮರದ ತೊಗಟೆ ರಸವನ್ನು ಹುಳಬಾಧೆಗೆ ಮದ್ದಾಗಿ ಕೊಡುವ ಉದಾಹರಣೆಗಳಿಲ್ಲ. ಆದರೆ ಈ ರಸದಲ್ಲಿ ಔಷಧಿಯ ಅಂಶಗಳು ಅದರಲ್ಲೂ ಮುಖ್ಯವಾಗಿ ಹುಳಬಾಧೆಯನ್ನು ತಡೆಯುವ ಔಷಧಿಯ ಅಂಶಗಳಿವೆಯೆಂದು ಗುರುತಿಸಲಾಗಿದೆ"[2] ಎನ್ನುವ ಮಾತಲ್ಲಿ 'ಪಾಲೆ' (ಹಾಲೆ) ಮರದಲ್ಲಿ ಪ್ರಾಕೃತಿಕ ಔಷಧೀಯ ಗುಣಗಳಿರುವುದನ್ನು ಗಮನಿಸಬೇಕು. 'ಪಾಲೆ' (ಹಾಲೆ) ಮರವು ಹಾಲು ಸುರಿಸುವ ಮರವೆಂದೂ, ಔಷಧೀಯ ಮರವೆಂದೂ ಜನಪದ ಗ್ರಹಿಸಿರುವುದರಿಂದ ಉತ್ಪಾದನೆಗೆ ಸಂಬಂಧಪಟ್ಟ ಕೆಲವೊಂದು ಕಾರ್ಯಾಚರಣೆಗಳಲ್ಲಿ 'ಪಾಲೆ' (ಹಾಲೆ)ಮರ ಸಮೃದ್ಧಿಯ ಸಂಕೇತವಾಗಿ ತುಳುವ ಸಂಸ್ಕೃತಿಯಲ್ಲಿ ಕಾಣಿಸಿಕೊಳ್ಳುವುದನ್ನು ಗಮನಿಸಬಹುದು. 'ಬಂಟ' ಹಾಗೂ 'ಮುಗೇರ' ಎನ್ನುವ ಕೆಳವರ್ಗದ ಜಾತಿಯಲ್ಲಿ ಮದುವೆ ನಡೆಯುವಾಗ ಗಂಡಿನ ಮನೆಯಲ್ಲಿ ಮುಹೂರ್ತ 'ಕಂಬ' ಅಥವಾ 'ಕನ್ಯಾಕಂಬ'ವನ್ನು ಮನೆಯ ಅಂಗಳದಲ್ಲಿ ನೆಟ್ಟಿರುತ್ತಾರೆ. ಹೆಚ್ಚಾಗಿ ಇದಕ್ಕೆ 'ಪಾಲೆ' (ಹಾಲೆ) ಮರವನ್ನೇ ಉಪಯೋಗಿಸುವುದು ಕಂಡುಬರುತ್ತದೆ. ಹಾಲೆಮರದ ಮೋಪನ್ನು ದೇವಾಲಯದ ಮೇಲ್ಭಾಗದ ರಚನೆಗೆ ಅಗತ್ಯವಾಗಿ ಬಳಸುತ್ತಾರೆ. ಮೀನುಗಾರರು ಬಲೆಗೆ ತೇಲುವ ಆಧಾರವಾಗಿ ಈ ಮರದ ತುಂಡುಗಳನ್ನು ಬಳಸುತ್ತಿದ್ದರಂತೆ. ಈ ಮರದಲ್ಲಿ ಹೂವು ಅರಳಿದಾಗ ಇದರ ಪರಿಮಳದಿಂದ ಪರಿಸರದ ಜನರಿಗೆ ಶೀತಬಾಧೆ ಸಹಜವಾಗಿ ಉಂಟಾಗುತ್ತದೆ.

ಮುಖ್ಯವಾಗಿ 'ದೀಪಾವಳಿ' ಹಬ್ಬದ ಸಮಯದಲ್ಲಿ 'ಬಲಿಪಾಡ್ಯಮಿ'ಯಂದು ಭೂಮಿಪುತ್ರ 'ಬಲಿಯೇಂದ್ರ'ನನ್ನು ಭೂಮಿಗೆ ಬರಮಾಡಿಕೊಳ್ಳುವ ಕ್ರಿಯಾಚರಣೆಯಲ್ಲಿ ಅಂಗಳದಲ್ಲಿ 'ಪಾಲೆ'(ಹಾಲೆ) ಮರವನ್ನು ನೆಟ್ಟು ಆ ಮೂಲಕ ಅಲ್ಲಿ 'ಬಲಿಯೇಂದ್ರ'ನನ್ನು ಪೂಜಿಸುವುದು ವಿಶಿಷ್ಟವಾಗಿದೆ. ಅಲ್ಲಿ ಈ 'ಪಾಲೆ'(ಹಾಲೆ)ಮರವನ್ನು 'ಬಿಲಕ್ಕಿ' ಮರವೆಂದು ಕರೆಯುತ್ತಾರೆ. (ವಿವರಣೆ ಪರ್ಬ ಆಚರಣೆಯಲ್ಲಿದೆ.) ಈ 'ಪಾಲೆ' (ಹಾಲೆ)ಮರವನ್ನು 'ಬಲಿಯೇಂದ್ರ' ಎಂದೂ ಕರೆಯುತ್ತಾರೆ ಎಂದು ವಿದ್ವಾಂಸರು ಹೇಳುತ್ತಾರೆ.[೮] ಸುಗ್ಗಿ ಬೆಳೆಯ ಹೊತ್ತಿಗೆ ನಡೆಯುವ ಈ ಕ್ರಿಯಾಚರಣೆಯಲ್ಲಿ 'ಹಾಲಿನಮರ' ಎಂದು ಗುರುತಿಸುವ 'ಪಾಲೆ' (ಹಾಲೆ)ಮರ ಸಮೃದ್ಧಿಯ ಸಂಕೇತವಾಗುತ್ತದೆ. ಹಾಲು ಸುರಿಸುವ ಕಾರಣದಿಂದ ಸಮೃದ್ಧಿಯ ಅರ್ಥದಲ್ಲಿ ಸಂಸ್ಕೃತಿಯ ಗ್ರಹಿಕೆಯಲ್ಲಿ ಈ ಮರ ವಿಶಿಷ್ಟವಾಗುತ್ತದೆ. ಈ ಹಿನ್ನೆಲೆಯಲ್ಲಿ ವಿದ್ವಾಂಸರು ನೀಡುವ ಈ ತಾತ್ವಿಕ ವಿಶ್ಲೇಷಣೆಯನ್ನು ವಿಶೇಷವಾಗಿ ಲಕ್ಷಿಸಬಹುದು. "ಆರೋಗ್ಯ ಸಂರಕ್ಷಣೆಯ ಮದ್ದು ಕುಡಿಯುವ ಕ್ರಿಯಾಚರಣೆಯಲ್ಲಿ ಆಟಿ ಅಮಾವಾಸ್ಯೆಯ ಕತ್ತಲೆ ಕಳೆದು ಬೆಳಕು ಮೂಡುವ ಸಂಧಿಕಾಲದಲ್ಲಿ ಈ ಮರ ಅಸಾಮಾನ್ಯವಾಗುತ್ತದೆ. ಮಾಂತ್ರಿಕ ಶಕ್ತಿಯನ್ನು ಒದಗಿಸುತ್ತದೆ. ಈ ಬಗೆಯ ಮಾಂತ್ರಿಕ ಪರಿವರ್ತನೆಗೆ ನಿಸರ್ಗದ ವಿಶಿಷ್ಟಾಂಶಗಳು ಕಾರಣವಾಗುತ್ತವೆ"[೯] ಎಂಬ ಮಾತನ್ನು ನಿಸರ್ಗ ನಿಯಮದ ದೃಷ್ಟಿಯಿಂದ ಮತ್ತು ಜನಪದರ ನಂಬಿಕೆಯ ದೃಷ್ಟಿಯಿಂದ ನೋಡಬಹುದು.

ಒಟ್ಟಿನಲ್ಲಿ ಸಂಸ್ಕೃತದಲ್ಲಿ 'ಸಪ್ತಪರ್ಣಿ' ಎಂದು ಕರೆಯಲಾಗುವ 'ಪಾಲೆ'(ಹಾಲೆ)ಮರ ತುಳುನಾಡಿಗೆ ಸಂಬಂಧಿಸಿದಂತೆ ಧಾರ್ಮಿಕ ಪಾವಿತ್ರ್ಯವುಳ್ಳ ಮತ್ತು ಔಷಧೀಯ ಗುಣದ ಮರವಾಗಿದೆ. ಇದನ್ನು ಕಾಲ ಮತ್ತು ದೇಶದ ಸಂದರ್ಭದಲ್ಲಿಟ್ಟು ವಿದ್ವಾಂಸರುಗಳು ವಿಶ್ಲೇಷಿಸಿರುವುದು ಸಮಂಜಸವಾಗಿದೆ. ಔಷಧೀಯ ಗುಣವನ್ನು ಹೊಂದಿರುವ ಈ ಮರವನ್ನು ಸಸ್ಯಶಾಸ್ತ್ರಜ್ಞರು 'ಅಲ್‌ಸ್ಟೋನಿಯಾ ಸ್ಕಾಲರೀಸ್' ಎಂದು ಹೆಸರಿಸಿದ್ದಾರೆ.

ಡಾ. ರಾಜಶ್ರೀಯವರು ಆಟಿ ತಿಂಗಳು ಅನಿಷ್ಟದ ತಿಂಗಳು; ಪ್ರಾಣಿ, ಪಕ್ಷಿ, ಮನುಷ್ಯರಿಗೆ ರೋಗ ಬಾಧೆ ತಟ್ಟುತ್ತದೆ ಎಂಬ ವಿಷಯಕ್ಕೆ ಪೂರಕವಾಗಿ 'ಆಟಿಕಳೆಂಜ'ನ ಹಾಡಿನ ಸಾಲುಗಳನ್ನು ಉಲ್ಲೇಖಿಸಿ ತಮ್ಮ ಅಭಿಪ್ರಾಯವನ್ನು ಈ ರೀತಿ ವ್ಯಕ್ತಪಡಿಸಿದ್ದಾರೆ. "ಆನೆಯ ರೋಗವನ್ನು ಜೈನೆ ಮರದ ಗರಿಯಲ್ಲಿ ಪರಿಹರಿಸು, ಎಮ್ಮೆಯ ರೋಗವನ್ನು ಪಳ್ಳದಲ್ಲಿ ಪರಿಹರಿಸು, ಗೋವಿನ ರೋಗವನ್ನು ಹುಲ್ಲಿನಲ್ಲಿ ಪರಿಹರಿಸು, ನಾಯಿಯ ರೋಗವನ್ನು ಬೂದಿಯಲ್ಲಿ ಪರಿಹರಿಸು, ಬೆಕ್ಕಿನ ರೋಗವನ್ನು ಹಾಲಿನಲ್ಲಿ ಪರಿಹರಿಸು, ಕೋಳಿಯ ರೋಗವನ್ನು ಗೂಟದಲ್ಲಿ ಪರಿಹರಿಸು, ಹಂದಿಯ ರೋಗವನ್ನು 'ತೌಡಿ'ನಲ್ಲಿ ಪರಿಹರಿಸು,

ಮನುಷ್ಯ ರೋಗವಾದರೆ ಅನ್ನದಲ್ಲಿ ಪರಿಹರಿಸು, ಮಂಡೆಮಾರಿಯಾದರೆ ಮೂಡುದಿಕ್ಕಿನಲ್ಲಿ ಪರಿಹರಿಸು, ಕುಂಟೆ ರೋಗವಾದರೆ ಪಡುವಣದಲ್ಲಿ ಪರಿಹರಿಸು', ಎಂಬ ಹಾಡಿನ ಸಾಲುಗಳನ್ನು ಗಮನಿಸಿದಾಗ ಇಲ್ಲಿ ವಿವಿಧ ಪ್ರಾಣಿ ಪಕ್ಷಿಗಳಿಗೆ ಇಷ್ಟವಾದ ಆಹಾರದ ಮೂಲಕ ಅವುಗಳ ರೋಗವನ್ನು ಗುಣಪಡಿಸುವ ವಿಚಾರ ಬರುತ್ತದೆ. ಆಯಾ ಪ್ರಾಣಿಗಳಿಗೆ ಇಷ್ಟವಾದ ಆಹಾರ ವಸ್ತುಗಳ ಪೂರೈಕೆಯಿಂದ ಅವುಗಳ ರೋಗ ಪರಿಹಾರ ಸಾಧ್ಯ ಎಂಬ ಆಶಯ ವ್ಯಕ್ತವಾಗಿದೆ"[೧೦] ಎಂದು ಹೇಳುತ್ತಾರೆ. ಇಲ್ಲಿಯೂ ಜನಪದರು ತಮಗೆ ಪ್ರಕೃತಿ ಸಹಜವಾದ ಕಾಲ ವ್ಯತ್ಯಯದಿಂದ ರೋಗಬಾಧೆ ಮೊದಲಾದ ತೊಂದರೆಗಳಿಗೆ ಪ್ರಕೃತಿಯ ಗರ್ಭದಿಂದಲೇ ಔಷಧಿಗಳನ್ನು ಕಂಡುಕೊಳ್ಳುವುದು ವೇದ್ಯವಾಗುತ್ತದೆ.

ಈ ಹಿನ್ನೆಲೆಯಲ್ಲಿ "ವರ್ಷಕ್ಕೊಮ್ಮೆ ಹೀಗೆ ಈ ಮದ್ದಿನ ಸೇವನೆ ಮಾಡುವುದು ಇದು ಒಂದು ವಿಧದ ಪ್ರಕೃತಿ ಚಿಕಿತ್ಸೆಯೂ ಹೌದು. ರೋಗ ನಿರೋಧಕ ಶಕ್ತಿಯನ್ನು ಹೆಚ್ಚಿಸುವುದಕ್ಕೆ, ಮುಂದಿನ ತಿಂಗಳು ಆಚರಿಸಲ್ಪಡುವ ಹಬ್ಬದ ವಿಶೇಷ ಅಡುಗೆ ತಿಂಡಿ ಪದಾರ್ಥ ಸೇವಿಸಿ ಜೀರ್ಣಿಸಿಕೊಳ್ಳುವುದಕ್ಕೆ ಬೇಕಾದ ಸಿದ್ಧತೆಯೂ ಹೌದು"[೧೧] ಎಂದು ವಾಮನ ನಂದಾವರ ಅವರು ಹೇಳುವ ಮಾತಿನಲ್ಲಿ ಸತ್ಯಾಂಶವಿದೆ. ಅಂದರೆ 'ಆಟಿ' ತಿಂಗಳು ಕಳೆದ ಮೇಲೆ ಬರುವ ತಿಂಗಳು 'ಸೋಣ'. ಮಳೆಗಾಲದ ಋತು ಕಳೆದು ಹೊಸದಾಗಿ ಬೆಳಕು ಚೆಲ್ಲುವ, ಬೆಳೆ ಬರುವ ಸಮಯವಾದ್ದರಿಂದ, ಈ ಹಿನ್ನೆಲೆಯಲ್ಲಿ 'ಸೋಣ' ಹೊಸ ತಿಂಗಳು ಮತ್ತು 'ಕುರಲ್‌ಪರ್ಬ', 'ಪುದ್ವಾರ್' ಇತ್ಯಾದಿ ಹಬ್ಬಹರಿದಿನ-ಆಚರಣೆಗಳು ಪ್ರಾರಂಭವಾಗುತ್ತವೆ. ಈ ನಿಟ್ಟಿನಲ್ಲಿ ವಿದ್ವಾಂಸರ ತರ್ಕ ವಿಚಾರಣೀಯವಾಗಿದೆ.

"ಗಂಜಿಗೆ ಅಕ್ಕಿಯಿಲ್ಲ. ಆದರೆ ಹೊಟ್ಟೆ ತುಂಬಿಸಲು ಆ ಹೊತ್ತಿಗೆ ಕಾಡಿನ ಸಂಪತ್ತು ಧಾರಾಳ ಇರುತ್ತದೆ. ಗುಡ್ಡಕ್ಕೆ ಹೋಗಿ ನರೆ, ಈಯೆರ್ ಗೆಡ್ಡೆ ತೆಗೆದು ತಂದು ಬೇಯಿಸಿ ತಿನ್ನುತ್ತಿದ್ದರು. ಕಾಡಿಗೆ ಹೋಗಿ ಕಣಿಲೆ ತಂದು ಪದಾರ್ಥ ಮಾಡುತ್ತಿದ್ದರು. ಅಡ್ಡಬಾರೆ, ಎದ್ರೋಳಿ ಕಾಯಿ, ಧಾರಾಳ ಸಿಗುತ್ತಿತ್ತು. ಅವುಗಳನ್ನು ಬೇಯಿಸಿ ಉಪ್ಪುಕರಿ ಮಾಡುತ್ತಿದ್ದರು. ತಜಂಕ್ ಕೊಯ್ದು ಪಲ್ಯ ಮತ್ತು ಅಡ್ಯೆ ಮಾಡುತ್ತಿದ್ದರು. ಕೆಸುವಿನ ಎಲೆಯ ಪತ್ರೊಡೆ ಮಾಡುತ್ತಿದ್ದರು. ಆ ಕಾಲಕ್ಕೆ ಅಲ್ಲಲ್ಲಿ ಅಣಬೆ ಏಳುತ್ತಿದ್ದವು. ಅಣಬೆಯ ಪದಾರ್ಥ ಬಹಳ ರುಚಿ. ಆಟಿಯಲ್ಲಿ ತಿಮರೆ ತಿನ್ನುವ ಕ್ರಮವಿಲ್ಲ. ಆಗ ಅದು ಕಹಿ ಆಗಿರುತ್ತದೆಯೆಂದು ಜನರ ನಂಬಿಕೆ. ಕಾಡಿನಲ್ಲಿ ಆಟಿ ಸೊಪ್ಪು ಸಿಗುತ್ತದೆ. ಅಕ್ಕಿಯ ಪಾಯಸಕ್ಕೆ ಆಟಿ ಸೊಪ್ಪು ಹಾಕಿದರೆ ಬಹಳ ರುಚಿ. ಏನೂ ಸಿಗದಿದ್ದರೆ ಮನೆಯಲ್ಲಿ ಹಲಸಿನ ಬೀಜ ಇರುತ್ತದೆ. ಬೇಸಿಗೆಯಲ್ಲಿ ತೆಗೆದಿಟ್ಟ ಗೇರುಬೀಜ

ಇರುತ್ತದೆ. ಅವುಗಳನ್ನು ಬೆಂಕಿಯಲ್ಲಿ ಬೇಯಿಸಿ ತಿನ್ನುತ್ತಿದ್ದರು. ಹೀಗೆ ಹೊಟ್ಟೆ ತುಂಬಿಸಿಕೊಳ್ಳುತ್ತಿದ್ದರು. ಹೀಗೆ ಹಸಿವಿಗೂ ಆಗುತ್ತದೆ, ಮದ್ದಿಗೂ ಆಗುತ್ತದೆ ಎನ್ನುವ ನೆಲೆಯಲ್ಲಿ ಕಾಡು ಸಂಪತ್ತಿನ ಬಳಕೆ ಆಗುತ್ತಿತ್ತು"[೧೨] ಎಂಬುದಾಗಿ ವಿದ್ವಾಂಸರು ನೀಡುವ ವಿವರಗಳಲ್ಲಿ ತುಳುಜನಪದ, ಆಟಿತಿಂಗಳು ಮತ್ತು ಪ್ರಕೃತಿ ಇವುಗಳ ನಡುವಿನ ಆಂತರಿಕ ಸಂಬಂಧ ತೆರೆದುಕೊಳ್ಳುತ್ತದೆ.

ಈ ಮಾತಿಗೆ ಪೂರಕವಾಗಿ "ತುಳುನಾಡಿನ ಹಿಂದಿನ ಜನರು ಆಹಾರದಲ್ಲಿಯೇ ಮದ್ದುಗಳನ್ನು ಪಡೆಯುತ್ತಿದ್ದರು. ಅವರು ಪ್ರಕೃತಿಯ ಆರಾಧಕರು. ಯಾವ ವಸ್ತುಗಳಲ್ಲಿ ಯಾವ ಗುಣ ಉಂಟು ಎಂದು ಹೇಳುವ ವಿಚಾರ ಅವರಿಗೆ ಗೊತ್ತಿತ್ತು. ಹುಲ್ಲು ಮದ್ದಿನಲ್ಲಿ, ಪಥ್ಯದಲ್ಲಿ, ಆಹಾರದಲ್ಲಿ ಅವರು ರೋಗಗಳನ್ನು ಗುಣಪಡಿಸುತ್ತಿದ್ದರು. ಅವರಿಗೆ ಮದ್ದು ಮಾಡುವ ವಿಧಾನ ಕೂಡ ಒಂದು ಸಂಸ್ಕೃತಿ. ಆಹಾರ ಪದ್ಧತಿ ಕೂಡ ಒಂದು ಸಂಸ್ಕೃತಿ. ತಿಮರೆ, ಬಾಳೆದಂಡು, ನುಗ್ಗೆ, ಹೊಂಬಾಳೆ, ಕೆಸು, ತಜಂಕ್ ಇವೆಲ್ಲ ಅವರಿಗೆ ಆಹಾರವೂ ಹೌದು; ಔಷಧಿಯೂ ಹೌದು. ಪದಾರ್ಥಕ್ಕೆ ಏನೂ ಇಲ್ಲದ ಹೊತ್ತಿನಲ್ಲಿ ಕಾಡಿನಲ್ಲಿದ್ದ ಕೇಪುಳ, ನೆಕ್ಕರೆ, ಚೀಮುಳ್ಳು, ಸೇರೆ, ಪೇರಳೆ, ಮಾದೇರಿ ಹೀಗೆ ಕೆಲವು ಜಾತಿಯ ಗಿಡಗಳ ಚಿಗುರು ಕೊಯ್ದು ತಂದು ಪಲ್ಯ ಮಾಡುತ್ತಿದ್ದರು. ಇವುಗಳಲ್ಲಿ ಊಟ ಮಾಡಿದರೆ ಹೊಟ್ಟೆ ಶುದ್ಧ ಆಗುತ್ತಿತ್ತು. ಮಕ್ಕಳಿಗೆ ಚಿಗುರು ಮದ್ದು (ಕೊಡಿಮರ್ದ್) ರಸತೆಗೆದು ಕೊಡುತ್ತಿದ್ದರು. ದೊಡ್ಡದಾದ ಮೇಲೂ ಮಗುವಿಗೆ ಕಫ, ಅಸ್ತಮದ ಬಾಧೆ ಬರುತ್ತಿರಲಿಲ್ಲ. ಬಾಣಂತಿಗೆ ಬೇರೆ ಬೇರೆ ರೀತಿಯ ಮದ್ದಿನ ಗಂಜಿ, ಲೇಹ ಮಾಡಿ ಕೊಡುವ ಕ್ರಮ ಇತ್ತು. ಮದ್ದು ಅರೆಯುವುದು, ಅದನ್ನು ಶುದ್ಧ ಮಾಡುವುದು, ಮದ್ದು ಕುಡಿಯುವದು ಇವೆಲ್ಲ ಒಂದು ರೀತಿಯ ಆಚರಣೆಗಳಾಗಿದ್ದವು. ಹೀಗೆ ತುಳುವರಿಗೆ ಮದ್ದು ಮಾಡುವುದು ಕೂಡ ಒಂದು ಸಂಸ್ಕೃತಿಯಾಗಿತ್ತು"[೧೩] ಎಂದು ಇನ್ನೋರ್ವ ವಿದ್ವಾಂಸರು ಹೇಳುವ ವಿಚಾರವನ್ನು ಇಲ್ಲಿ ವಿಶೇಷವಾಗಿ ಲಕ್ಷಿಸಬೇಕು. ತುಳುನಾಡಿನಲ್ಲಿರುವ 'ಪಾಣ'ರ ಜನಾಂಗದವರು 'ಆಟಿ ಅಮಾವಾಸ್ಯೆ' ಆಚರಣೆ ಮಾಡುತ್ತಾರೆ ಎಂದು ಹೇಳುತ್ತಾ ವಿದ್ವಾಂಸರು "ಇದನ್ನು ತುಳುನಾಡಿನಲ್ಲಿ ಎಲ್ಲರೂ ಪಾಲಿಸುತ್ತಾರೆ. ಪಾಣಾರರಂತೂ ಈ ಆಚರಣೆಗೆ ವಿಶೇಷ ಒತ್ತು ನೀಡುತ್ತಾರೆ. ಏಕೆಂದರೆ ಈ ಆಚರಣೆ ಪಾಣರ ವೈದ್ಯ ವೃತ್ತಿಗೆ ಪ್ರಚೋದಕವಾಗಿದೆ. ಪಾಲೆಯ ಮರ ಪಾಣರ ಕುಲ ಲಾಂಛನವಾಗಿದೆ"[೧೪] ಎಂದು ಹೇಳಿದ್ದಾರೆ. ಇದೂ ಪಾಲೆಮರದ ಬಹೂಪಯೋಗಿ ಮತ್ತು ಔಷಧಿ ಗುಣದ ಮಹತ್ವವನ್ನು ಹೇಳಿದಂತಾಯಿತು. ಆದರೆ ತುಳುನಾಡಿನಲ್ಲಿ ಬಹುತೇಕ ಗಿಡಮರಬಳ್ಳಿಗಳು ಒಂದಲ್ಲ ಒಂದು ರೀತಿಯ ಔಷಧೀಯ

ಗುಣಗಳನ್ನು ಹೊಂದಿದ್ದು, ಅವುಗಳನ್ನು ನಿರ್ದಿಷ್ಟ ದಿನದಂದು ಸೇವಿಸಬೇಕೆಂಬ ನಿಯಮ ಎಲ್ಲಿಯೂ ಕಂಡುಬರುವುದಿಲ್ಲ. ಹಾಗೆಯೇ ಔಷಧೀಯ ಗುಣವಿದೆಯೆಂದು 'ಪಾಲೆ' (ಹಾಲೆ) ರಸವನ್ನು 'ಆಟಿ ಅಮಾವಾಸ್ಯೆ' ದಿನವನ್ನು ಹೊರತುಪಡಿಸಿ ಬೇರೆದಿನಗಳಲ್ಲಿ ಸೇವಿಸುವ ಕ್ರಮವೂ ಕಂಡುಬರುವುದಿಲ್ಲ. ಆದ್ದರಿಂದ ಜನಪದರ ನಂಬಿಕೆಯಂತೆ 'ಆಟಿ ಅಮಾವಾಸ್ಯೆ' ದಿನದಂದೇ 'ಪಾಲೆ' (ಹಾಲೆ) ಮರದಲ್ಲಿ ಔಷಧೀಯ ಗುಣಾಂಶಗಳು ಸೇರಿಕೊಳ್ಳುವುದು ಆ ನಿರ್ದಿಷ್ಟ ದಿನದ ಪ್ರಾಕೃತಿಕ ವಿಶಿಷ್ಟತೆಯಾಗಿದೆ. ಇದಕ್ಕೆ ಪೂರಕವಾಗಿ 'ಆಟಿ ಅಮಾವಾಸ್ಯೆ'ಯಂದು ಈ ಮರದಲ್ಲಿ ೩೬೦ ವಿಧದ ಔಷಧೀಯ ಗುಣಗಳು ಸನ್ನಿಹಿತವಾಗುತ್ತವೆ ಎಂದು ಹೇಳಲಾಗುತ್ತದೆ. ಒಟ್ಟಿನಲ್ಲಿ ರೋಗ ನಿರೋಧಕವಾಗಿ ಹಾಲೆಮರದ ರಸವನ್ನು ಒಂದು ನಿರ್ದಿಷ್ಟ ಸಂದರ್ಭದಲ್ಲಿ ಔಷಧಿಯಾಗಿ ಸೇವಿಸುವ ಆಚರಣೆಯು ವಿಶೇಷವಾಗಿ ಗಮನ ಸೆಳೆಯುತ್ತದೆ; ಜೊತೆಗೆ ತುಳುವರ ಬದುಕು ಹೇಗೆ ನಂಬಿಕೆ–ಆಚರಣೆಗಳ ಮೂಲಕ ಸಂಪನ್ನಗೊಂಡಿದೆ ಎಂಬುದನ್ನೂ ಸೂಚಿಸುತ್ತದೆ. 'ಪಾಲೆದ ಕೆತ್ತೆದ ಕೈಪೆಗ್ ಓಲೆಬೆಲ್ಲದ ಚೀಪೆ'(ಹಾಲೆರಸದ ಕಹಿಗೆ ಓಲೆಬೆಲ್ಲದ ಸಿಹಿ) ಎಂಬ ಗಾದೆ ಪ್ರಚಲಿತದಲ್ಲಿದೆ.

**೬.೩.೨: ದಾನಬಿಡುವುದು ಮತ್ತು ತೀರ್ಥಸ್ನಾನ**

'ಆಟಿ ಅಮಾವಾಸ್ಯೆ'ಯ ದಿನ ದಾನ ಬಿಟ್ಟು, ತೀರ್ಥಸ್ನಾನ ಮಾಡುವ ಕ್ರಮ ಅತ್ಯಂತ ಮಹತ್ವದ ಆಚರಣೆಯಾಗಿ ಕಂಡು ಬರುತ್ತದೆ. "ಆಟಿ ಅಮಾವಾಸ್ಯೆಯ ದಿನ ದಾನ ಬಿಡುವ ಕ್ರಮವೂ ಇದೆ. ಅಂದು ಬೆಳಿಗ್ಗೆ ಮದ್ದು ತಂದಿಟ್ಟು ಅನಂತರ ಹೊಳೆಗೆ ದಾನ ಬಿಡಲು ಹೋಗುತ್ತಾರೆ. ಐದು ಬಗೆಯ ಹೂವು, ಮೂರು ಬಗೆಯ ದವಸ ಧಾನ್ಯ, ತೆಂಗಿನಕಾಯಿ, ಐದು ಪೈಸೆ, ಐದು ವೀಳ್ಯದೆಲೆ, ಒಂದು ಅಡಿಕೆ, ಗಂಧ ಹಾಗೂ ಬತ್ತಿ ಮುಂತಾದ ಪರಿಕರಗಳನ್ನು ಸಿದ್ಧಪಡಿಸಿ ಅದನ್ನು ಕದಳೀ ಬಾಳೆಯಲ್ಲಿ ಹಾಕಿ ಬತ್ತಿಯನ್ನು ಉರಿಸಿಟ್ಟು ಗಂಧ ಹಾಕಿಕೊಂಡು, ಎಲ್ಲರೂ ಸಾಲಾಗಿ ನಿಂತು ಕೊಳ್ಳುತ್ತಾರೆ. ಮನೆಯ ಯಜಮಾನ ಎಲೆಯನ್ನು ಕೈಯಲ್ಲಿ ಹಿಡಿದುಕೊಂಡು ಎಲ್ಲರ ತಲೆಗೂ ಮೂರು ಸುತ್ತು ತಂದು ಕೈ ಮುಗಿದು ದಾನ ಬಿಡುತ್ತಾನೆ. ದಾನ ಬಿಟ್ಟದ್ದನ್ನು ಯಾರೂ ಹಿಂದಿರುಗಿ ನೋಡಬಾರದು ಎಂಬ ನಂಬಿಕೆಯಿದೆ. ಮನೆಗೆ ಬರುವಾಗ ದಾರಿಯಲ್ಲಿ ಸಿಕ್ಕಿದ ಫಲ ಮರಗಳಿಗೆ ಪ್ರದಕ್ಷಿಣೆ ಹಾಕುತ್ತಾರೆ. ಅನಂತರ ಆ ದಿನ ಬೆಳಿಗ್ಗೆ ತಂದ ಹಾಲೆ ಮರದ ರಸವನ್ನು ಹಾಗೂ ಬೆಲ್ಲವನ್ನು ಸೇವಿಸುತ್ತಾರೆ".[೧೫] ದಾನ ಬಿಡುವುದು ಮತ್ತು ತೀರ್ಥ ಸ್ನಾನಮಾಡುವುದು ನದಿಯಲ್ಲಿ ಇಲ್ಲವೇ ಹರಿಯುವ ತೋಡಿನಲ್ಲಿ,

ಇಲ್ಲವೇ ಹೊಳೆಯಲ್ಲಿ. ಆಟಿ ತಿಂಗಳಲ್ಲಿ 'ಬೈಲಿ'(ಬಯಲು)ನಲ್ಲಿರುವ ತೋಡುಗಳು, ತೋಡುಗಳು ಸೇರಿ ಹರಿಯುವ ಹೊಳೆಗಳು, ಹೊಳೆಗಳು ಸೇರಿ ಹರಿಯುವ ನದಿಗಳು ತುಂಬಿ ಹರಿಯುತ್ತಿರುತ್ತವೆ. ದಾನ ಬಿಡುವುದು ಹರಿಯುವ ನೀರಿನಲ್ಲಿಯೇ ಆಗಬೇಕು. ಅಂತಿಮವಾಗಿ ಬಿಟ್ಟ ದಾನ ಕಡಲು ಸೇರಬೇಕಾಗುತ್ತದೆ. ಕಡಲ ಕಿನಾರೆಯವರು ಕಡಲಿನಲ್ಲಿ ದಾನಬಿಟ್ಟು ಕಡಲ ಸ್ನಾನ ಮಾಡುತ್ತಾರೆ. ಎಲ್ಲೋ ಬೆಟ್ಟದಲ್ಲಿ ಹುಟ್ಟಿ ಕಾಡುಮಲೆಗಳ ಮಧ್ಯೆ ನದಿಯೊಂದು ನೂರಾರು ಜಾತಿಯ ಗಿಡಮರಗಳ ಬೇರುಗಳನ್ನು ಸ್ಪರ್ಶಿಸಿಕೊಂಡು ಹರಿಯುವುದರಿಂದ ಅದು ಔಷಧೀಯ ಗುಣಗಳನ್ನು ಹೊಂದುತ್ತದೆ. ಆದ್ದರಿಂದ ಹರಿಯುವ ನೀರು ಎಂದರೆ ಅದು ಪವಿತ್ರವಾಗಿರುತ್ತದೆ. ಹರಿಯುವ ನೀರಿಗೆ ಅಶುದ್ಧತೆಯಿಲ್ಲ ಎಂಬುದು ನಂಬಿಕೆ. ಆದ್ದರಿಂದ ಹೂವು, ಅಡಿಕೆ, ವೀಳ್ಯ, ನವಧಾನ್ಯಗಳ ಸಹಿತ ತೋಡಲ್ಲೋ, ನದಿಯಲ್ಲೋ, ಹೊಳೆಯಲ್ಲೋ ಅಮಾವಾಸ್ಯೆ ದಿನ ದಾನ ಬಿಡುವುದು ಕಂಡು ಬರುತ್ತದೆ. ಅಂದರೆ ಇದು ತುಳುವರು 'ಬಾಗಿನ' ಅರ್ಪಿಸುವ ಕ್ರಮವಾಗಿದ್ದು ಜಲದೇವತೆಯನ್ನು ಆರಾಧಿಸುವುದೇ ಆಗಿದೆ. ತುಳುನಾಡಿನಲ್ಲಿ ಮಳೆಗಾಲ ಹೆಚ್ಚು ದೀರ್ಘಕಾಲದ್ದಾಗಿರುತ್ತದೆ. ಅಲ್ಲದೆ 'ಆಟಿ'ತಿಂಗಳಲ್ಲಂತು ವಿಪರೀತ ಮಳೆ ಸುರಿಯುತ್ತದೆ. ಇದರಿಂದ ಮನುಷ್ಯ, ಪ್ರಾಣಿ, ಪಕ್ಷಿ, ಗಿಡಮರ, ಬೆಳೆಸಲೆಗಳಿಗೆಲ್ಲ ರೋಗರುಜಿನ, ಹುಳುಹುಪ್ಪಟೆ ಬಾಧೆಗಳು ಬಹಳವಾಗಿ ಕಾಣಿಸಿಕೊಳ್ಳುತ್ತವೆ. ಈ ಹಿನ್ನೆಲೆಯಲ್ಲಿ ತುಳುವರು ತಮ್ಮನ್ನು ಕಾಪಾಡುವಂತೆ ಜಲದೇವತೆಯನ್ನು ಪ್ರಾರ್ಥಿಸುವ ನೆಲೆಯಲ್ಲಿ ಈ ಆಚರಣೆಯನ್ನು ಗಮನಿಸಬೇಕು. ಜೊತೆಗೆ ದಾನ ಬಿಡುವುದು ಅಂದರೆ 'ಆಟಿ' ತಿಂಗಳಲ್ಲಿ ಮೈ ಮನಸ್ಸುಗಳಿಗೆ ಅಂಟಿದ ಕಷ್ಟ ಕಾರ್ಪಣ್ಯಗಳನ್ನು ನೀರಿನಲ್ಲಿ ಬಿಟ್ಟು ಬಿಡುವುದು ಮತ್ತು ನೀರಿನಲ್ಲಿ ಸ್ನಾನಮಾಡಿ ಪರಿಶುದ್ಧರಾಗುವ ಆಶಯವನ್ನು ಇಲ್ಲಿ ಗಮನಿಸಬಹುದು. ಅಂತೆಯೇ 'ಆಟಿ ಅಮಾವಾಸ್ಯೆ'ಯ ದಿನ ಹರಿಯುವ ನೀರೆಲ್ಲ ತೀರ್ಥವಾಗಿರುತ್ತದೆ. ಅದರಲ್ಲಿ ಸ್ನಾನಮಾಡುವುದರಿಂದ ಕಷ್ಟ ಸಂಕಟಗಳ ಪರಿಹಾರವಾಗುತ್ತದೆ ಎಂಬ ನಂಬಿಕೆಯೂ ಜನಪದರಲ್ಲಿದೆ. ಜನಪದರ ನಂಬಿಕೆಯಂತೆ ದಾನಬಿಟ್ಟ ಬಳಿಕ ತಿರುಗಿ ನೋಡಬಾರದು ಅಂದರೆ ತೀರ್ಥ ಸ್ನಾನಮಾಡಿ ಪರಿಶುದ್ಧರಾದ ಮೇಲೆ ಮತ್ತೆ ಆ ಕಷ್ಟಗಳನ್ನು ಅನುಭವಿಸಬಾರದು ಎಂಬ ಆಶಯವೇ ಆಗಿದೆ. ಹಾಗಾಗಿ ದಾನ ಬಿಡುವ ಆಚರಣೆಯನ್ನು ಜಲಪೂಜೆಯಾಗಿ ಪರಿಗಣಿಸುವುದರ ಜೊತೆಗೆ ಪ್ರಕೃತಿ ಆರಾಧನೆಯ ಭಾಗವಾಗಿಯೂ ಗುರುತಿಸಬಹುದಾಗಿದೆ. ಮಳೆಗಾಲದಲ್ಲಿ ನೀರಿಗೆ 'ಬಾಗಿನ' ಅರ್ಪಿಸುವ ಕ್ರಮ ಎಲ್ಲೆಡೆಯೂ ಕಂಡು ಬರುತ್ತದೆ. ಅಂತೆಯೇ 'ಆಟಿ ಅಮಾವಾಸ್ಯೆ' ದಿನ ದಾನ ಬಿಡುವುದೂ ಆಗಿದ್ದಲ್ಲಿ ಆಶ್ಚರ್ಯವಿಲ್ಲ.

### ೬.೩.೩: ‘ಕಳ್ಳಿ’, ‘ಕಾಪು’ ಕುತ್ತುವುದು

ತುಳುನಾಡಿನ ಕೃಷಿಕರಿಗೆ ‘ಆಟಿ ಅಮಾವಾಸ್ಯೆ’ ಎಂದಾಕ್ಷಣ ‘ಪಾಲೆ’(ಹಾಲೆ) ಮರದ ರಸ ಕುಡಿಯುವುದು ಮತ್ತು ಕೃಷಿ ಬೇಸಾಯಕ್ಕೆ ‘ಕಳ್ಳಿ’, ’ಕಾಪು’ ಕುತ್ತುವ ನೆನಪು ಉಂಟಾಗುತ್ತದೆ. ‘ಕಳ್ಳಿ’ ಮತ್ತು ‘ಕಾಪು’ಗಳಲ್ಲಿ ವಿಶೇಷವಾದ ವ್ಯತ್ಯಾಸಗಳೇನೂ ಇರುವುದಿಲ್ಲ. ‘ಕಾಪು’ವಿನಲ್ಲೂ ‘ಕಳ್ಳಿ’ಯಿರುತ್ತದೆ. ಆದರೆ ‘ಕಾಪು’ ರಚನೆಯ ವಿನ್ಯಾಸ ಮಾತ್ರ ಬೇರೆಯ ರೀತಿಯದಾಗಿರುತ್ತದೆ. ‘ಕಳ್ಳಿ’ಗಳನ್ನು ಗದ್ದೆ, ತೋಟ, ತರಕಾರಿ ಸಾಲುಗಳಿಗೆ ಕುತ್ತುವುದರಿಂದ ಅವುಗಳಿಗೆ ಜನರ ಕೆಟ್ಟ ‘ದೃಷ್ಟಿ’ ಬೀಳುವುದಿಲ್ಲ ಎಂಬುದು ತುಳು ಜನಪದರ ನಂಬಿಕೆ. ‘ದೃಷ್ಟಿ’ ಬೀಳುವುದು ಎಂದರೆ ಕೆಲವು ಜನರು ಬೆಳೆಯ ಬಗ್ಗೆ ಇಲ್ಲವೇ ಯಾವುದರ ಬಗ್ಗೆಯಾಗಲಿ ಏನಾದರೂ ಹೇಳಿದರೆ ಆ ಬೆಳೆ ಇಲ್ಲವೇ ಏನೇ ಇದ್ದರೂ ಅದು ಹಾಳಾಗುತ್ತದೆ ಎಂಬುದು ನಂಬಿಕೆ. ಹಾಗಾಗಿ ‘ಕಳ್ಳಿ’ಯಲ್ಲಿ ‘ದೃಷ್ಟಿ’ ನಿವಾರಕ ಮಾಂತ್ರಿಕ ಶಕ್ತಿ ಇದೆ ಎಂದು ಜನ ನಂಬಿದ್ದಾರೆ. ಈ ‘ಕಳ್ಳಿ’ ಗಿಡವನ್ನು ಬೇಸಾಯಗಳಿಗೆ ಮಾತ್ರವಲ್ಲ, ಮನೆ, ಕಟ್ಟಡಗಳನ್ನು ಕಟ್ಟುವಾಗಲೂ ಇಡುವುದನ್ನು ನಾವು ಗಮನಿಸುತ್ತೇವೆ. ‘ಕಳ್ಳಿ’ ಗಿಡ ಎಂದರೆ ಇದೊಂದು ಜಾತಿಯ ಹಾಲು ಬರುವ ಸಸ್ಯ. ಇದರಲ್ಲಿ ಮುಳ್ಳುಗಳಿರುತ್ತವೆ. ಇದರ ಹಾಲು ಕಣ್ಣಿಗೆ ಬಿದ್ದರೆ ಕಣ್ಣು ಕುರುಡಾಗುತ್ತದೆ. ಅಂತಹ ವಿಷಕಾರಕ ಶಕ್ತಿ ‘ಕಳ್ಳಿ’ಗಿಡದ ಹಾಲಿಗಿದೆ. ‘ಕಳ್ಳಿದ ಕೈತ್ತಲ್ ಕಣ್ಣ್‌ದ ಜೋಕೆ’(ಕಳ್ಳಿಯ ಹತ್ತಿರ ಕಣ್ಣಿನ ಜಾಗ್ರತೆ), ‘ದಪ್ಪಂದ್ ಕಳ್ಳಿ, ಕನಪ್ಪಟೆದ ಪೇರ್ ಪರ್ಪೆರಾ?’ (ದಪ್ಪ ಇದೆಯೆಂದು ಕಳ್ಳಿ ಇಲ್ಲವೆ ಕನಪ್ಪಟೆ ಎಂಬ ವಿಷಕಾರಕ ಗಿಡದ ಹಾಲನ್ನು ಕುಡಿಯುತ್ತಾರಾ?) ಎಂಬ ಗಾದೆಗಳೇ ಇದೆ. ಈ ನೆಲೆಯಲ್ಲಿ ನೋಡಿದಾಗ ‘ದೃಷ್ಟಿ’ ಬೀಳದಂತೆ ‘ಕಳ್ಳಿ’ ನೆಡುವುದರಲ್ಲಿ ಜನಪದರ ನಂಬಿಕೆಯ ಹಿಂದೆ ವಿಜ್ಞಾನದ ವಿವರಗಳಿವೆ. ಅಂತೆಯೇ ವಿಪರೀತ ಮಳೆಗೆ ಕೃಷಿಗೂ ತಗುಲುವ ರೋಗಗಳ ನಿವಾರಣೆಯ ನೆಲೆಯಲ್ಲಿಯೂ ‘ಕಳ್ಳಿ’ ರೋಗ ನಿರೋಧಕ ಶಕ್ತಿಯಾಗಿ ಕೆಲಸಮಾಡುತ್ತದೆ ಎಂದು ಹೇಳುತ್ತಾರೆ. ಅದೂ ‘ಆಟಿ ಅಮಾವಾಸ್ಯೆ’ಯ ದಿನ ಆ ‘ಕಳ್ಳಿ’ಯಲ್ಲಿ ವಿಶೇಷ ಔಷಧೀಯ ಗುಣಗಳ ಸಂಗಮವಾಗುವುದಾಗಿಯೂ ಹೇಳುತ್ತಾರೆ. ಇನ್ನು ‘ಕಾಪು’ ಮಾಡಿ ‘ಕಳ್ಳಿ’ ಕುತ್ತುವುದರಲ್ಲಿ ಬೇರೆ ರೀತಿಯ ಉದ್ದೇಶವಿರುವುದು ವೇದ್ಯವಾಗುತ್ತದೆ. ‘ಕಾಪು’ ಎಂದರೆ ರಕ್ಷಣೆ ಎಂದರ್ಥ, ಬೆಳೆಯ ರಕ್ಷಣೆ ಮಾಡುವುದೇ ‘ಕಾಪು’ ನಿಲ್ಲಿಸುವುದರ ಉದ್ದೇಶ. ‘ಕೇಪು ಇದ್ಯಂದೆ ಬೆಡಿ ಪುಡವಂದ್, ಕಾಪು ಇದ್ಯಂದೆ ಬುಳೆ ಒರಿಯಂದ್’(ಕೇಪು ಇಲ್ಲದೆ ಕೋವಿ ಹೊಡೆಯದು. ಕಾಪು ಇಲ್ಲದೆ ಬೆಳೆ ಸಿಗದು), ಕಂಡೊಗೊಂಜಿ ಕಾಪು ಮುಂಡೊಗೊಂಜಿ ಬೊಟ್ಟು’(ಗದ್ದೆಗೊಂದು ಕಾಪು ಹಣೆಗೊಂದು ಬೊಟ್ಟು) ಎಂಬ ಗಾದೆ ಮಾತುಗಳು ‘ಕಾಪು’

ನಿಲ್ಲಿಸುವುದರ ಹಿಂದಿನ ಆಶಯವನ್ನು ಸ್ಪಷ್ಟಪಡಿಸುತ್ತದೆ. ಸಾಮಾನ್ಯವಾಗಿ ದೊಡ್ಡ ದೊಡ್ಡ ಗದ್ದೆಗಳಿಗೆ ಮತ್ತು 'ಗದ್ದೆಕೋರಿ' ಮಾಡುವ ಗದ್ದೆಗಳಿಗೆ 'ಕಾಪು' ಕುತ್ತುತ್ತಾರೆ. ಬೆಳೆಗಳಿಗೆ ತಗುಲುವ ಕ್ರಿಮಿ ಕೀಟಗಳನ್ನು, ಹುಳು ಹುಪ್ಪಟೆಗಳನ್ನು ನಿಯಂತ್ರಿಸುವಲ್ಲಿ ಈ 'ಕಾಪು' ಮಹತ್ವದ ಕಾರ್ಯನಿರ್ವಹಿಸುತ್ತದೆ. 'ಕಾಪು'ವಿನಲ್ಲಿ ಹಕ್ಕಿಗಳು ಬಂದು ಗೂಡು ಕಟ್ಟುತ್ತವೆ. ಅಲ್ಲಿ ಮೊಟ್ಟೆ ಇಟ್ಟು ಮರಿ ಮಾಡುತ್ತವೆ. ಈ ಸಂದರ್ಭಗಳಲ್ಲಿ ಹಕ್ಕಿಗಳು ಬೆಳೆಗೆ ತಗುಲಿದ ಹುಳು ಹುಪ್ಪಟೆಗಳನ್ನು ತಿಂದು ಬದುಕುತ್ತವೆ. ರೈತರನ್ನು ಬದುಕಲು ಸಹಾಯಮಾಡುತ್ತವೆ. ಆದ್ದರಿಂದ ಜನಪದರ ಇಂತಹ ಆಚರಣೆಗಳಲ್ಲಿ ವೈಜ್ಞಾನಿಕವಾದ ದೃಷ್ಟಿಕೋನಗಳಿರುವುದು ಅಧ್ಯಯನದಿಂದ ತಿಳಿದು ಬರುತ್ತದೆ.

'ಕಳ್ಳಿ'ಯನ್ನು ಬಿದಿರಿನ 'ಅಂಡೆ' (ಬೊಂಬು)ಯಲ್ಲಿಡುವಾಗ ಅದಕ್ಕೆ ಒಂದು ಚೂರು ಮಣ್ಣು ಹಾಕುವುದು ಆ 'ಕಳ್ಳಿ' ಜೀವಂತವಾಗಿರಲೆಂದು. ಹಾಗೆಯೇ ಅದರ ಸುತ್ತ ವಿವಿಧ ಜಾತಿಯ ಎಲೆಗಳನ್ನು ಇಡುವುದು ಕೂಡ ಜನಪದರ ನಂಬಿಕೆಯ ಪ್ರಕಾರ 'ಮೂಲಿಗೆ'ಯಾಗಿರುತ್ತದೆ. 'ಮೂಲಿಗೆ' ಎಂದರೆ ದೋಷ ನಿವಾರಣೆಗೆ ಮಾಡುವ ಕ್ರಮ ಎಂದರ್ಥ. ಪ್ರಕೃತಿಯಲ್ಲಿ ದೊರೆಯುವ ವಸ್ತುಗಳಿಂದಲೇ ತಮ್ಮ ಬದುಕಿನ ನಿರ್ವಹಣೆ ಮತ್ತು ದೋಷ ನಿವಾರಣೆಗಳನ್ನು ಮಾಡಿಕೊಳ್ಳುವುದು ಇಲ್ಲಿ ತಿಳಿದುಬರುತ್ತದೆ.

ಈ ಹಿನ್ನೆಲೆಯಲ್ಲಿ 'ಕಳ್ಳಿ' ಮತ್ತು 'ಕಾಪು'ಗಳಿಗೆ ಸಂಬಂಧಿಸಿದಂತೆ ದೊರೆಯುವ ಈ ವಿವರಣೆಯನ್ನು ವಿಶೇಷವಾಗಿ ಗಮನಿಸಬೇಕು. 'ಕಳ್ಳಿ'ಯನ್ನು ಕುರಿತು–"ಹಾಲನ್ನು ದ್ರವಿಸುವ ಮೂರ್‍ನಾಲ್ಕು ಪ್ರಭೇದಗಳುಳ್ಳ ಸಸ್ಯ. ಹಾಲುಗಳ್ಳಿ, ಕೋಲುಗಳ್ಳಿ, ಪಾಪಸುಕಳ್ಳಿ ಮುಂತಾದುವೇ ಅದರ ಪ್ರಭೇದಗಳು. ಕೋಲುಗಳ್ಳಿ ಶ್ರೇಷ್ಠವೆಂಬ ಭಾವನೆಯಿಂದ ಕರ್ನಾಟಕದ ಕೆಲವು ಭಾಗಗಳಲ್ಲಿ ಅದನ್ನು ಮದುವೆ ಸಂದರ್ಭದ ಶಾಸ್ತ್ರಕ್ಕೆ ಬಳಸುವುದುಂಟು. ಚಪ್ಪರವನ್ನು ಹಾಕುವ ದಿನ ಒಂದು ಕೋಲುಗಳ್ಳಿಯ ಕೊಂಬೆ ಹಾಗೂ ಎರಡು ಬಿದಿರು ಬೊರಾಲುಗಳನ್ನು ವಾದ್ಯಸಮೇತ ಊರ ಮುಂದಿನ ದೇವಸ್ಥಾನದಿಂದ ತಂದು ಚಪ್ಪರದ ಮಧ್ಯಭಾಗದ ನಿರ್ದಿಷ್ಟ ಜಾಗದಲ್ಲಿ ನೆಡಲಾಗುತ್ತದೆ. ಅದರ ಈಶಾನ್ಯ ಮತ್ತು ಪೂರ್ವ ದಿಕ್ಕಿಗೆ ಬಿದಿರುಬೊಂಬುಗಳನ್ನು ನೆಡುತ್ತಾರೆ. ಈ ಕೋಲುಗಳಿಗೆ ಮೂರು ಅಥವಾ ಐದು ಕವಲುಗಳಿರಬೇಕೆಂಬ ನಿಯಮವಿದ್ದು ಈ ಸಂಖ್ಯೆ ಶುಭವನ್ನು ಸೂಚಿಸುತ್ತದೆ.

ರುಕ್ಮಿಣಿ, ಮೋಡಿ ಇತ್ಯಾದಿಯನ್ನು ಪ್ರದರ್ಶಿಸುವವರು ಕೋಲುಗಳ್ಳಿಯನ್ನು ಯಥೇಚ್ಛವಾಗಿ ತಿಂದು ಬಳಿಕ ಬಾಯಿಯಿಂದ ವಿವಿಧ ಬಣ್ಣದ ಟೇಪುಗಳನ್ನು ಇಲ್ಲವೆ ಚೇಳಿನ

ಮರಿಗಳನ್ನು ಹೊರತೆಗೆಯುವ ಚಮತ್ಕಾರ ತೋರಿಸುತ್ತಾರೆ. 'ಹುಲ್ಲು ಹಾಕಿದರೆ ಕರೆಯೋದಿಲ್ಲ, ಕಲ್ಲು ಹಾಕಿದರೆ ಕರೆಯುತ್ತದೆ; ಹೂವುಂಟು, ಕಾಯುಂಟು, ಎಲೆಗಳಿಲ್ಲ' ಇತ್ಯಾದಿ ಒಗಟುಗಳು ಕಳ್ಳಿ ಗಿಡದ ಬಗೆಗೆ ಇವೆ"[೧೬] ಎಂಬ ಮಾಹಿತಿ ವಿಶಿಷ್ಟವಾಗಿದ್ದು ಈ ಗಿಡದ ಮಹತ್ವವನ್ನು ತಿಳಿಯಬಹುದಾಗಿದೆ. ಹಾಗೆಯೇ 'ಪಾಪಸುಕಳ್ಳಿ'ಯನ್ನೂ ಜನಪದರು ಬಹಳವಾಗಿ ಉಪಯೋಗಿಸುವ ಬಗ್ಗೆ ತಿಳಿದುಬರುತ್ತದೆ.[೧೭] 'ಕಾಪು'ವನ್ನು ಕುರಿತು–"ಗದ್ದೆಗಳಲ್ಲಿ ಪೈರು ನೆಟ್ಟ ನಂತರ ಅದಕ್ಕೆ ದೃಷ್ಟಿ ತಾಕದಿರಲೆಂದು ಕೆಲವೊಂದು ಮರದ ಕೊಂಬೆಗಳನ್ನು ನೆಡುವರು. ಇದಕ್ಕೆ 'ಕಾಪು' ಎಂದು ಕರೆಯುವರು. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ವರ್ಷದಲ್ಲಿ ಬರುವ ಮೂರು ಬೆಳೆಗಳಿಗೆ ಏಣಿಲು, ಸುಗ್ಗಿ ಮತ್ತು ಕೊಳಕೆ ಬೆಳೆಗಳೆಂದು ಹೆಸರು. ಸುಗ್ಗಿ ಬೆಳೆಯಲ್ಲಿ ಪೈರುಹಾಕಿದಾಗ ಅರಳಿಮರದ ಕೊಂಬೆಯನ್ನು ದೃಷ್ಟಿ ತಾಗದಿರುವಂತೆ ಗದ್ದೆಗಳಲ್ಲಿ ನೆಡುವರು. ಏಣಿಲು ಬೆಳೆಯಲ್ಲಿ ಪೈರುಹಾಕಿದಾಗ ಕಾಸರಕನ ಮರದ ಕೊಂಬೆಯನ್ನು ನೆಡುವರು. ಕೊಳಕೆ ಬೆಳೆಯಲ್ಲಿ ಪೈರುಹಾಕಿದಾಗ ಮುಂಡೋವಿನ ಮರದ ಒಂದು ಚಿಕ್ಕ ರೆಂಬೆಯನ್ನು ನೆಡುವರು. ಹೀಗೆ ಕಾಪು ನೆಡುವುದರಿಂದ ದೃಷ್ಟಿ ತಾಗುವುದಿಲ್ಲವೆಂದು ನಂಬುವರು. ಉತ್ತರ ಕರ್ನಾಟಕದಲ್ಲಿ ಇಂಥದ್ದಕ್ಕೆ 'ಬೆದರು, ಬೆಚ್ಚ' ಎಂದು ಕರೆಯುವರು"[೧೮] ಎಂಬ ವಿವರಗಳಿದ್ದು ಗಮನಾರ್ಹವಾಗಿವೆ.

ಈ ಕಾಪು ಕುರಿತು ಡಾ. ಬಿ. ಶಿವರಾಮ ಶೆಟ್ಟಿಯವರು ಪ್ರಸ್ತಾಪಿಸುತ್ತಾ "ಕಾಸರಕ ಗಿಡದ ಗೆಲ್ಲನ್ನು ಕಾಪು ಆಗಿ ನೆಡುವ ಕ್ರಮವಿದೆ. ಕಾಯರ್ ಗೆಲ್ಲನ್ನು ಗದ್ದೆಯಲ್ಲಿ ಆ ದಿನ ನೆಡುವುದರಿಂದ ಬೆಳೆಗೆ ಬರುವ ಮಾರಿ (ಹುಳಬಾಧೆ)ಯನ್ನು 'ಕಾಯೆರ್' ತಡೆಯುತ್ತದೆ ಎಂದು ಜನಪದರು ಹೇಳುತ್ತಾರೆ, ಈ ಕ್ರಿಯಾಚರಣೆಯ ಮೂಲಕ ಅಮಾವಾಸ್ಯೆಯ ವಿಶಿಷ್ಟ ಕಾಲ ಬೆಳೆಗೆ ಬರುವ ಮಾರಿಯನ್ನು ತಡೆಯುವ ಮಾಂತ್ರಿಕ ಶಕ್ತಿಯನ್ನು ಕಾಯರ್ ಗೆಲ್ಲಿಗೆ ವರ್ಗಾಯಿಸುತ್ತದೆ ಎಂದು ಜನಪದ ನಂಬುತ್ತದೆ"[೧೯] ಎಂದು ಹೇಳುತ್ತಾರೆ. ಇದೇ ಅಭಿಪ್ರಾಯವನ್ನು ಡಾ.ಇಂದಿರಾ ಹೆಗ್ಗಡೆಯವರೂ ಹೇಳಿದ್ದಾರೆ.[೨೦] ಇಬ್ಬರೂ 'ಕಳ್ಳಿ' ನೆಡುವ ವಿಚಾರವನ್ನು ಹೇಳಲೇ ಇಲ್ಲ, ಅಂದರೆ 'ಕಳ್ಳಿ' ಬದಲಿಗೆ 'ಕಾಯರ್' ಗಿಡದ ಗೆಲ್ಲನ್ನು ನೆಡುವ ಬಗ್ಗೆ ಹೇಳಲಾಗಿದೆಯಷ್ಟೆ. ಆದ್ದರಿಂದ 'ಕಾಯರ್' ಗೆಲ್ಲನ್ನು 'ಕಳ್ಳಿ'ಯ ಬದಲಿಗೆ ಬಳಸುವುದು ತಿಳಿಯುತ್ತದೆ. ಮಾತ್ರವಲ್ಲ, 'ಕಾಯರ್' ಅತಿ ಕಹಿರುಚಿಯ ಮರವಾಗಿದ್ದು ಇದರಲ್ಲೂ ಔಷಧೀಯ ಗುಣ ಮತ್ತು ಮಾಂತ್ರಿಕ ಶಕ್ತಿ ಇದೆಯೆಂದು ಹೇಳುತ್ತಾರೆ. ಆದರೆ ಸಾಮಾನ್ಯವಾಗಿ ನೇಜಿ ಆದ ತಕ್ಷಣವೇ ಗದ್ದೆಗೆ 'ಕಾಯರ್' ಗಿಡದ ಗೆಲ್ಲು ಕುತ್ತುವುದು ರೂಢಿಯಲ್ಲಿ ಕಂಡು ಬರುತ್ತದೆ. 'ಕಾಯರ್' ಗೆಲ್ಲು

ತಪ್ಪಿದರೆ 'ತರೋಳಿ' ಗೆಲ್ಲನ್ನು ಕುತ್ತುವುದುಂಟು. 'ಆಟಿ ಅಮಾವಾಸ್ಯೆ' ದಿನ ಮಾತ್ರ 'ಕಳ್ಳಿ'ಯನ್ನೆ ಕುತ್ತುತ್ತಾರೆ. ಅಂದರೆ 'ಏಣೇಲು' ಬೆಳೆಗೆ 'ಕಾಯರ್' ಗೆಲ್ಲು ಕುತ್ತುತ್ತಾರೆ. 'ಸುಗ್ಗಿ' ಬೆಳೆಗೆ 'ತರೋಳಿ' ಗೆಲ್ಲು ಕುತ್ತುತ್ತಾರೆ. 'ಕೊಳಕೆ' ಬೆಳೆಗೆ 'ಮುಂಡೇವು' ಗೆಲ್ಲು ಕುತ್ತುವುದು ಸಂಪ್ರದಾಯ.

**೬.೩.೪: ಭೂತಗಳಿಗೆ ಅಗೆಲು ಹಾಕುವುದು**

'ಆಟಿ ಅಮಾವಾಸ್ಯೆ'ಯ ಇನ್ನೊಂದು ಪ್ರಮುಖ ಆಚರಣೆಯೆಂದರೆ ಭೂತಗಳಿಗೆ 'ಅಗೆಲು' ಹಾಕುವುದು. 'ಪತ್ತನಾಜೆ'ಯಂದು ಇಲ್ಲವೆ 'ಪತ್ತನಾಜೆ'ಯೊಳಗೆ ದೊಡ್ಡ ದೊಡ್ಡ ಭೂತಗಳಿಗೆಲ್ಲ 'ಅಗೆಲು', 'ಕೋಲ', 'ತಂಬಿಲ' ಕೊಡಲಾಗುತ್ತದೆ. ಇನ್ನು ಕಲ್ಲುರ್ಟಿ, ರಾಹು, ಗುಳಿಗ ಮೊದಲಾದ ಕುಲದೇವತೆಗಳಿಗೆ ಮಾತ್ರ 'ಆಟಿ' ತಿಂಗಳ ಅಮಾವಾಸ್ಯೆಯಂದು 'ಅಗೆಲು' ಹಾಕುವ ಕ್ರಮವಿದೆ. ಈ ಭೂತಗಳು ಕುಟುಂಬಕ್ಕೆ ತೀರ ಹತ್ತಿರವಾದ್ದರಿಂದ ಸಂಕಟ ನಿವಾರಿಸಲು ಪ್ರಾರ್ಥಿಸುವ ನೆಲೆಯಲ್ಲಿ ಅಮಾವಾಸ್ಯೆ ದಿನ 'ಅಗೆಲು' ಹಾಕುವ ಸಾಧ್ಯತೆಯಿದೆ. ಇನ್ನು ಈ ಭೂತಗಳಿಗೆ ಮನೆಯೊಳಗೆ ಇಲ್ಲವೆ ಮರದ ಬುಡಗಳಲ್ಲಿ ಬಡಿಸುವುದರಿಂದ ಎಷ್ಟು ಮಳೆ ಬಂದರೂ ಅಡ್ಡಿಯಾಗುವುದಿಲ್ಲ. ಮೂರನೆಯದಾಗಿ 'ಆಟಿ' ತಿಂಗಳಲ್ಲಿ ಬಡತನವಿರುವುದರಿಂದ ರುಚಿಕರವಾದ ಊಟ ತಯಾರಿಸಿ ತಿನ್ನಲು ಸಾಧ್ಯವಿಲ್ಲ. ಹಾಗಾಗಿ ಈ ಭೂತಗಳ ಹೆಸರಿನಲ್ಲಿ 'ಅಗೆಲು' ಬಡಿಸಿ ಮನೆಮಂದಿ ಅಮಾವಾಸ್ಯೆ ದಿನ ಕೋಳಿ ಪದಾರ್ಥದಲ್ಲಿ ಊಟ ಮಾಡುವ ಆಶಯವೂ ಕಂಡುಬರುತ್ತದೆ. ಹೀಗೆ ವಿವಿಧ ನೆಲೆಗಳನ್ನು ಗುರುತಿಸಬಹುದಾದರೂ ಮುಖ್ಯವಾಗಿ 'ಆಟಿ' ತಿಂಗಳ ಕಷ್ಟಗಳನ್ನು ನಿವಾರಿಸಲು ಕುಲದೇವತೆಗಳಲ್ಲಿ ಪ್ರಾರ್ಥನೆ ಮಾಡುವ ಆಶಯವೇ ಪ್ರಧಾನವಾಗಿ ಗೋಚರಿಸುತ್ತದೆ.

"ಆಟಿ ತಿಂಗಳಲ್ಲಿ ಕುಲೆಗಳಿಗೆ, ಕಲ್ಲುರ್ಟಿ, ಗುಳಿಗ ದೈವಗಳನ್ನುಳಿದಂತೆ ಯಾವುದೇ ಭೂತಗಳಿಗೆ ಆರಾಧನೆ ನಡೆಯುವುದಿಲ್ಲ. ಆಟಿಯಲ್ಲಿ ಭೂತಾರಾಧನೆ ನಡೆಯದೆ ಇರುವುದಕ್ಕೆ ಸಂಬಂಧಿಸಿದಂತೆ, ಭೂತಗಳಿಗೂ ಆಟಿ ಕಳೆಂಜನಿಗೂ ನಡೆದ ಸಂಘರ್ಷದ ಕಥೆಯೊಂದು ಇದೆ. ಕಥೆಯ ಪ್ರಕಾರ ರೋಗರುಜಿನಗಳನ್ನು ತಂದು ಹಾಕುವ ಭೂತಗಣಗಳನ್ನು ಕಳೆಂಜನು ತನ್ನ ಕೊಡೆಯ ಕಾಲನ್ನು ಸರ್‍ರನೆ ಎಳೆದು ತಿರುಗಿಸಿದಾಗ ಭೂತಗಳು ಸೋತು ಹೋಗುತ್ತವೆ, 'ನೀವು ನಿಮ್ಮ ನಿಮ್ಮ ಗುಡಿಗಳಲ್ಲೇ ನಿಲ್ಲಬೇಕು. ಆಟಿ ಮೂವತ್ತು ದಿನದ ಆಧಿಕಾರ ನನಗೆ. ಉಳಿದ ಹನ್ನೊಂದು ತಿಂಗಳು ನಿಮಗೆ' ಎಂದು ಆಟಿ ಕಳೆಂಜನು ಸಾವಿರ ಭೂತಗಳನ್ನು ಬೆನ್ನಟ್ಟಿ ಗುಡಿಯೊಳಗೆ ಹಾಕಿ 'ಇನ್ನು ಆಷಾಢದ ಮೂವತ್ತು ದಿನದವರೆಗೆ ಊರಿನ ಅಧಿಕಾರ ನನಗೆ,

ಹೊರಟರೆ ಜಾಗ್ರತೆ' ಎಂದು ಬಾಗಿಲು ಹಾಕಿ ಒಂದು ಬಾರಿ ತುಳಿದನು. ಹಾಗೆಯೇ ಇಂದಿಗೂ ಅಷಾಢ ಆರಂಭವಾಗುವ ಸಂಕ್ರಮಣದಂದು ಭೂತಗಳ ಗುಡಿಗಳಿಗೆ ಬಾಗಿಲು ಹಾಕಬೇಕು. ಶ್ರಾವಣ ಆರಂಭವಾಗುವ ಸಂಕ್ರಮಣದಂದು ಬಾಗಿಲು ತೆಗೆಯಬೇಕು. ಕಳೆಂಜ ಮಾಡಿದ ಈ ಕಟ್ಟು ಕಟ್ಟಳೆಯಂತೆ ಭೂತಾರಾಧನೆ ಆಟಿಯಲ್ಲಿ ನಡೆಯುವುದಿಲ್ಲವೆಂಬ ನಂಬಿಕೆ"[೨೧] ಎಂದು ಹೇಳಲಾಗಿದೆ. ಆದರೆ ಈ ಐತಿಹ್ಯವನ್ನು ಪೂರ್ತಿಯಾಗಿ ಒಪ್ಪಲು ಬರುವುದಿಲ್ಲ. ಯಾಕೆಂದರೆ 'ಆಟಿ' ತಿಂಗಳಲ್ಲಿ 'ಆಟಿಕಳೆಂಜ'ನಿಗೆ ಹೆಚ್ಚಿನ ಪ್ರಾಮುಖ್ಯತೆಯಿದೆಯಾದರೂ ರಾಹು, ಗುಳಿಗ, ಕಲ್ಲುರ್ಟಿ ಮೊದಲಾದ ದೈವಗಳಿಗೆ 'ಅಗೆಲು' ಹಾಕುವ ಕ್ರಮವೂ ಇದೆ. ಅಂದರೆ 'ಆಟಿ' ತಿಂಗಳಲ್ಲಿ ಭೂತಾರಾಧನೆಗೆ ಸಂಪೂರ್ಣ ನಿಷೇಧವಿಲ್ಲ. ಆದರೆ 'ಆಟಿಕಳೆಂಜ' 'ಆಟಿ' ತಿಂಗಳಲ್ಲಿ ಮಾತ್ರ ತನ್ನ ಪ್ರದರ್ಶನವನ್ನು ನೀಡುತ್ತಾನೆ ಹೊರತು ಉಳಿದ ದಿನಗಳಲ್ಲಿ ಅವನು ಬರುವ ಕ್ರಮವಿಲ್ಲ. 'ಆಟಿಕಳೆಂಜ' ತುಳುನಾಡಿನಲ್ಲಿ 'ಆಟಿ' ತಿಂಗಳ ಜಾನಪದ ಕುಣಿತ ಎಂಬುದನ್ನು ವಿಶೇಷವಾಗಿ ಲಕ್ಷಿಸಬೇಕು.

"ಆಟಿ ತಿಂಗಳಲ್ಲಿ ಗುಡಿ-ಮಾಡಗಳಿಗೆ ಬಾಗಿಲು ಜಡಿಯುವ ಮತ್ತು ಸೋಣ ತಿಂಗಳ ಅರಂಭದಲ್ಲಿ ಬಾಗಿಲು ತೆಗೆಯಬೇಕೆಂಬ ಹಿನ್ನೆಲೆಯಲ್ಲಿ ಆಟಿ ಕಳೆಂಜನ ಸುತ್ತ ಹೆಣೆದ ಐತಿಹ್ಯದ ಹಿಂದೆ ವಾಸ್ತವಿಕವಾದ ಸತ್ಯಗಳ ಒಗಟಿದೆ. ಮಹತ್ವದ ಭೂತಗಳು ಮತ್ತು ಇತರ ವೈದಿಕ ದೇವರುಗಳು ಆಟಿಯಲ್ಲಿ ಆಚರಣೆಯಾಗದೇ ಇರುವುದಕ್ಕೆ ಪ್ರಬಲ ಕಾರಣ ಆರ್ಥಿಕ ಮುಗ್ಗಟ್ಟು. ಮಹತ್ವದ ಭೂತಗಳ ಆರಾಧನಾ ಬಗೆಗಳಾದ ನೇಮ, ಕೋಲ, ಜಾಲಾಟ ಇತ್ಯಾದಿಗಳು ಬಹುವೆಚ್ಚದಾಯಕವಾದವುಗಳು. ಬಯಲಿನಲ್ಲಿ ನಡೆಯುವಂತಹವುಗಳು. ಆಟಿಯ ಮಳೆಯ ಆರ್ಭಟದಲ್ಲಿ ಚಪ್ಪರ ಹಾಕುವ, ಜನ ಸೇರಿಸುವ ಕಾರ್ಯ ಸುಲಭ ಸಾಧ್ಯವಲ್ಲ. ಈ ಅರ್ಥದಲ್ಲಿ ಪ್ರಾಕೃತಿಕವಾಗಿಯೂ ಆಟಿ, ಭೂತಗಳ ಆರಾಧನೆಗೆ ಸಕಾಲವಲ್ಲ.

ಹಿರಿಯರ ಕುಲೆಗಳಿಗೆ, ಗುಳಿಗ, ಕಲ್ಲುರ್ಟಿಗಳಿಗೆ ಗುಡಿಮಾಡಗಳ ಪ್ರತ್ಯೇಕ ಆವಾಸಸ್ಥಾನಗಳಿಲ್ಲ. ಹಿರಿಯರಿಗೆ ಮನೆಯ ಅಡುಗೆ ಮನೆ, ಕಲ್ಲುರ್ಟಿ ಗುಳಿಗರಿಗೆ ಕಾಸರ್ಕನ ಮರದ ಬುಡವೇ ವಾಸಸ್ಥಾನ. ಈ ಮೂರು ದೈವಗಳ ಆರಾಧನೆಗೆ ಚಪ್ಪರ ಹಾಕುವ ಜನ ಸೇರಿಸುವ ಪ್ರಮೇಯವಿಲ್ಲ. ಈ ದೈವಗಳಿಗೆ 'ಎಡೆ' ಹಾಕಿದರೆ ಸಂತೃಪ್ತಗೊಳ್ಳುವಷ್ಟು ಸರಳವಾಗಿವೆ. 'ಆಟಿದ ಅಗೆಲ್' ಇಟ್ಟು ಭಿನ್ನಹ ಮಾಡಿದರೆ ಸಾಕಾಗುತ್ತದೆ. ನೀರು ದೋಸೆ, ಕೋಳಿ ಸಾರು ಅಷ್ಟೇನು ವೆಚ್ಚದಾಯಕವಲ್ಲ.

'ಹಿರಿಯರ ಕುಲೆ', ಕುಲ್ಲುರ್ಟಿ, ಗುಳಿಗ ಈ ಮೂರು ದೈವಗಳು ಜನಪದರಲ್ಲಿ ಹಾಸು ಹೊಕ್ಕ ದೈವಗಳು. ತಮ್ಮೊಂದಿಗೆ ಜೊತೆಯಾಗಿ ಇರುವ ದೈವಗಳೆಂಬ ಭಾವನಾ ಸಂಬಂಧ ಜನಪದರಿಗೆ ಇವುಗಳೊಂದಿಗೆ ಇದೆ. ಆಟಿ ತಿಂಗಳಲ್ಲಿ ಜನಪದರನ್ನು ಕಾಡುವ ಮಾನಸಿಕ ದಾರುಣತೆ ಮತ್ತು ಭಯದ ಸ್ಥಿತಿಯನ್ನು ಹೋಗಲಾಡಿಸುವ ಅಲೌಕಿಕ ಶಕ್ತಿಗಳು ಬೇಕೆಬೇಕು. ಈ ದೃಷ್ಟಿಯಿಂದ ಸರಳ ಅಭಯದ ನೆಲೆಗಳಾಗಿ ಈ ದೈವಗಳು ಆರಾಧನೆಗೊಳ್ಳುತ್ತವೆ. ಹಿರಿಯರು ಸತ್ತು ಕುಲೆಗಳಾಗಿ ಜೊತೆಯಲ್ಲಿರುವರು. ಅಗೋಚರವಾಗಿದ್ದುಕೊಂಡು ನಮ್ಮನ್ನು ಹರಸುತ್ತಿರುವರು. ಗುಳಿಗವಾಯಪುತ್ರ ಹೊರಗಿದ್ದು ಬೆಳೆ ಜಾನುವಾರುಗಳನ್ನು ರಕ್ಷಿಸುವನು. ಶಕ್ತಿದೇವತೆ ಕಲ್ಲುರ್ಟಿ ತನ್ನ ಮಾಯಾವಿತನದಿಂದ ತೊಟ್ಟಿಲ ಮಗುವನ್ನು ಮೂರು ದಿನ ನೀರ ಬಾವಿಯಲ್ಲಿ ಮರೆ ಮಾಡಿಯೂ ಜೀವಂತವಾಗಿರಿಸಬಲ್ಲಳು. ಇಂತಹ ಮಹಿಳಾ ದೈವಗಳನ್ನು ಒಲಿಸಿಕೊಳ್ಳುವುದರಿಂದ ಆಟಿಯ ಧಾರುಣತೆಗೆ ಪರಿಹಾರ ಸಿಗುತ್ತದೆ ಎನ್ನುವ ಜನಪದರ ಆಶಯ ಇಲ್ಲಿದೆ. ಮನೆಯ ಆವರಣದ ಒಳ ಮತ್ತು ಹೊರ ರಕ್ಷಕವಾಗಿ ಈ ದೈವಗಳು ಆರಾಧನೆ ಪಡೆಯುತ್ತವೆ".[೨೨] 'ಆಟಿ' ತಿಂಗಳು ಮಳೆಗಾಲದ ಮಧ್ಯಭಾಗವಾಗಿದ್ದರೂ ಮಳೆ ಮತ್ತು ಬಿಸಿಲುಗಳಿಂದಾಗಿ ಹವಾಮಾನದಲ್ಲಿ ಸ್ಥಿತ್ಯಂತರ ಉಂಟಾಗುತ್ತದೆ. ಈ ವಾತಾವರಣದ ಏರುಪೇರಿನಿಂದಾಗಿ ಅನೇಕ ರೋಗ ರುಜಿನಗಳು ಕಾಣಿಸಿಕೊಳ್ಳುತ್ತವೆ. ಇದರಿಂದ ಜನರಲ್ಲಿ ಸಹಜವಾಗಿಯೇ ಭಯದ ವಾತಾವರಣ ಉಂಟಾಗುತ್ತದೆ. ಅಂದರೆ 'ಆಟಿ' ತಿಂಗಳು ಮಳೆ ಬಿಸಿಲುಗಳ ಸಂಕ್ರಮಣ ಕಾಲಘಟ್ಟ. ಹಾಗಾಗಿ "ಎರಡು ವಿರುದ್ಧ ಪ್ರಕಾರ ವರ್ಗಗಳ ನಡುವಿನ 'ಸಂಕ್ರಮಣ' ಅಥವಾ ಸ್ಥಿತ್ಯಂತರದ ಸ್ಥಿತಿಯು (Transition between opposed catageries) ಜನರಲ್ಲಿ ಅತ್ಯಂತ ಭಯ ಮತ್ತು ಸಂತೋಷದ ಭಾವನೆಗಳನ್ನು ಉಂಟುಮಾಡುತ್ತದೆ. ಈ ದೃಷ್ಟಿಯಿಂದ ಗಮನಿಸಿದಾಗ ಸೌರಮಾನ ಪದ್ಧತಿಯಂತೆ ಕಾಲಮಾಪನ ಮಾಡುವ ತುಳುವ ಸಂಸ್ಕೃತಿಯಲ್ಲಿ ಸಂಕ್ರಮಣ (ಸ್ಥಿತ್ಯಂತರ)ವೂ ವಿಶೇಷ ಮಹತ್ವವನ್ನು ಪಡೆದಿರುವುದು, ಆಚರಣೆ ಹಬ್ಬಗಳನ್ನು ಹೊಂದಿರುವುದು ಮುಖ್ಯವೆನಿಸುತ್ತದೆ. ಅದರಲ್ಲಿಯೂ ಮಳೆಗಾಲದ ಆರಂಭವಾದ ಬಳಿಕದ ಸಂಕ್ರಮಣ ಹಾಗೂ ಅನಂತರದ ತಿಂಗಳು 'ಆಟಿ'ಯೂ ಹವಾಮಾನದ ಸ್ಥಿತ್ಯಂತರದ ದೃಷ್ಟಿಯಿಂದಲೂ ಯೋಗ್ಯವಾಗಿದೆ. ಬೇಸಗೆ ಮತ್ತು ಮಳೆಯಂತಹ ಎರಡು ವಿರುದ್ಧ ಋತುಗಳು ಒಂದರ ಬಳಿಕ ಇನ್ನೊಂದು ಬಂದಾಗ ಹವಾಮಾನದ ವ್ಯತ್ಯಾಸವು ಮನುಷ್ಯನ ಬದುಕಿನ ಮೇಲೆ ಪರಿಣಾಮವನ್ನುಂಟು ಮಾಡುತ್ತದೆ. ಇವುಗಳಲ್ಲಿ ಬಹಳ ಮುಖ್ಯವಾದವು ರೋಗಗಳು. ಸೂರ್ಯನ ಬಿಸಿಲಿನಲ್ಲಿ ಇರಲು ಸಾಧ್ಯವಾಗದ ಬ್ಯಾಕ್ಟೀರಿಯದ

ಕ್ರಿಮಿಗಳು ಮಳೆಗಾಲದಲ್ಲಿ ನೀರಿನ ತೇವದಿಂದ ಆಶ್ರಯ ಪಡೆದು ಕ್ರಿಯಾಶೀಲವಾಗುತ್ತವೆ. ಬಹಳ ಬೇಗನೆ ತಮ್ಮ ಚಟುವಟಿಕೆಗಳಿಂದ ರೋಗವನ್ನುಂಟುಮಾಡಿ ಅದಕ್ಕಿಂತಲೂ ಬೇಗನೆ ಅವು ಹರಡುವಂತೆ ಮಾಡುತ್ತವೆ. ಇಂತಹ ರೋಗಗಳನ್ನು ನಿವಾರಿಸಲು ಮಂತ್ರ ವಿದ್ಯೆಯ ಮೊರೆ ಹೋಗುತ್ತಿದ್ದ ಜನಪದರ ಸಂತೃಪ್ತಿಗಾಗಿ ಆಟಿ ಕಳೆಂಜದ ಪರಿಕಲ್ಪನೆ ಹುಟ್ಟಿಕೊಂಡಿರಬಹುದು. ಎರಡು ವಿಭಿನ್ನ ಋತುಗಳ ಸಂಕ್ರಮಣದ ಸಂದರ್ಭದಲ್ಲಿ ಜನಪದ ಮನಸ್ಸಿನಲ್ಲಿ ಹುಟ್ಟಿಕೊಳ್ಳಬಹುದಾದ ವೈರುಧ್ಯಗಳನ್ನು ನಿವಾರಿಸಿ ಮಾನಸಿಕ ಸಮಸ್ಥಿತಿಯನ್ನು ಉಂಟುಮಾಡುವುದು ಆಟಿ ಕಳೆಂಜದಂತಹ ಮಾಂತ್ರಿಕ 'ಜನಪದ ಕಲೆ'ಯ ಉದ್ದೇಶವಾಗಿತ್ತು. ಈ ಕಾಲದಲ್ಲಿ ಮನುಷ್ಯರಿಗಾಗಲೀ, ಪ್ರಾಣಿಗಳಿಗಾಗಲೀ ಬರುವ ಮಾರಿಯನ್ನು ನಿವಾರಣೆ ಮಾಡುವ ಅಥವಾ ಪರಿಹಾರ ಮಾಡುವ ಮಾಂತ್ರಿಕತೆಯೂ 'ಆಟಿಕಳೆಂಜ'ದ ತಿರುಳು ಅಥವಾ ಕೆಚ್ಚು. (core) ಇಂತಹ ಮಂತ್ರ ವಿದ್ಯೆಯ ಕೆಲಸವನ್ನು ಮಾಡುವ ಮಂತ್ರವಾದಿಯಾಗಿ ಆಟಿ ಕಳೆಂಜ ಕಾಣಿಸಿಕೊಳ್ಳುತ್ತಾನೆ. 'ಮಾರಿ' ಎನ್ನುವುದಕ್ಕೆ 'ರೋಗ' ಎನ್ನುವ ಅರ್ಥ ರೂಢಿಯಲ್ಲಿದೆ".[೨೩] "ಆಟಿ ಕಳೆಂಜದ ಈ ಆಶಯಕ್ಕೆ ಪೂರಕವಾಗಿಯೇ ಆಟಿ ತಿಂಗಳ ಅಮಾವಾಸ್ಯೆಯಂದು ಬೆಳೆ ಹಾಗೂ ಮನುಷ್ಯನ ಆರೋಗ್ಯ ಸಂರಕ್ಷಣೆಗಾಗಿ ಹಲವು ಬಗೆಯ ಕ್ರಿಯಾಚರಣೆಗಳು ನಡೆಯುತ್ತವೆ. ಈ ಎಲ್ಲಾ ಕ್ರಿಯಾಚರಣೆಗಳು ಮುಖ್ಯವಾಗಿ ಉತ್ಪಾದನೆಗೆ ಸಂಬಂಧಪಟ್ಟವುಗಳು."[೨೪] 'ಆಟಿ' ತಿಂಗಳಲ್ಲಿ ತುಳುನಾಡಿನಲ್ಲಿ ಎಷ್ಟೊಂದು ಬಡತನ ಇತ್ತೆಂದರೆ "ಹೊಸ ಬೆಳೆ ಇನ್ನೂ ಬೆಳೆದಿರುವುದಿಲ್ಲ. ಸುಗ್ಗಿಯ ಅಕ್ಕಿ ಮುಗಿದ ಕಾಲ. ಆದ್ದರಿಂದ ಜನರಿಗೆ ತಿನ್ನಲು, ಉಣ್ಣಲು ಬಹಳ ಕಷ್ಟದ ಕಾಲ. ಸಂಕಷ್ಟದ ಕಾಲ. ಅಕ್ಕಿಯ ಬದಲು ಬೇಯಿಸಿದ ಹಲಸಿನ ಬೀಜ ತಿನ್ನುವಂತಹ ಬಡತನ ಆವರಿಸಿಕೊಂಡಿರುವುದರಿಂದ ಈ ತಿಂಗಳು ಅನಿಷ್ಟದ ಕಾಲ."[೨೫] ಗೆಡ್ಡೆ ಗೆಣಸು, ನರೆ ಇತ್ಯಾದಿಗಳನ್ನು ಜನ ತಿನ್ನುತ್ತಿದ್ದರಂತೆ. ವಿಶೇಷವಾಗಿ ಪ್ರಕೃತಿಯಲ್ಲಿ ದೊರೆಯುವ ಸೊಪ್ಪುಗಳನ್ನು ಸೇವಿಸುತ್ತಿದ್ದರಂತೆ.

'ಆಟಿ' ತಿಂಗಳು ಅನಿಷ್ಟದ ಕಾಲವಾದ್ದರಿಂದ ಅನಿಷ್ಟ ನಿವಾರಣೆಯ ನೆಲೆಯಲ್ಲಿ 'ಆಟಿ ಅಮಾವಾಸ್ಯೆ'ಯ ಆಚರಣೆಗಳು ನಡೆಯುವಂತೆ 'ಆಟಿ ಕಳೆಂಜ'ನೂ ಮಾರಿ ಕಳೆಯಲು ಬರುವುದಿದೆ.

ತುಳುನಾಡಿನ ಮಲೆಕುಡಿಯ ಜನಾಂಗಕ್ಕೆ ಸಂಬಂಧಿಸಿದಂತೆ "ಸುಬ್ರಹ್ಮಣ್ಯ ಪ್ರದೇಶದಲ್ಲಿ ಆಟಿ ಅಮಾವಾಸ್ಯೆ ದಿನ ಕಲ್ಲುರ್ಟಿ ಭೂತಕ್ಕೆ ಆಹಾರ ಬಡಿಸುತ್ತಾರೆ, ಕಾರ್ಕಳ ಪ್ರದೇಶದಲ್ಲಿ ಗುಳಿಗ ಭೂತಕ್ಕೆ ಬಡಿಸುತ್ತಾರೆ. ಆ ದಿನ ಸಂಜೆ ಮಾಂಸದ ಅಡುಗೆಯನ್ನು ಮಾಡುತ್ತಾರೆ"[೨೬]

ಎಂದು ಹೇಳಲಾಗಿದೆ. 'ಮುಗೇರ' ಜನಾಂಗಕ್ಕೆ ಸಂಬಂಧಿಸಿದಂತೆ 'ಆಟಿ ಅಮಾವಾಸ್ಯೆ' ದಿನ 'ಪಾಲೆ' (ಹಾಲೆ) ಮರದ ಸಿಪ್ಪೆ ತರಲು ಮನೆಯ ಒಡತಿ ಹೋಗಬೇಕೆಂದೂ, ಪ್ರತಿಯೊಬ್ಬ ಸದಸ್ಯರೂ ಹೊಳೆಗೆ ಹೋಗಿ ದಾನ ಬಿಡಲೇಬೇಕೆಂದೂ, ದಾನದಲ್ಲಿ ಪಂಚ ವಿಧದ ಧಾನ್ಯಗಳು, ಒಂದು ನಾಣ್ಯ, ಹೂ ಇತ್ಯಾದಿಗಳು ಇರುತ್ತವೆ ಎಂದು ಹೇಳಲಾಗಿದೆ.[೨೭] ಒಟ್ಟಿನಲ್ಲಿ ವಕ್ತೃಗಳ ಮತ್ತು ವಿದ್ವಾಂಸರ ಅಭಿಪ್ರಾಯಗಳನ್ನು ಒಟ್ಟಾಗಿ ಗಮನಿಸುವಾಗ 'ಆಟಿ ಅಮಾವಾಸ್ಯೆ' ತುಳುವರ ವಾರ್ಷಿಕ ಆವರ್ತನದ ಪ್ರಮುಖ ಆಚರಣೆ ಎಂಬುದು ತಿಳಿಯುತ್ತದೆ. ಆಚರಣೆಯಲ್ಲಿ ಸಣ್ಣ ಪುಟ್ಟ ವ್ಯತ್ಯಾಸಗಳು ಕಂಡು ಬಂದರೂ ಮೂಲದಲ್ಲಿ ಆಚರಣೆ ಒಂದೇ ಆಗಿದ್ದಂತೆ ತೋರುತ್ತದೆ. ಈ ಆಚರಣೆಯಲ್ಲಿ ಕಂಡುಬರುವ ಸಣ್ಣ ಪುಟ್ಟ ವ್ಯತ್ಯಾಸಗಳಿಗೆ ಪ್ರಾದೇಶಿಕ ಮತ್ತು ಜನಾಂಗಿಕ ವ್ಯವಸ್ಥೆಗಳೇ ಕಾರಣಗಳಾಗಿರಬೇಕು. ಆದ್ದರಿಂದ 'ಆಟಿ ಅಮಾವಾಸ್ಯೆ' ಕೇವಲ ಒಂದು ಆಚರಣೆಯಲ್ಲ; ಹಲವು ಆಚರಣೆಗಳ ಸಂಗಮ ಮತ್ತು ವ್ಯಕ್ತಿಯ ದೈಹಿಕ, ಮಾನಸಿಕ ಆರೋಗ್ಯ ರಕ್ಷಣೆ ಮತ್ತು ಕೃಷಿ ಚಟುವಟಿಕೆಗಳ ಸಂರಕ್ಷಣೆಯೇ ಇದರ ಮೂಲ ಆಶಯವಾಗಿ ಕಂಡುಬರುತ್ತದೆ. 'ಆಟಿ ತಿಂಗೊಳುಡು ಕೇಟ್‌ಕೇಳಿ ಉಪ್ಪೊಡುಗೆ'(ಆಟಿ ತಿಂಗಳಲ್ಲಿ ಅಂಕೆ ಇರಬೇಕಂತೆ) ಎಂಬ ಗಾದೆಯೂ ಇದೆ. ಅಂದರೆ ಎಲ್ಲ ವಿಚಾರಗಳಲ್ಲೂ ಜತನವಾಗಿರಬೇಕೆಂಬ ನಂಬಿಕೆಯಿದೆ. ಕಾಲದ ನಿರಂತರತೆಯಲ್ಲಿ ತುಳುನಾಡಿನಲ್ಲಿ ಅಮಾವಾಸ್ಯೆ, ಹುಣ್ಣಿಮೆ ಮತ್ತು ಸಂಕ್ರಮಣಗಳಿಗೆ ಬಹಳ ಮಹತ್ವವಿದೆ. ಈ ದಿನಗಳಲ್ಲಿ ಒಳಿತು ಕೆಡುಕುಗಳು ಹೆಚ್ಚಾಗಿ ಸಂಭವಿಸುತ್ತವೆ ಎಂಬುದಾಗಿ ಜನಪದರು ನಂಬಿದ್ದಾರೆ. ಹಾಗಾಗಿ ಈ ದಿನಗಳಲ್ಲಿ ವಿಶೇಷವಾಗಿ ಆಚರಣೆ, ಆರಾಧನೆಗಳನ್ನು ನಡೆಸಿಕೊಂಡು ಬಂದಿದ್ದಾರೆ. ಅಂತಹ ದಿನಗಳಲ್ಲಿ 'ಆಟಿ ಅಮಾವಾಸ್ಯೆ' ಅತ್ಯಂತ ಮಹತ್ವದ್ದಾಗಿದೆ.

## ೬.೪: 'ಆಟಿ ಅಮಾವಾಸ್ಯೆ'ಗೆ ಸಮಾನವಾದ ಆಚರಣೆಗಳು

ಅಮಾವಾಸ್ಯೆಯ ಆಚರಣೆಗಳಿಗೆ ಸಂಬಂಧಿಸಿದಂತೆ ನೋಡಿದರೆ ಕರ್ನಾಟಕದಲ್ಲಿ ಪ್ರತಿಯೊಂದು ಅಮಾವಾಸ್ಯೆಯೂ ಒಂದಲ್ಲ ಒಂದು ರೀತಿಯ ಆಚರಣೆಗೆ ಸಂಬಂಧಿಸಿರುವುದು ಕಂಡುಬರುತ್ತದೆ. ಉದಾಹರಣೆಗೆ-'ಕರಗದ ಅಮಾವಾಸ್ಯೆ', 'ಬಾದಾಮಿ ಅಮಾವಾಸ್ಯೆ', 'ಮಣ್ಣೆತ್ತಿನ ಅಮಾವಾಸ್ಯೆ', 'ಭೀಮನ ಅಮಾವಾಸ್ಯೆ', 'ದಿವಸೀ ಅಮಾಸೆ', 'ಬೆನಕದ ಅಮಾಸಿ', 'ಪಿತೋರಿ ಅಮಾಸಿ', 'ಸರ್ವಪಿತೃ ಅಮಾವಾಸ್ಯೆ', 'ದೀಪಾವಳಿ ಅಮಾವಾಸ್ಯೆ', 'ಛಟ್ಟೀ ಅಮಾವಾಸ್ಯೆ',

‘ಎಳ್ಳಮಾವಾಸ್ಯೆ’, ‘ಅವರಾತ್ರಿ ಅಮಾಸಿ’, ‘ಇಸಾಳಿ ಅಮಾಸಿ’, ‘ಶಿವರಾತ್ರಿ ಅಮಾವಾಸ್ಯೆ’, ‘ಯುಗಾದಿ ಅಮಾವಾಸ್ಯೆ’–ಇತ್ಯಾದಿ ಅಮಾವಾಸ್ಯೆ ಆಚರಣೆಗಳನ್ನು ಉಲ್ಲೇಖಿಸಬಹುದು.[೨೮]

### ೬.೫: ‘ಆಟಿ ಅಮಾವಾಸ್ಯೆ’ ಆಚರಣೆಯ ಒಟ್ಟೂ ಸ್ವರೂಪ

ಒಟ್ಟಾರೆಯಾಗಿ ‘ಆಟಿ ಅಮಾವಾಸ್ಯೆ’ಗೆ ಸಂಬಂಧಿಸಿದಂತೆ ಅದರ ಒಟ್ಟು ಸ್ವರೂಪವನ್ನು ಈ ಕೆಳಗಿನಂತೆ ಗುರುತಿಸಬಹುದು.

೧. ‘ಆಟಿ’ ತಿಂಗಳಲ್ಲಿ ಬರುವ ಅಮಾವಾಸ್ಯೆಯನ್ನು ‘ಆಟಿ ಅಮಾವಾಸ್ಯೆ’ ಎಂದು ಆಚರಿಸಲಾಗುತ್ತದೆ.

೨. ‘ಆಟಿ’ ತಿಂಗಳು ವಿಪರೀತ ಮಳೆ ಸುರಿಯುವ ಋತುವಾಗಿದ್ದು ಅನಿಷ್ಟದ ತಿಂಗಳು ಎಂಬುದು ತುಳುವರ ನಂಬಿಕೆ.

೩. ಸಾಮಾಜಿಕ, ಸಾಂಸ್ಕೃತಿಕ ಇಲ್ಲವೆ ಯಾವುದೇ ಧಾರ್ಮಿಕ ಕಾರ್ಯಕ್ರಮಗಳನ್ನು ‘ಆಟಿ’ತಿಂಗಳಲ್ಲಿ ನಡೆಸುವುದಿಲ್ಲ.

೪. ಅನ್ನಾಹಾರಕ್ಕೆ ಕೊರತೆ ಉಂಟಾಗುವ ತಿಂಗಳು ಮತ್ತು ವಿಪರೀತ ಮಳೆಯ ಕಾರಣದಿಂದ ಯಾವುದೇ ರೀತಿಯ ಬೆಳೆಗಳಿಗೆ ಹೆಚ್ಚಾಗಿ ರೋಗ ಇಲ್ಲವೆ ಕ್ರಿಮಿಕೀಟಗಳ ಬಾಧೆ ಕಂಡುಬರುತ್ತದೆ.

೫. ನಿಸರ್ಗದಲ್ಲಿ ದೊರೆಯುವ ಹಸಿರು ಚಿಗುರು ಮತ್ತು ಗೆಡ್ಡೆಗೆಣಸುಗಳನ್ನು ‘ಆಟಿ’ತಿಂಗಳಲ್ಲಿ ತುಳುವರು ವಿಶೇಷವಾಗಿ ಸೇವಿಸುತ್ತಾರೆ. ಅವುಗಳಲ್ಲಿ ಔಷಧೀಯ (ರೋಗನಿರೋಧಕ) ಗುಣಗಳಿರುತ್ತವೆ ಎಂಬುದಾಗಿ ಅವರ ನಂಬಿಕೆಯಾಗಿದೆ.

೬. ‘ಆಟಿ ಅಮಾವಾಸ್ಯೆ’ ದಿನ ‘ಪಾಲೆ’(ಹಾಲೆ)ರಸ ಕುಡಿಯುವ ಪದ್ಧತಿಯಿದೆ.

೭. ಭೂತ ಮತ್ತು ನಾಗಗಳಿಗೆ ‘ಪರ್ವ’, ‘ತಂಬಿಲ’ ನಡೆಸುತ್ತಾರೆ.

೮. ಬೇಸಾಯದ ಗದ್ದೆಗಳಿಗೆ, ಗೊಬ್ಬರದ ರಾಶಿಗೆ ಮತ್ತು ಇತರ ತರಕಾರಿ ಗಿಡದ ಬುಡಗಳಲ್ಲಿ ‘ಕಳ್ಳಿ’, ‘ಕಾಪು’ ಕುತ್ತುವ ಕ್ರಮವಿದೆ.

೯. ಈ ದಿನ ಬೇಟೆಯಾಡುವುದು, ಕೋಳಿ ಅಂಕ, ಚೆನ್ನೆಮಣೆ ಆಟ, ತೆಂಗಿನಕಾಯಿ ಕುಟ್ಟುವಂತಹ ಜಾನಪದ ಆಟಗಳನ್ನು ನಡೆಸುತ್ತಾರೆ.

೧೦. 'ಆಟಿ ಅಮಾವಾಸ್ಯೆ'ಯಂದು ಬೆಳಿಗ್ಗೆ 'ಮರಚೇವು'(ಮರಕೆಸು)ವಿನ ಎಲೆಯ 'ಪತ್ರೊಡೆ'(ಅಕ್ಕತಿಂಡಿ) ಮಾಡಿ ಉಪಾಹಾರವಾಗಿ ಸೇವಿಸುತ್ತಾರೆ. ರಾತ್ರಿಗೆ ಕೋಳಿ-ರೊಟ್ಟಿ ವಿಶೇಷ ಅಡುಗೆಯಾಗಿರುತ್ತದೆ.

೧೧. ಸೂತಕ ಬಂದಲ್ಲಿ ಈ ಆಚರಣೆಯನ್ನು ಮಾಡುವುದಿಲ್ಲ.

---

**ಅಡಿಟಿಪ್ಪಣಿ**

೧. **ತುಳು ನಿಘಂಟು:** ಸಂಪುಟ-೧: ೧೯೮೮: ಡಾ.ಯು.ಪಿ.ಉಪಾಧ್ಯಾಯ: ರಾಷ್ಟ್ರಕವಿ ಗೋವಿಂದ ಪೈ ಸಂಶೋಧನ ಕೇಂದ್ರ, ಉಡುಪಿ: ಪುಟ-೨೨೮

೨. **ಪೂಕರೆ ಮತ್ತು ಇತರ ಜಾನಪದೀಯ ಲೇಖನಗಳು:** ೨೦೦೪: ಪೂವಪ್ಪ ಕಣಿಯೂರು: ರಾಜ್ ಪ್ರಕಾಶನ, ಮೈಸೂರು; ಪುಟ-೬೨,೬೩

೩. **ಅದೇ:** ಪೂರ್ವೋಕ್ತ: ಪುಟ ೬೩

೪. **ಸಸ್ಯ ಜಾನಪದ:** ಡಾ.ಬಿ.ಶಿವರಾಮ ಶೆಟ್ಟಿ: ೨೦೦೦: ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ: ಪುಟ- ೨೦,೨೧

೫. **ಕನ್ನಡ ಜಾನಪದ ವಿಶ್ವಕೋಶ :** ಸಂಪುಟ-೨: ೧೯೮೫: (ಸಂ.) ಡಾ.ಚಂದ್ರಶೇಖರ ಕಂಬಾರ: ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು : ಪುಟ-೧೧೨೪

೬. **ಅದೇ:** ಪೂರ್ವೋಕ್ತ: ಪುಟ-೧೪೩೭

೭. **ಸಸ್ಯ ಜಾನಪದ:** ೨೦೦೦: ಡಾ.ಬಿ.ಶಿವರಾಮ ಶೆಟ್ಟಿ: ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ: ಪುಟ- ೧೮

೮. **ಅದೇ:** ಪೂರ್ವೋಕ್ತ: ಪುಟ-೧೯

೯. **ಅದೇ:** ಪೂರ್ವೋಕ್ತ: ಪುಟ-೧೯

೧೦. **ತುಳು ಜಾನಪದ ಕಾವ್ಯ-ಇಹಪರ ಲೋಕದೃಷ್ಟಿ:** ೨೦೦೮: ಡಾ.ರಾಜಶ್ರೀ: ಶ್ರೀ ಧ. ಮಂ. ತುಳುಪೀಠ, ಮಂಗಳೂರು ವಿಶ್ವವಿದ್ಯಾನಿಲಯ: ಪುಟ-೩೨೬

೧೧. **ಜನಪದ ಸುತ್ತ ಮುತ್ತ:** ೧೯೯೨: ವಾಮನ ನಂದಾವರ: ಪ್ರಜಾಬಂಧು ಪ್ರಕಾಶನ, ಮಂಗಳೂರು: ಪುಟ-೨೧

೧೨. **ಕನ್ನಡಾನುವಾದ: ತುಳು ಸಂಸ್ಕೃತಿದ ಪೊಲಬು:** ೨೦೦೮: ಡಾ.ಪಾಲ್ತಾಡಿ ರಾಮಕೃಷ್ಣ ಆಚಾರ್: ಕರ್ನಾಟಕ ತುಳು ಸಾಹಿತ್ಯ ಅಕಾಡೆಮಿ: ಪುಟ-೪೪, ೪೫

೧೩. **ಅದೇ:** ಪೂರ್ವೋಕ್ತ: ಪುಟ-೪೬

೧೪. **ಪಾಣರ ಜನಾಂಗ-ಬದುಕು ಮತ್ತು ಸಂಸ್ಕೃತಿ; ತುಳುನಾಡಿನಲ್ಲಿ ಭೂತಾರಾಧನೆ:** ೨೦೦೪: ಡಾ. ಪಾಲ್ತಾಡಿ ರಾಮಕೃಷ್ಣ ಆಚಾರ್: ಪ್ರಸಾರಾಂಗ, ಮಂಗಳೂರುವಿಶ್ವವಿದ್ಯಾಲಯ: ಪುಟ-೪೩

೧೫. **ಸೇರಿಗೆ:** ೨೦೦೦: (ಸಂ.)ಡಾ.ಕೆ.ಚಿನ್ನಪ್ಪ ಗೌಡ: ಲೇಖನ: ಅಮಾವಾಸ್ಯೆ-ಸಾಂಸ್ಕೃತಿಕ ವಿವೇಚನೆ: ದಯಾಮಣಿ ಕೆ.: ಮದಿಪು ಪ್ರಕಾಶನ, ಮಂಗಳ ಗಂಗೋತ್ರಿ: ಪುಟ-೩೦೪

೧೬. **ಕನ್ನಡ ಜಾನಪದ ವಿಶ್ವಕೋಶ:** ಸಂಪುಟ–೧: ೧೯೮೫: (ಸಂ.)ಡಾ.ಚಂದ್ರಶೇಖರ ಕಂಬಾರ: ಪೂರ್ವೋಕ್ತ: ಪುಟ–೩೭೧

೧೭. **ಅದೇ:** ಸಂಪುಟ–೨: ಪೂರ್ವೋಕ್ತ: ಪುಟ–೧೨೫೪

೧೮. **ಅದೇ:** ಸಂಪುಟ–೧: ಪೂರ್ವೋಕ್ತ: ಪುಟ–೩೮೨

೧೯. **ಸಸ್ಯ ಜಾನಪದ:** ೨೦೦೦: ಡಾ.ಬಿ.ಶಿವರಾಮ ಶೆಟ್ಟಿ: ಪೂರ್ವೋಕ್ತ: ಪುಟ: ೧೬, ೧೭

೨೦. **ಬಂಟರು ಒಂದು ಸಮಾಜೋ ಸಾಂಸ್ಕೃತಿಕ ಅಧ್ಯಯನ:** ೨೦೦೪: ಇಂದಿರಾ ಹೆಗ್ಗಡೆ: ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು: ಪುಟ: ೪೭೩

೨೧. **ಪೂಕರೆ ಮತ್ತು ಇತರ ಜಾನಪದೀಯ ಲೇಖನಗಳು:** ೨೦೦೪: ಪೂವಪ್ಪ ಕಣಿಯೂರು: ಪೂರ್ವೋಕ್ತ: ಪುಟ–೬೬

೨೨. **ಅದೇ:** ಪೂರ್ವೋಕ್ತ: ಪುಟ–೬೬

೨೩. **ಆನ್ವಯಿಕ ಜಾನಪದ: ೧೯೮೫:** ವಿವೇಕ ರೈ: ಮಂಗಳೂರು ವಿಶ್ವವಿದ್ಯಾನಿಲಯ, ಮಂಗಳ ಗಂಗೋತ್ರಿ: ಪುಟ: ೩೫, ೩೬

೨೪. **ಸಸ್ಯ ಜಾನಪದ:** ೨೦೦೦: ಡಾ.ಬಿ.ಶಿವರಾಮ ಶೆಟ್ಟಿ: ಪೂರ್ವೋಕ್ತ: ಪುಟ–೧೬

೨೫. **ಕರಾವಳಿ ಜಾನಪದ:** ೧೯೯೦: ಪುರುಷೋತ್ತಮ ಬಿಳಿಮಲೆ: ಪುಟ–೬

೨೬. **ಮಲೆಕುಡಿಯರು:** ೧೯೯೬: ಬಿ. ಎ. ವಿವೃಕ ರೈ, ಡಿ.ಯದುಪತಿ ಗೌಡ: ಪ್ರಸಾರಾಂಗ, ಮಂಗಳೂರು ವಿಶ್ವವಿದ್ಯಾಲಯ: ಪುಟ–೧೮

೨೭. **ಮುಗೇರರು ಜನಾಂಗ–ಜಾನಪದ ಅಧ್ಯಯನ:** ೧೯೯೭: ಡಾ.ಅಭಯ ಕೌಕ್ರಾಡಿ: ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ಕರ್ನಾಟಕ ತುಳು ಸಾಹಿತ್ಯ ಅಕಾಡೆಮಿ, ಮಂಗಳೂರು: ಪುಟ: ೩೭

೨೮. **ಕನ್ನಡ ಜಾನಪದ ವಿಶ್ವಕೋಶ:** ಸಂಪುಟ–೧: ೧೯೮೫: (ಸಂ.) ಡಾ.ಚಂದ್ರಶೇಖರ ಕಂಬಾರ: ಪೂರ್ವೋಕ್ತ: ಪುಟ–೬೯

■■■

# ಅಧ್ಯಾಯ–೨

## ತುಳುನಾಡಿನ ವಾರ್ಷಿಕ ಆವರ್ತನದ ಆಚರಣೆ–'ನಾಗರ ಪಂಚಮಿ'

೨.೧: 'ನಾಗರ ಪಂಚಮಿ'–ಅರ್ಥ

೨.೨: 'ನಾಗರ ಪಂಚಮಿ'–ಆಚರಣೆಯ ವಿಧಾನ

೨.೩ 'ನಾಗರ ಪಂಚಮಿ' ಆಚರಣೆ–ವಿಶ್ಲೇಷಣೆ

೨.೩.೧: ನಾಗಾರಾಧನೆಯ ಮೂಲ ಮತ್ತು ವೈದಿಕ ಪ್ರಭಾವ

೨.೩.೨: ತುಳುನಾಡಿನಲ್ಲಿ ನಾಗಾರಾಧನೆ–ಪ್ರಭೇದಗಳು

೨.೩.೩: ನಾಗಾರಾಧನೆ ವ್ಯಾಪ್ತಿ

೨.೩.೪: ನಾಗದೋಷ–ನಂಬಿಕೆ

೨.೪: 'ನಾಗರ ಪಂಚಮಿ'–ಆಚರಣೆಯ ಒಟ್ಟು ಸ್ವರೂಪ

# ಅಧ್ಯಾಯ-೭

## ತುಳುನಾಡಿನ ವಾರ್ಷಿಕ ಆವರ್ತನದ ಆಚರಣೆ-'ನಾಗರ ಪಂಚಮಿ'

೭.೧: 'ನಾಗರ ಪಂಚಮಿ'-ಅರ್ಥ

೭.೨: 'ನಾಗರ ಪಂಚಮಿ'-ಆಚರಣೆಯ ವಿಧಾನ

೭.೩ 'ನಾಗರ ಪಂಚಮಿ' ಆಚರಣೆ-ವಿಶ್ಲೇಷಣೆ

೭.೩.೧: ನಾಗಾರಾಧನೆಯ ಮೂಲ ಮತ್ತು ವೈದಿಕ ಪ್ರಭಾವ

೭.೩.೨: ತುಳುನಾಡಿನಲ್ಲಿ ನಾಗಾರಾಧನೆ-ಪ್ರಭೇದಗಳು

೭.೩.೩: ನಾಗಾರಾಧನೆ ವ್ಯಾಪ್ತಿ

೭.೩.೪: ನಾಗದೋಷ-ನಂಬಿಕೆ

೭.೪: 'ನಾಗರ ಪಂಚಮಿ'-ಆಚರಣೆಯ ಒಟ್ಟೂ ಸ್ವರೂಪ

# ಅಧ್ಯಾಯ-೭

# ತುಳುನಾಡಿನ ವಾರ್ಷಿಕ ಆವರ್ತನದ ಆಚರಣೆ 'ನಾಗರ ಪಂಚಮಿ'

## ೭.೧: 'ನಾಗರ ಪಂಚಮಿ'-ಅರ್ಥ

'ಆಟಿ ಅಮಾವಾಸ್ಯೆ' ಕಳೆದು ಬರುವ ಪಂಚಮಿಯಂದು 'ನಾಗರ ಪಂಚಮಿ' ಬರುತ್ತದೆ. ಹಾಗಾಗಿ ಇದು ಸಾಮಾನ್ಯವಾಗಿ 'ಆಟಿ' ತಿಂಗಳಲ್ಲಿಯೇ ಬರುತ್ತದೆ. ಕೆಲವೊಮ್ಮೆ 'ಸೋಣ' ತಿಂಗಳಲ್ಲಿಯೂ ಬರುವುದಿದೆ. "ತುಳುನಾಡು ನಾಗಲೋಕವಾಗಿತ್ತೆಂದೂ, ಇಲ್ಲಿಗೆ ನಾಗಬ್ರಹ್ಮವೆಂಬ ದೈವತವೇ ಸೃಷ್ಟಿಕರ್ತ ಸ್ಥಾನದಲ್ಲಿರುವುದಾಗಿಯೂ ಜನಪದ ಪ್ರತೀತಿ ಇದೆ. ಬ್ರಹ್ಮ, ನಾಗಬ್ರಹ್ಮ, ನಾಗಲಿಂಗ, ಬ್ರಹ್ಮಲಿಂಗ, ನಾಗಬ್ರಹ್ಮಲಿಂಗೇಶ್ವರ, ನಾಗಯಕ್ಷ(ಕ್ಷಿ) ಬೆರ್ಮೆರ್, ಶೇಷನಾಗ, ಅನಂತ ಪದ್ಮನಾಭ, ಸುಬ್ರಹ್ಮಣ್ಯ ಮೊದಲಾದ ಬೇರೆ ಬೇರೆ ನಾಮರೂಪಗಳಿಂದ ಆತನನ್ನು ತುಳುನಾಡಿನಲ್ಲಿ ಆರಾಧಿಸುತ್ತಾರೆ."[೧] 'ನಾಗರ ಪಂಚಮಿ' ಎಂಬುದಕ್ಕೆ "ಶ್ರಾವಣಮಾಸದ ಪಂಚಮಿ; ನಾಗರ ಪಂಚಮಿ; ಚಾಂದ್ರಮಾನ ಪಕ್ಷದ ಐದನೆಯ ದಿನ; ನಾಗದೇವರ ಪೂಜೆಗೆ ಪ್ರಶಸ್ತವಾದ ದಿನ; The fifth day of the fortnight in the fifth lunar month; festival day for the serpent god"[೨] ಎಂಬ ಅರ್ಥ ವಿವರಣೆ ತುಳು ನಿಘಂಟಿನಲ್ಲಿದೆ.

## ೭.೨: 'ನಾಗರ ಪಂಚಮಿ'-ಆಚರಣೆಯ ವಿಧಾನ

'ನಾಗರ ಪಂಚಮಿ'ಯ ಪ್ರಯುಕ್ತ ಈ ದಿನ ಹೆಂಗಸರು ಮನೆಯನ್ನು ಸೆಗಣಿ ಸಾರಿಸಿ ಶುದ್ಧಗೊಳಿಸುತ್ತಾರೆ. 'ನಾಗರ ಪಂಚಮಿ'ಯ ದಿನ ತುಳುನಾಡಿನ ಉದ್ದಗಲದಲ್ಲೂ ಎಲ್ಲ ಜಾತಿ ಜನಾಂಗಗಳವರೂ ನಾಗನಿಗೆ ಹಾಲು ಎರೆಯುತ್ತಾರೆ. ಹಾಗಾಗಿ ನಾಗನಿಗೆ ಹಾಲು ಎರೆಯುವುದು ಮತ್ತು 'ಪರ್ವ', 'ತಂಬಿಲ' ನಡೆಸುವುದು 'ನಾಗರ ಪಂಚಮಿ' ಆಚರಣೆಯ ವಿಶೇಷತೆಯಾಗಿ ಕಂಡುಬರುತ್ತದೆ. ಅರ್ಧ ಇಲ್ಲವೆ ಒಂದು ಕುಡ್ತೆ ದನದ ಹಾಲು ಹಿಡಿದುಕೊಂಡು 'ನಾಗರ ಪಂಚಮಿ' ದಿನ 'ನಾಗಬನ'ಕ್ಕೆ ತುಳುವರು ಹೋಗುತ್ತಾರೆ. 'ಪರ್ವ' ಮಾಡುವವರು ೧ ಸೇರು ಬೆಳ್ತಿಗೆ ಅಕ್ಕಿ, ೧ ತೆಂಗಿನ ಕಾಯಿ, ೧ 'ಬೊಂಡ' (ಸೀಯಾಳ), ಸ್ವಲ್ಪ ಅರಳು, ಅರಸಿನ, ಬೆಲ್ಲ, ಹಣ್ಣು ಇತ್ಯಾದಿ ವಸ್ತುಗಳನ್ನು ಒಟ್ಟುಮಾಡಿ 'ನಾಗಬನ'ಕ್ಕೆ ಹೋಗುತ್ತಾರೆ. ಅಲ್ಲಿಗೆ ಮೊದಲೇ ಬರಹೇಳಿದ ಪುರೋಹಿತರೊಬ್ಬರು ಬರುತ್ತಾರೆ. ಆ ಬ್ರಾಹ್ಮಣ ಪುರೋಹಿತರ ಮೂಲಕ ಹಾಲು ಎರೆಯುವುದು, 'ಪರ್ವ' ಇತ್ಯಾದಿ ನಡೆಯುತ್ತದೆ. ಜನ ಭಕ್ತಿಯಿಂದ

ಕೈಮುಗಿದು ಪ್ರಸಾದ ಸ್ವೀಕರಿಸಿ ಮನೆಗೆ ಹಿಂತಿರುಗುತ್ತಾರೆ. ಈ ದಿನ ವಿಶೇಷ ಅಡುಗೆ ಮಾಡುವ ಕ್ರಮವಾಗಲಿ, ಬೇಟೆಯಾಡುವುದಾಗಲಿ, ಕೋಳಿಅಂಕ ನಡೆಸುವುದಾಗಲಿ, ತೆಂಗಿನಕಾಯಿ ಕುಟ್ಟುವುದಾಗಲಿ ಇರುವುದಿಲ್ಲ. ಮಾತ್ರವಲ್ಲ, ಕುಟುಂಬದಲ್ಲಿ ಹುಟ್ಟು ಸಾವುಗಳ ಸೂತಕಗಳು ಬಂದರೆ ಈ ಆಚರಣೆಯನ್ನು ನಡೆಸುವುದಿಲ್ಲ. (ನಾಗಾರಾಧನೆಗೆ ಸಂಬಂಧಿಸಿದಂತೆ ಅನುಬಂಧ ಪುಟ–V ರಲ್ಲಿನ ಚಿತ್ರ–೧.೪.೧. ರಿಂದ ೧.೪.೧೫ ಇವುಗಳನ್ನು ಗಮನಿಸಬಹುದು.)

### ೭.೩: 'ನಾಗರ ಪಂಚಮಿ' ಆಚರಣೆ–ವಿಶ್ಲೇಷಣೆ

#### ೭.೩.೧: ನಾಗಾರಾಧನೆಯ ಮೂಲ ಮತ್ತು ವೈದಿಕ ಪ್ರಭಾವ

'ನಾಗರ ಪಂಚಮಿ' ನಾಗಾರಾಧನೆಗೆ ಸಂಬಂಧಿಸಿದ ವಿಶಿಷ್ಟ ದಿನ. ಈ ನಾಗಾರಾಧನೆ ವಿಶ್ವದ ಅನೇಕ ದೇಶಗಳಲ್ಲಿ ಕಂಡು ಬರುತ್ತದೆ. ಅಂತೆಯೇ ನಾಗಾರಾಧನೆ ಅನೇಕ ರೀತಿಯಲ್ಲೂ ಕಂಡುಬರುತ್ತದೆ. 'ನಾಗರ ಪಂಚಮಿ'ಯನ್ನು ಮಾತ್ರ ನಾಗಾರಾಧನೆಗೆ ಸಂಬಂಧಿಸಿದಂತೆ ವಿಶಿಷ್ಟ ದಿನವಾಗಿ ಭಾರತದಾದ್ಯಂತ ಆಚರಿಸಲಾಗುತ್ತದೆ. ಅಂತೆಯೇ ತುಳುನಾಡಿನಲ್ಲಿಯೂ 'ನಾಗರ ಪಂಚಮಿ' ವಾರ್ಷಿಕಾವರ್ತನದ ಆಚರಣೆಯಾಗಿ ರೂಢಿಯಲ್ಲಿದೆ. ನಾಗಾರಾಧನೆ ನಾಗಪೂಜೆಗಳ ಕುರಿತು ಬಹಳಷ್ಟು ಸಂಶೋಧನೆಗಳು ನಡೆದಿವೆ. ಗ್ರಂಥಗಳೂ ಪ್ರಕಟವಾಗಿವೆ. ಡಾ.ಅಮೃತ ಸೋಮೇಶ್ವರ ಅವರು ನಾಗಪೂಜೆಯ ಕುರಿತು ವಿಸ್ತೃತವಾಗಿ ಚರ್ಚಿಸಿದ್ದಾರೆ.[೩]

ಮೇಲುನೋಟಕ್ಕೆ 'ನಾಗರಪಂಚಮಿ' ಆಚರಣೆಯು ವೈದಿಕ ಆಚರಣೆ ಎಂದು ಅನಿಸುತ್ತದೆ. ಆದ್ದರಿಂದ ಇದು ತುಳುವರ ಆಚರಣೆ ಅಲ್ಲ ಎಂದು ಸಹಜವಾಗಿ ಸಂದೇಹ ಬರುತ್ತದೆ. ತುಳುನಾಡಿನಲ್ಲಿ ಈಗ 'ನಾಗರ ಪಂಚಮಿ' ಆಚರಣೆಯು ಬ್ರಾಹ್ಮಣ ಪುರೋಹಿತರಿಲ್ಲದೆ ನಡೆಯುವುದಿಲ್ಲ ಮತ್ತು ಈ ಆಚರಣೆ ತುಳು ತಿಂಗಳ ಲೆಕ್ಕಾಚಾರದ ದಿನದಲ್ಲಿ ಬರುವುದೂ ಇಲ್ಲ. ಆದ್ದರಿಂದ ಈ ಆಚರಣೆ ತುಳುನಾಡಿನ ಆಚರಣೆ ಅಲ್ಲದಿರಬಹುದು ಎಂಬ ಸಂದೇಹಕ್ಕೆ ಇರುವ ಎರಡು ಪ್ರಬಲ ಕಾರಣಗಳು. ಇಂದು ವೈದಿಕ ಸಂಸ್ಕೃತಿಯ ಪ್ರಭಾವಕ್ಕೊಳಗಾಗಿ 'ನಾಗರ ಪಂಚಮಿ' ಇಲ್ಲವೆ ನಾಗಾರಾಧನೆ ಆಚರಣೆಯಾಗುತ್ತಿದೆ. ಆದ್ದರಿಂದ 'ನಾಗರ ಪಂಚಮಿ' ತುಳುವರ ಆಚರಣೆ ಎಂಬುದನ್ನು ದೃಢಪಡಿಸುವುದು ಅತ್ಯಗತ್ಯ.

ಈ ನೆಲೆಯಲ್ಲಿ ವಿದ್ವಾಂಸರು ಸಾಕಷ್ಟು ಸಾಕ್ಷ್ಯಾಧಾರಗಳನ್ನು ಹುಡುಕಿ ನಾಗಾರಾಧನೆ ಮೂಲತಃ ದ್ರಾವಿಡರ ಆಚರಣೆ ಎಂಬುದನ್ನು ಸಾಬೀತುಪಡಿಸುವ ಪ್ರಯತ್ನ ಮಾಡಿದ್ದಾರೆ.

“ಆದಿಮ ಕಾಲಘಟ್ಟದಲ್ಲಿ ಸರಳವಾಗಿದ್ದ ನಾಗಾರಾಧನೆಯು ಕಾಲ ಕ್ರಮೇಣ ವ್ಯತ್ಯಾಸಗೊಳ್ಳುತ್ತಾ ಸಾಕಷ್ಟು ಬ್ರಾಹ್ಮಣೀಕರಣಗೊಂಡದ್ದನ್ನು ಗಮನಿಸಬಹುದು. ಉರಗಜಾತಿಗಳಲ್ಲಿ ನಾಗನು ಬ್ರಾಹ್ಮಣ ಸದೃಶನೆಂಬ ಭಾವನೆ ಜನಪದರಲ್ಲಿ ಬೆಳೆದಿದೆ. ಹಾಗಾಗಿ ಅಳತೆ ಮೀರಿದ ಶುದ್ಧಾಚಾರ ಕಲ್ಪನೆ ಸಮಾಜದಲ್ಲಿ ಉಂಟಾಗಿದೆ. ತುಳುನಾಡಿಗೆ ವೈದಿಕರ ಆಗಮನಕ್ಕೆ ಮೊದಲೇ ಆದಿಮ ಜನಾಂಗಗಳು ಬೇರೆ ಬೇರೆ ರೀತಿಯ ವಿಧಾನಗಳಿಂದ ನಾಗನನ್ನು ಪೂಜಿಸುತ್ತಿದ್ದರು. ಈಗಲೂ ಕೆಲವು ದಲಿತ ಜನಾಂಗಗಳು ನಾಗಾರಾಧನೆಯನ್ನು ತಾವೇ ನಿರ್ವಹಿಸುತ್ತಾರೆಂಬುದು ಗಮನೀಯವಾಗಿದೆ”[೪] ಎಂಬ ವಿದ್ವಾಂಸರ ಮಾತು ವಿಚಾರಯೋಗ್ಯವಾದುದು. ಮೂಲತಃ ನಾಗಾರಾಧನೆ ಸರಳವಾಗಿತ್ತು ಮತ್ತು ನಂತರ ಆರ್ಯೀಕರಣ ಪ್ರಕ್ರಿಯೆಗೆ ಈ ಆಚರಣೆ ಒಳಗಾಗಿರುವುದನ್ನು ಈ ಮಾತು ಸ್ಪಷ್ಟಪಡಿಸುತ್ತದೆ. ಜೊತೆಗೆ ನಾಗಾರಾಧನೆ ಅತ್ಯಂತ ಆದಿಮ ಕಾಲದಿಂದಲೇ ತುಳುನಾಡಿನಲ್ಲಿ ಆಚರಣೆಯಲ್ಲಿದ್ದು, ಆದಿಮ ಜನಾಂಗಗಳೇ ಈ ಆಚರಣೆಯನ್ನು ಆಚರಿಸುತ್ತಿದ್ದರು ಎಂಬುದು ತಿಳಿಯುತ್ತದೆ. ಈ ಕುರಿತು ಇನ್ನೋರ್ವ ವಿದ್ವಾಂಸರಾದ ವೆಂಕಟರಾಜ ಪುಣಿಂಚಿತ್ತಾಯರು ಹೇಳುವ ಈ ಕೆಳಗಿನ ಮಾತು ಗಮನಾರ್ಹವಾದುದು.

“ಪ್ರಾಚೀನ ತುಳುನಾಡಿನ ಒಂದು ಸೆರಗು ಕಾಸರಗೋಡು. ಇಲ್ಲಿ ಬಾಕುಡರೆಂಬ ಮೂಲ ನಿವಾಸಿಗಳಿದ್ದಾರೆ. ಇವರ ಕುಲದೈವ ಸರ್ಪ. ಇವರ ವಸತಿಗಳ ಬಳಿ ಪುರಾತನ ನಾಗಬನಗಳಿವೆ. ಅಲ್ಲಿ ಇವರು ಸರ್ಪಭೂತಾರಾಧನೆ ನಡೆಸುತ್ತಾರೆ....... ಹೆಂಗಸರು ನಾಗಬೆರ್ಮರಿಗೆ ‘ಬೆರ್ಮೆರೆ ಸೇವೆ’ ಎಂಬ ಹರಕೆ ಸಲ್ಲಿಸುತ್ತಾರೆ. (ಒಂದು ಕುಡ್ತೆ ಎಣ್ಣೆ, ಅರ್ಧ ಸೇರು ಅಕ್ಕಿ ಮತ್ತು ಎಲೆ ಅಡಿಕೆ)....... ಭೂತಗಳನ್ನು ನೇಮ ಕೋಲಗಳ ಮೂಲಕ ಆರಾಧಿಸುವಂತೆ ಬಾಕುಡರು ವಿವಿಧ ಸರ್ಪಗಳನ್ನು ಆರಾಧಿಸುತ್ತಾರೆ. ಇಂತಹ ಸರ್ಪ ಭೂತಗಳನ್ನು ಕಟ್ಟುವವರು ನಲಿಕೆಯವರು ಅಥವಾ ಕೋಪಾಳ ಜನಾಂಗದವರು. ನೇಲ್ಯ ಉಲ್ಲಾಳ್ತಿ (ನಾಗಯಕ್ಷಿ), ಎಲ್ಯ ಉಲ್ಲಾಳ್ತಿ, ಸಂಕಪಾಲೆ, ಕೃಷ್ಣಸರ್ಪೆ ಇವು ಬಾಕುಡರು ಪ್ರಧಾನವಾಗಿ ಆರಾಧಿಸುವ ಸರ್ಪಗಳು....... ಸಂಕಪಾಲನಿಗೆ ಏಳುನೂರ ಎಪ್ಪತ್ತೇಳು ಹೆಡೆಗಳೆಂದು ಲೆಕ್ಕ. ಈ ಭೂತದ ಮುಡಿ (ಅಣಿ) ಸಹ ತುಂಬಾ ದೊಡ್ಡದು. ಇದು ಶಂಕು ಆಕಾರದ ಮುಡಿ ಹಾಳೆಗಳನ್ನು ಹೆಡೆಯ ಆಕಾರದಲ್ಲಿ ಕತ್ತರಿಸಿ ಅದರ ಮೇಲೆ ಮಸಿಯಿಂದ ರೇಖೆಗಳನ್ನು ಬರೆದು ಹೆಡೆಗಳನ್ನು ತಯಾರಿಸುತ್ತಾರೆ. ಇದು ಅತ್ಯಂತ ಭಾರವೂ ಎತ್ತರವೂ ಆಗಿದೆ. ಸರ್ಪಾರಾಧನೆ ಇಡೀ ರಾತ್ರಿ ಜರಗುವ ಕಾರ್ಯಕ್ರಮ. ಈ ನಡುವೆ ‘ಕುಡಂಗೆರ್’ ಎಂಬ (ಯಕ್ಷಗಾನದ ಕೋಡಂಗಿಯಂತಹ) ಎರಡು

ಹಾಸ್ಯ ಪಾತ್ರಗಳ ಸಂಭಾಷಣೆ ನಡೆಯುತ್ತದೆ. ನಲಿಕೆಯ ಹೆಂಗಸೊಬ್ಬಳು ಈ ಕಾರ್ಯಕ್ರಮವನ್ನು ನಿರ್ದೇಶಿಸುತ್ತಾಳೆ.

'ಬೆರ್ಮೆರೆ ನಲಿಕೆ' ಎಂಬ ಕೋಲಕ್ಕೆ ನಾಲ್ಕು ಮಂದಿ ಮುಖ್ಯಸ್ಥರು (ನಾಲಜ್ಜಿ ಕಾರ್ನೆರ್) ಬೇಕು. ನಲಿಕೆಯ ಕೊನೆಯ ಹಂತ ಕೃಷ್ಣಸರ್ಪನ ಕೋಲ. ಕೃಷ್ಣ ಸರ್ಪನಿಗೆ ಹೋಗಲು ಪ್ರತ್ಯೇಕ ದಾರಿಯನ್ನು ಮಾಡಲಾಗುತ್ತದೆ. ಗದ್ದೆಯ ನಡುವೆ ಹಸಿ ಮಾವಿನ ಗೆಲ್ಲುಗಳನ್ನು ಹುಗಿದು ಕೃತಕ ಮರವೊಂದನ್ನು ನಿಲ್ಲಿಸುತ್ತಾರೆ. ಇದಕ್ಕೆ 'ಕುಕ್ಕುಂಬಿಲ' ಎಂದು ಹೆಸರು. ಕೃಷ್ಣಸರ್ಪ ಪಾತ್ರಿಯು ಹೊಲದಲ್ಲಿ ಹಾವಿನಂತೆ ಹೊಟ್ಟೆಯೆಳೆದುಕೊಂಡು ಕುಕ್ಕುಂಬಿಲದ ಬಳಿ ಬರುತ್ತಾನೆ. ಬ್ರಾಹ್ಮಣ ಮಂತ್ರವಾದಿ (ಇನ್ನೊಬ್ಬ ಪಾತ್ರಿ) 'ಕೃಷ್ಣಸರ್ಪ'ದ ಮೇಲೆ ಮಾವಿನ ಎಲೆ ಎಸೆದಾಗ ಅದು ಕೋಪದಿಂದ ಬುಸುಗುಟ್ಟುತ್ತದೆ. ಮಂತ್ರವಾದಿಯೊಬ್ಬ ಸರ್ಪವನ್ನು ಸ್ವಾಧೀನಪಡಿಸಿ ನಿರ್ದಿಷ್ಟ ಸ್ಥಾನಕ್ಕೆ ಒಯ್ಯುವ ಈ ಕಲ್ಪನೆ ಅದ್ಭುತವೂ, ರಮ್ಯವೂ, ರೋಮಾಂಚಕಾರಿಯೂ ಆಗಿದೆ. ಕೃಷ್ಣಸರ್ಪನಿಗೆ ಹಾಳೆಯಿಂದ ತಯಾರಿಸಿದ ಮೂರು ಹೆಡೆಗಳನ್ನು ತಲೆಗೆ ಕಟ್ಟಿರುತ್ತಾರೆ."[3] ವಿದ್ವಾಂಸರ ಈ ಮೇಲಿನ ವಿವರಗಳನ್ನು ಗಮನಿಸಿದಾಗ ನಾಗಾರಾಧನೆ ಮೂಲತಃ ತುಳುಜನಪದರ ಆಚರಣೆ ಎಂಬುದಕ್ಕೆ ಪುಷ್ಟಿ ಸಿಗುತ್ತದೆ. ಆದರೆ ನಾಗರಿಕತೆ ಮತ್ತು ಸಂಸ್ಕೃತಿಗಳು ಬೆಳೆಯುತ್ತಾ ಬಂದಂತೆ ಈ ಆಚರಣೆಯಲ್ಲಿಯೂ ಪರಿವರ್ತನೆಗಳಾಗಿರುವುದು ಕಂಡುಬರುತ್ತದೆ. ತುಳುನಾಡಿನ ವಾರ್ಷಿಕ ಆವರ್ತನದ ಆಚರಣೆಗಳಲ್ಲಿ ನಾಗಾರಾಧನೆ ವಿಶೇಷವಾಗಿ ವೈದಿಕ ಸಂಸ್ಕೃತಿಗೆ ಒಳಗಾಗಿರುವುದು ಕುತೂಹಲಕಾರಿಯಾಗಿದೆ. ಈ ಕುರಿತು ಇನ್ನೂ ಕೆಲವು ವಿದ್ವಾಂಸರ ಅಭಿಪ್ರಾಯಗಳನ್ನು ಗಮನಿಸಬಹುದು.

"ನಾಗಮಂಡಲ ಇಂದು ಒಂದು ಆರ್ಯವಿಧಿಯಾಗಿ ಬ್ರಾಹ್ಮಣರಾದ ವೈದ್ಯರಿಂದ ನಡೆದು ಬರುತ್ತಿದ್ದರೂ, ಅದರ ಮೂಲ ಸ್ವರೂಪವನ್ನು ಪಾಣರು 'ಸ್ವಾಮಿ'ಗೆ ನಡೆಸುವ ದಕ್ಕೆಬಲಿಯಲ್ಲಿ ಗುರುತಿಸಬಹುದಾಗಿದೆ. ಗ್ರಾಮ ದೇವತೆಗಳ ಗುಡಿ ಅಥವಾ ಊರ ದೈವಗಳ ಗುಡಿಗಳಲ್ಲಿ ವೈದ್ಯರೂ ನಡೆಸುವ ದಕ್ಕೆಬಲಿಯ ಸ್ವರೂಪ, ಆಶಯಗಳಲ್ಲಿ ಪಾಣರ ಆಚರಣೆಗಳಿಗಿಂತ ಹೆಚ್ಚಿನ ಭಿನ್ನತೆ ಇಲ್ಲ...... ಈ ಮಣ್ಣಿನ ಆದಿವಾಸಿ ಜನಾಂಗ ನಾಗ (ಸ್ವಾಮಿ)ನೇ ಮೊದಲಾದ ದೈವಗಳಿಗೆ ನಡೆಸುತ್ತಿದ್ದ ದ್ರಾವಿಡ ಮೂಲ ಆಚರಣೆಗಳು ಮುಂದೆ ಇಲ್ಲಿಗೆ ಆಗಮಿಸುವ ಬ್ರಾಹ್ಮಣರಿಂದಾಗಿ ಆರ್ಯೀಕರಣಕ್ಕೊಳಗಾಗಿರಬೇಕು............ ಪಾಣರು ತೊಡುವ ಅರ್ಧನಾರಿ ವೇಷದ ಸ್ವರೂಪ ನಾಗಮಂಡಲದ ಅರ್ಧನಾರಿ ವೇಷವನ್ನು ಹೋಲುತ್ತದೆ. ಕೈಯಲ್ಲಿ ಮರದ ಡಕ್ಕೆ ಹಾಗೂ ಮತ್ತೊಬ್ಬ ತಾಳ ಹಿಡಿದು ಹಾಡು

ಹೇಳುವವರದು ನಾಗರಿಕ ವೇಷ....... ಅರ್ಧನಾರಿ ವೇಷದ ಪಾಣ ದಕ್ಕೆ ಬಡಿಯುತ್ತಾ ಬಾಯಲ್ಲಿ ಅದೇ ಹಾಡನ್ನು ಪುನರಾವರ್ತಿಸುತ್ತಾ ತನ್ನೆದುರಿನ ಪಾತ್ರಿಯನ್ನು ಕುಣಿಸುತ್ತಾನೆ......"[೬] ಎಂಬ ವಿವರಣೆಯಲ್ಲಿಯೂ ವಿದ್ವಾಂಸರು ನಾಗಾರಾಧನೆ ದ್ರಾವಿಡ ಮೂಲದ ಆಚರಣೆ ಎಂಬುದನ್ನು ಸ್ಪಷ್ಟಪಡಿಸುವ ಪ್ರಯತ್ನ ನಡೆಸಿರುವುದು ಉಲ್ಲೇಖನೀಯ. ಇದಕ್ಕೆ ಪೂರಕವಾಗಿ ಸಿಗುವ ಇನ್ನಷ್ಟು ಮಾಹಿತಿಗಳನ್ನು ಇಲ್ಲಿ ಲಕ್ಷಿಸಬಹುದು.

"ಕುಂದಾಪುರ ಕಡೆಯ ಮೇರರು 'ಕಾಡ್ಯ' (ಕಾಳಿಂಗ ಸರ್ಪ)ನನ್ನು ತಮ್ಮ ಕುಲದೈವವೆಂದು ನಂಬುತ್ತಾರೆ. ಆ ನೆಲೆಯನ್ನು ತಮ್ಮ ಮೂಲಸ್ಥಾನವೆಂದು ಭಾವಿಸುತ್ತಾರೆ. ಯಾವುದೇ ಕಾರಣಕ್ಕಾಗಿ ಪರವೂರಿಗೆ ಹೋದರೂ ತಮ್ಮ ತಮ್ಮ ಕಾಡ್ಯನ ಮನೆಗಳಿಗೆ ಹರಕೆ ಒಪ್ಪಿಸುವುದು ಇವರ ರೂಢಿ. 'ಮನೆ ತುಂಬಿಸುವ' ಆಚರಣೆಯಲ್ಲಿ ಮೊದಲು ತೆನೆಗಳನ್ನು ನಾಗಬನಕ್ಕೆ ತಂದಿರಿಸಿ ಪೂಜಿಸಿ ಮತ್ತೆ ಎಲ್ಲರಿಗೂ ಹಂಚುವುದು ಪದ್ಧತಿ. ಉಪ್ಪಾರರೂ ಇದೇ ಬಗೆಯಲ್ಲಿ ತಮ್ಮದೇ ಆದ ನಾಗಬನಗಳಲ್ಲಿ 'ಹುಟ್ಟು' ಎಂಬ ಹೆಸರಲ್ಲಿ ನಾಗಪೂಜೆ ಕೈಗೊಳ್ಳುತ್ತಾರೆ.

ಕೊರಗರಲ್ಲಿ ನಾಗಪೂಜೆ ಅಷ್ಟಾಗಿ ಪ್ರಕಟವಾಗುವುದಿಲ್ಲವಾದರೂ, ಪಡುಬಿದ್ರಿಯಲ್ಲಿ 'ಕೊರಗಬನ' ಎಂಬುದಿದೆ ಎಂಬುದು ಗಮನೀಯ. ಆಸೋಡು, ಉಳ್ಳೂರುಗಳಲ್ಲೂ ಇದೆ. ಇದೊಂದು ಆಲಡೆಯಂಥ ದೈವ ಸಂಕೀರ್ಣ. ಇಲ್ಲಿ ನಾಗಪ್ರತೀಕವಾಗಿ ಮುರಕಲ್ಲಿನ ತುಂಡುಗಳಷ್ಟೇ ಇವೆ. (ಮಾಹಿತಿ ಕೆ.ಎಲ್.ಕುಂಡಂತಾಯ) ಮುಂಡಾಲರಲ್ಲೂ ಅವರದ್ದೇ ಆದ ನಾಗಪೂಜೆ ಇದೆ."[೭]

"ತುಳುನಾಡಿನ ಮುಗೇರರು (ಮೇರರು) ನಡೆಸುವ 'ಮುಗ್ಗೆರ್ಲೆ ಕೋಲ' ಮತ್ತು 'ಮಂಜ' ಎಂಬ ಆಚರಣೆಯಲ್ಲಿ 'ಬಿರ್ಮೆರೆ ನಾಟಾವುನಿ' (ಬಿರ್ಮೆರ್ ದೈವವನ್ನು ನೆಲೆಗೊಳಿಸುವುದು) ಎಂಬ ವಿಧಿಯಿದೆ. ಇಲ್ಲಿನ ಬಿರ್ಮೆರ್ ನಾಗಬ್ರಹ್ಮನೆ ಎನ್ನಬಹುದು. ಈ ಸಂದರ್ಭದ 'ಬಿರ್ಮೆರೆ ಸಂಧಿ'ಯಲ್ಲಿ 'ನಾಗಮುಂಚೊದ ನಡುಟು ಕೊಂಡುದ್ಯ ಬೆಂದೆರ್ ಜಯವುಲ್ಲ ಬಿರ್ಮೆರ್' (ನಾಗರ ಹುತ್ತದ ನಡುವೆ ಉದಿಸಿದರು ಜಯವುಳ್ಳ ಬ್ರಹ್ಮರು) ಎಂದಿದೆಯಲ್ಲದೆ ನಾಗಬ್ರಹ್ಮನ ವಿಚಿತ್ರವರ್ಣನೆ ಇದೆ. ಬಿರ್ಮೆರ್ ದೈವದ ನೆಲೆಯ ಸಂಕೀರ್ಣವಾಗಿ 'ಕೊಡಿಯಡಿ' (ತಾತ್ಕಾಲಿಕ ಪವಿತ್ರ ಚಪ್ಪರ)ಯ ಮುಂದೆ 'ಬಿರ್ಮೆರೆ ಗುಂಡ' (ಗುಡಿ)ಯನ್ನು ಬಾಳೆಯ ಹೊದಿಕೆಗಳಿಂದ ನಿರ್ಮಿಸುತ್ತಾರೆ. 'ಬಿರ್ಮೆರ್ ಗುಂಡ'ದ ಬಾಗಿಲಲ್ಲಿ 'ಹೋಮ'ವನ್ನು ಮಾಡಿ ಅದರ ಒಳಗಡೆ ಅಕ್ಕಿ, ಕಾಯಿ, ವೀಳ್ಯ, ಹಣ್ಣು ಇತ್ಯಾದಿಗಳನ್ನು ಇರಿಸಿ

ಬಿರ್ಮೆರ್ ಸಾನ್ನಿಧ್ಯವನ್ನು ಕಲ್ಪಿಸುತ್ತಾರೆ. ಆಗಲೇ ಪ್ರದರ್ಶಕರಲ್ಲಿ ಒಬ್ಬ 'ಬಿರ್ಮೆರೆ ಸಂಧಿಯನ್ನು ಹಾಡುತ್ತಾನೆ.......' ಈ ಬಿರ್ಮೆರ್ ತುಳುನಾಡಿನ ಎಲ್ಲ ದಲಿತ ಜಾತಿಗಳ ಭೂತಾರಾಧನೆಯ ಸಂದರ್ಭದಲ್ಲಿಯೂ ಮಹತ್ವವನ್ನು ಪಡೆದುಕೊಂಡಿರುತ್ತದೆ."[೮] ದಿನಾಂಕ ೦೨.೦೮.೨೦೦೬ರ ಕರಾವಳಿ ಅಲೆ ಸಂಜೆ ಪತ್ರಿಕೆಯಲ್ಲಿ ಪೇರೂರು ಜಾರು ಅವರು ಬರೆದ ಲೇಖನವೊಂದರ ಮಾಹಿತಿಯನ್ನು ಉಲ್ಲೇಖಿಸಿ ಡಾ.ಅಮೃತ ಸೋಮೇಶ್ವರ ಅವರು "ಆದಿಮ ರೀತಿಯ ನಾಗಪೂಜೆಗೆ ಉಡುಪಿ ಪೇರೂರಿನ ಬಳಿಯ ಕಡವಿನ ಬಾಗಿಲು ಎಂಬಲ್ಲಿರುವ ಪುರಾತನ ನಾಗರಬನ ನಿದರ್ಶನವಾಗಿದೆ. ಇಲ್ಲಿ ನಾಗರ ಪಂಚಮಿಯಂದು ಪೂಜೆ ಜರುಗುವುದಿಲ್ಲ. ಬದಲಾಗಿ ವಿಷು (ಯುಗಾದಿ) ದಿನದಂದು ನಾಗಪೂಜೆ ಜರುಗುತ್ತದೆ. (ಮಳೆಗಾಲಕ್ಕಿಂತ ಬೇಸಿಗೆಯಲ್ಲೆ ತಂಪೆರೆಯುವುದು ಯೋಗ್ಯವಾದುದಷ್ಟೇ) ದಲಿತ ವರ್ಗದವರು ಪೂಜೆ ನಡೆಸಿ ಇತರರ ಪರವಾಗಿ ಕಾಯಿ ಒಡೆದು ಪ್ರಸಾದ ನಿಡುತ್ತಾರೆ"[೯] ಎಂದು ಹೇಳುತ್ತಾರೆ.

ಈ ಎಲ್ಲ ಅಂಶಗಳನ್ನು ಗಮನಿಸಿದಾಗ ನಾಗಾರಾಧನೆ ಇಂದು ಆರ್ಯವಿಧಿಗೊಳಗಾಗಿದ್ದರೂ ಮೂಲದಲ್ಲಿ ತುಳುನಾಡಿನಲ್ಲಿ ಇದು ದ್ರಾವಿಡ ಮೂಲದ ಆರಾಧನೆಯಾಗಿರುವುದು ಸ್ಪಷ್ಟವಾಗುತ್ತದೆ. ಅಂತೆಯೇ 'ನಾಗರ ಪಂಚಮಿ'ಯಂದು ನಡೆಸುವ ಆಚರಣೆ ಕೂಡ ಮೂಲತಃ ತುಳುವರೇ ನಡೆಸುತ್ತಿದ್ದಿರಬೇಕು ಎಂಬುದಕ್ಕೆ ವಿದ್ವಾಂಸರ ಮಾತುಗಳು ಸಾಕಷ್ಟು ಪುಷ್ಟಿ ನೀಡುತ್ತವೆ. ಬ್ರಾಹ್ಮಣೀಕರಣದ ಪ್ರಭಾವದಿಂದ ಈ ಆಚರಣೆಯಲ್ಲಿ ಬ್ರಾಹ್ಮಣ ಪುರೋಹಿತರ ಪ್ರವೇಶ ಆಗಿದೆಯಷ್ಟೇ. 'ನಾಗರ ಪಂಚಮಿ' ದಿನವೂ ಚಾಂದ್ರಮಾನದ ದಿನವಾಗಿರುವುದರಿಂದ ಇದು ವೈದಿಕರು ಆಚರಿಸಲು ಗೊತ್ತುಪಡಿಸಿದ ದಿನವೇ ಆಗಿರಬೇಕು.

ಈ ನಿಲುವಿಗೆ ಪೂರಕವಾಗಿ ಓರ್ವ ವಿದ್ವಾಂಸರು–ನಾಗ ಪಂಚಮಿ ನಾಗಾರಾಧನೆಗೆ ಪರ್ವಕಾಲ ಎಂಬುದರಲ್ಲಿ ಎರಡು ಮಾತಿಲ್ಲ. ಇದು ಸರ್ವತ್ರ ಮಾನ್ಯ. ಆದರೆ ಕರ್ನಾಟಕದ ಕರಾವಳಿಯಲ್ಲಿ ನಾಗರ ಪಂಚಮಿ ನಾಗಪೂಜೆಗೆ ಪರ್ವ ದಿನವೇ ಅಲ್ಲ ಎಂಬುದನ್ನು ಪ್ರತಿಪಾದಿಸಲು ಆಧಾರಗಳಿವೆ. ನಾಗರ ಪಂಚಮಿಯಂದು ಪೂಜೆ ನಡೆಯದ ತಂಪೆರೆಸಿಕೊಳ್ಳದ ನಾಗಬನಗಳಿವೆ. ನಾಗಪೂಜೆ ಮಾಡದ ಜನವರ್ಗವಿದೆ ಎಂದು ಹೇಳುತ್ತಾ, ಈ ನೆಲೆಯಲ್ಲಿ ಉಡುಪಿ ಜಿಲ್ಲೆಯ ಚಾಂತಾರು, ಅಮ್ಮುಂಜೆ, ಕುತ್ಯಾರು, ಬೈಲಕರೆ, ಅಲೆವೂರು, ಕೆ.ಜಿ.ರೋಡು ಮುಂತಾದವು ಹಾಗೂ ಎ.ವಿ.ನಾವಡರು ಗುರುತಿಸಿರುವ 'ಕಾದ್ಯನಾಟ' ನಡೆಯುವ ಕಾದ್ಯನ ಮನೆಗಳು ಹಾಗೂ ದ.ಕ.ಜಿಲ್ಲೆಯ ೨-೩ ನಾಗಬನಗಳು ನಾಗರ ಪಂಚಮಿಯಂದು ಪೂಜೆಯಾಗದ ಬನಗಳೆಂದು ಗುರುತಿಸಿದ್ದಾರೆ.[೧೦] ಬಹುಷಃ ಆದಿಮ ತುಳುವರು ಈ

ನಾಗಾಚರಣೆಯನ್ನು 'ಬಿಸು'(ವಿಷು)ವಿನಂದು ಅಥವಾ ಬೇರೆ ಯಾವುದೋ ದಿನದಂದು ಆಚರಿಸುತ್ತಿದ್ದಿರಬೇಕು. ಯಾಕೆಂದರೆ ಈಗಲೂ 'ಬಿಸು'ವಿನಂದು, 'ಪತ್ತನಾಜೆ'ಯಂದು, 'ಪರ್ಬ'(ದೀಪಾವಳಿ)ದಂದು ಮತ್ತು ವಿಶೇಷ ಆಚರಣೆಗಳ ದಿನದಂದು ನಾಗನಿಗೆ 'ತಂಬಿಲ', 'ಪರ್ವ' ಮಾಡುವ ಪದ್ಧತಿ ಕಂಡು ಬರುತ್ತದೆ. ಅದೇನೇ ಇದ್ದರೂ ದ್ರಾವಿಡಾರ್ಯ ಸಮನ್ವಯದಿಂದ 'ನಾಗರ ಪಂಚಮಿ' ತುಳುನಾಡಿನ ವಾರ್ಷಿಕ ಆವರ್ತನದ ಆಚರಣೆಯಾಗಿ ರೂಪಿತಗೊಂಡಿರುವುದು ಇಂದು ಸರ್ವ ತುಳುವರಿಗೂ ಒಪ್ಪಿತವಾಗಿರುವುದನ್ನು ವಿಶೇಷವಾಗಿ ಗಮನಿಸಬೇಕು.

**೭.೩.೨: ತುಳುನಾಡಿನಲ್ಲಿ ನಾಗಾರಾಧನೆ-ಪ್ರಭೇದಗಳು**

"ತುಳುನಾಡಿನಲ್ಲಿ ನಾಗಾರಾಧನೆ ಯಾವಾಗದಿಂದ ಆರಂಭವಾಯಿತು ಎಂದು ಹೇಳುವುದು ಕಷ್ಟ. ಸಹ್ಯಾದ್ರಿ ಪರ್ವತದಲ್ಲಿ ನಿಂತು ನೋಡುವಾಗ ಕೆಳಗಿನ ತುಳುನಾಡು ಬಾರಿ ಆಳದಲ್ಲಿ ಕಂಡದ್ದರಿಂದ ಈ ಪ್ರದೇಶವನ್ನು ಹಿಂದಿನವರು ಪಾತಾಳವೆಂದು ಹೇಳಿದರು. ಆ ಪಾತಾಳವೇ ನಂತರ ತಳನಾಡು-ತುಳುನಾಡು ಎಂದಾಯಿತೆಂದು ಪೊಳಲಿ ಶೀನಪ್ಪ ಹೆಗ್ಡೆಯವರು ಹೇಳಿದ್ದಾರೆ. ಪಾತಾಳ ಅಂದರೆ ನಾಗರಾಜ ಮಹಾಶೇಷನ ನಾಡು. ಹಾಗಾಗಿ ತುಳುನಾಡಿನವರು ನಾಗಾರಾಧಕರು ಆದರೆಂದು ಒಂದು ಅಭಿಪ್ರಾಯ ಉಂಟು. ಹರ್ಷವರ್ಧನ ರಾಜ (ಕ್ರಿ. ಶ. ೬೦೬-೬೪೭) ಉತ್ತರ ಭಾರತದಲ್ಲಿ ಆಳುತ್ತಿದ್ದ. ಆತ ಸ್ವತಃ ಕವಿ, ನಾಟಕಕಾರ ಆಗಿದ್ದ. ಆತ "ನಾಗಾನಂದ" ಎನ್ನುವ ಒಂದು ನಾಟಕ ಬರೆದಿದ್ದಾನೆ. ಆ ನಾಟಕದ ಕತೆ ಗೋಕರ್ಣದಲ್ಲಿ ನಡೆಯಿತೆಂದು ಹೇಳುತ್ತಾರೆ. ಆಗಿನ ಗೋಕರ್ಣದಿಂದ ಕೆಳಗಿನ ರಾಜ್ಯ ತುಳು ರಾಜ್ಯ ಆಗಿತ್ತು. ತುಳುರಾಜ್ಯದವರು ದಿನಕ್ಕೊಂದು ನಾಗನನ್ನು ಗರುಡನಿಗೆ ಬಲಿಕೊಡುತ್ತಿದ್ದರಂತೆ. ಒಂದು ದಿನ ಗರುಡನಿಗೆ ಆಹುತಿಯಾಗಲು ಬಂದವ ಶಂಖಚೂಡ ಎನ್ನುವ ನಾಗ. ಅವನನ್ನು ಬದುಕಿಸಿದವ ಜೀಮೂತ ವಾಹನ ಎನ್ನುವ ಮಹಾತ್ಯಾಗಿ. ಈ ಕತೆಯ ಪ್ರಕಾರ ನಾಗಾರಾಧನೆ ಕ್ರಿ.ಶ. ೬ನೇ ಶತಮಾನದಲ್ಲಿಯೇ ತುಳುನಾಡಿಲ್ಲಿತ್ತೆಂದು ಹೇಳುವ ವಿಚಾರ ಸ್ಪಷ್ಟವಾಗುತ್ತದೆ. ದಕ್ಷಿಣ ಭಾರತದ ಪ್ರದೇಶದಲ್ಲಿ ನಾಗ ಎನ್ನುವ ಜನಾಂಗದವರು ಇದ್ದರು. ಅವರ ಕುಲಲಾಂಛನ ಸರ್ಪ ಆಗಿತ್ತು. ಅದೇ ಜನಾಂಗದವರು ತುಳುನಾಡಿನಲ್ಲೂ ಇದ್ದರು. ಅವರು ನಂತರ ಸರ್ಪನನ್ನು ಪೂಜೆ ಮಾಡಲು ಶುರುಮಾಡಿದರೆಂದು ಕೆಲವರು ಹೇಳಿದ್ದಾರೆ. ಕ್ರಿ.ಶ. ೭ನೇ ಶತಮಾನದಲ್ಲಿ ಸ್ಕಂದ ಪುರಾಣ ರಚನೆ ಆಯಿತು. ಈ ಗ್ರಂಥದಲ್ಲಿ ಉತ್ತರ ಕನ್ನಡದ ಬನವಾಸಿ, ಶಿವಮೊಗ್ಗದ ಕೆಲವು ಭಾಗ ಮತ್ತು ಉತ್ತರ ಕನ್ನಡ ಜಿಲ್ಲೆಗಳನ್ನು ನಾಗರ ಖಂಡವೆಂದು ಹೇಳುತ್ತಿದ್ದರು.

ಹಾಗಾಗಿ ಇಲ್ಲಿ ನಾಗಾರಾಧನೆ ಶುರುವಾಯಿತು ಎಂದು ಈ ಗ್ರಂಥದಲ್ಲಿ ಹೇಳಿದೆ. ಚಾಲುಕ್ಯ ವಂಶದವರು ನಾಗಾರಾಧಕರು. ಅವರ ಕುಟುಂಬದ ಒಂದು ಪಾಲು ಆಳುಪರು. ಅವರು ಕೂಡ ನಾಗಾರಾಧಕರು. ಆಳುಪ ಎನ್ನುವ ಹೆಸರು ಆಲುಕದಿಂದ ಬಂತು. ಆಲುಕ ಎನ್ನುವ ಶಬ್ದ ಮಹಾಶೇಷನಿಗೆ ಪರ್ಯಾಯ ಪದ. ಆಳುಪರಿಂದಾಗಿ ಇಲ್ಲಿ ನಾಗಾರಾಧನೆ ಶುರುವಾಗಿದೆ ಎಂದು ಕೆಲವು ಇತಿಹಾಸಕಾರರು ಹೇಳುತ್ತಾರೆ. ಪಶ್ಚಿಮ ಕಡಲ ಬದಿಯಲ್ಲಿ ಚಂಗ ಎನ್ನುವ ಒಂದು ಜಾತಿಯ ಮೀನುಗಾರರಿದ್ದರು. ಇವರು ನಾಗಕುಲದವರು. ಚಂಗ ಎನ್ನುವ ಪದವೇ ಸಂಕ ಆಯಿತು. ಈಗಲೂ ತುಳುವಿನಲ್ಲಿ ದೊಡ್ಡ ಸರ್ಪವನ್ನು ಸಂಕಪಾಲೆ ಎಂದು ಕರೆಯುವ ಪದ್ಧತಿ ಉಂಟು. ಈ ಚಂಗ ಜಾತಿಯವರು ಕೇರಳದಿಂದ ಗೋಕರ್ಣದವರೆಗೆ ಇದ್ದರು. ಅವರು ಇದ್ದ ಈ ನಾಡು ಸರ್ಪಾರಾಧಕರ ಭೂಮಿ ಆಯಿತು. ಪ್ರಾಚೀನ ಕಾಲದಲ್ಲಿ ಭಾರತದ ದಕ್ಷಿಣ, ಈಶಾನ್ಯ, ವಾಯುವ್ಯ ಮತ್ತು ಮಧ್ಯಭಾಗದಲ್ಲಿ ನಾಗಾರಾಧಕರು ಇದ್ದರು. ಅದರಲ್ಲೂ ಮುಖ್ಯವಾಗಿ ಕೇರಳ ತುಳುನಾಡಿನ ಎಲ್ಲ ಜನರೂ ನಾಗನನ್ನು ನಂಬುತ್ತಿದ್ದರು. ತುಳುನಾಡಿನಲ್ಲಿ ನಾಗನ ಕಲ್ಲು ಇಲ್ಲದ ಊರಿಲ್ಲ. ನಾಗಬನ ಇಲ್ಲದ ಹಳ್ಳಿಯಿಲ್ಲ. ಮನೆ ಮನೆಯಲ್ಲಿ ನಾಗ ಇಲ್ಲವೆ ನಾಗನ ಪ್ರತಿರೂಪ ಸುಬ್ರಹ್ಮಣ್ಯನ ಆರಾಧನೆ ನಡೆಯುತ್ತಿರುವುದರಿಂದ ನಾಗ ಇಲ್ಲಿಯ ಪ್ರಾಚೀನ ಆರಾಧನಾ ದೈವ ಎನ್ನುವ ವಿಚಾರಕ್ಕೆ ಬೇರೆ ದೃಷ್ಟಾಂತ ಬೇಡ ಎಂದು ಮಂಜೇಶ್ವರ ಗೋವಿಂದ ಪೈಯವರು ಹೇಳಿದ್ದಾರೆ."[೧೧]

ನಾಗಾರಾಧನೆಯ ಪ್ರಾಚೀನತೆ ಮತ್ತು ವಿಸ್ತಾರತೆಯ ಕುರಿತಂತೆ ವಿದ್ವಾಂಸರು ನೀಡುವ ಈ ಮೇಲಿನ ವಿಚಾರಗಳನ್ನು ಲಕ್ಷಿಸಬಹುದು. ಅವುಗಳಿಗೆ ಪೂರಕವೆಂಬಂತೆ ಇಂದೂ ತುಳುನಾಡಿನ ಉದ್ದಗಲದಲ್ಲಿ ನಾಗಬನಗಳಿವೆ; ಹಳ್ಳಿ ಹಳ್ಳಿಗಳಲ್ಲಿವೆ; 'ಬೈಲು' 'ಬೈಲು' (ಬಯಲು)ಗಳಲ್ಲಿವೆ. ಪ್ರತಿಯೊಂದು ಮನೆಯವರು ನಾಗನ ಆರಾಧನೆ ಮಾಡುತ್ತಾರೆ. 'ನಾಗರ ಪಂಚಮಿ'ಯ ದಿನದಂದು 'ನಾಗಬನ'ವಿರುವ ಮನೆಯವರು ಬ್ರಾಹ್ಮಣ ಪುರೋಹಿತರನ್ನು ಕರೆಸುತ್ತಾರೆ. 'ಪರ್ವ', 'ತಂಬಿಲ' ಕೊಡಿಸುತ್ತಾರೆ. ಆ ದಿನ ಆ 'ಬೈಲಿ' (ಬಯಲು)ನ ಪ್ರತಿ ಮನೆಯವರೂ ನಾಗನಿಗೆ ಒಂದಲ್ಲ ಒಂದು ರೀತಿಯ ಸೇವೆಯನ್ನು ನಡೆಸುವುದು ಕಂಡು ಬರುತ್ತದೆ. ಹಾಲು ಇಲ್ಲವೆ 'ಬೊಂಡ' (ಸೀಯಾಳ) ಸಾಮಾನ್ಯ ಸೇವೆಯಾಗಿರುತ್ತದೆ. ತುಳುನಾಡಿನಲ್ಲಿ 'ನಾಗಕಲ್ಲು'ಗಳು 'ಬನ'ದಲ್ಲೂ ಇರುತ್ತವೆ. 'ಅಶ್ವತ್ಥ' ಮರದ ಬುಡದಲ್ಲೂ ಇರುತ್ತವೆ. ಮಾತ್ರವಲ್ಲ, ಪ್ರತಿ ದೇವಸ್ಥಾನಗಳಲ್ಲೂ 'ನಾಗಬನ'ಗಳೋ, 'ನಾಗಕಲ್ಲು'ಗಳೋ ಇರುವುದು ಕಂಡು ಬರುತ್ತದೆ. 'ನಾಗರ ಪಂಚಮಿ'ಯಂದು ಈ 'ನಾಗಕಲ್ಲು'ಗಳಿಗೆ ಹಾಲು

ಎರೆಯುವುದು ಮಹತ್ವದ ಆಚರಣೆಯಾಗಿದೆ. 'ಢಕ್ಕೆಬಲಿ', 'ನಾಗಮಂಡಲ', 'ನಾಗಪ್ರತಿಷ್ಠೆ', 'ಸರ್ಪ ಸಂಸ್ಕಾರ', 'ನಾಗದರ್ಶನ', 'ಆಶ್ಲೇಷ ಬಲಿ', 'ಬ್ರಹ್ಮಮಂಡಲ', 'ಕಾಡ್ಯನಾಟ' ಮೊದಲಾದವುಗಳೆಲ್ಲವೂ ನಾಗಾರಾಧನೆಗೆ ಸಂಬಂಧಿಸಿದ ಮಹತ್ವದ ಆಚರಣೆಗಳು. ಆದರೆ 'ನಾಗರ ಪಂಚಮಿ'ಯಂದು ಮಾತ್ರ ಈ ಯಾವ ಆಚರಣೆಗಳೂ ಕಂಡು ಬರುವುದಿಲ್ಲ. ಅಂದು 'ತಂಬಿಲ' ಇಲ್ಲವೆ 'ಪರ್ವ' ನಡೆಸುವುದೇ ವಿಶೇಷ ಆಚರಣೆ. 'ನಾಗ ತಂಬಿಲ' ಎಂದರೆ ಹೂವು ಹಣ್ಣು, ಹಾಲು, ತಾಂಬೂಲ, ಎಳನೀರು ಇತ್ಯಾದಿಗಳನ್ನು ನಾಗನಿಗೆ ಅರ್ಪಿಸಿ ನಡೆಸುವ ಸರಳ ಸಾತ್ವಿಕ ಪೂಜೆಯಾಗಿರುತ್ತದೆ. 'ಪರ್ವ' ಎಂದರೆ ಅದೇ ಹೂವು ಹಣ್ಣು, ಹಾಲು, ತಾಂಬೂಲ, ಎಳನೀರುಗಳ ಜೊತೆಗೆ ಅರಳು ಪ್ರಧಾನವಾಗಿ ಬೇಕಾಗುತ್ತದೆ. ಅರಳು ಅರ್ಪಿಸಿ ಮಾಡುವ ಸೇವೆಯನ್ನು 'ಪರ್ವ'ವೆಂದು ಕರೆಯಲಾಗುತ್ತದೆ. ಹಾಗಾಗಿ ನಾಗನಿಗೆ 'ಪರ್ವ' ಇಲ್ಲವೇ 'ತಂಬಿಲ' ನಡೆಸುವುದು 'ನಾಗರ ಪಂಚಮಿ'ಯಂದು ಕಡ್ಡಾಯ ಆಚರಣೆಯಾಗಿ ತುಳುನಾಡಿನಲ್ಲಿ ಕಂಡು ಬರುತ್ತದೆ. 'ತಂಬಿಲ' ಎಂದರೆ 'ತನು ಹಾಕುವುದು' ಇಲ್ಲವೆ 'ತಂಪು ಮಾಡುವುದು' ಎಂದರ್ಥ. 'ಪರ್ವ' ಎಂದರೆ ಹಬ್ಬ. ಒಟ್ಟಿನಲ್ಲಿ ನಾಗನನ್ನು ಸಂತೃಪ್ತಿಗೊಳಿಸಿ ಜನ ತಮ್ಮ ಸಂಕಟ ಪರಿಹರಿಸಿಕೊಳ್ಳಲು ಪ್ರಾರ್ಥಿಸಿ ಕೊಳ್ಳುವುದೇ 'ನಾಗರ ಪಂಚಮಿ'ಯ ಗಮನಾರ್ಹ ಆಶಯವಾಗಿದೆ.

'ನಾಗರ ಪಂಚಮಿ'ಯ ದಿನ ತುಳುವರಷ್ಟೇ ಅಲ್ಲ; ತುಳುನಾಡಿನಲ್ಲಿರುವವರೆಲ್ಲ ನಾಗನ ಸೇವೆ ಮಾಡುವುದು ಕಂಡು ಬರುತ್ತದೆ. ಕೆಲವರು ಹರಕೆಯ ರೂಪದಲ್ಲಿ 'ಪರ್ವ', 'ತಂಬಿಲ' ಇಲ್ಲವೇ ಹಾಲು, 'ಬೊಂಡ' (ಸೀಯಾಳ) ಅರ್ಪಿಸುವುದು ಕೂಡ ಕಂಡು ಬರುತ್ತದೆ. ಅಂದರೆ ತುಳುನಾಡಿನ ಇತರೆಲ್ಲ ವಾರ್ಷಿಕ ಆವರ್ತನದ ಆಚರಣೆಗಳಿಗಿಂತ ಆ ಆಚರಣೆ ಭಿನ್ನವಾಗಿ ಗುರುತಿಸಿಕೊಳ್ಳುತ್ತದೆ. ಈ ಆಚರಣೆಗೂ ಕೃಷಿ ಚಟುವಟಿಕೆಗೂ ಹತ್ತಿರದ ಸಂಬಂಧವಿದೆ. ತುಳುನಾಡಿನಲ್ಲಿ ಅಲ್ಲಲ್ಲಿ 'ನಾಗಂಡ'ಗಳಿವೆ. 'ನಾಗಂಡ' ಅಂದರೆ ನಾಗನ 'ಕಂಡ' ಎಂದರ್ಥ. 'ಕಂಡ' ಎಂದರೆ ಗದ್ದೆ. ಹಾಗಾಗಿ ನಾಗನಿಗೆ ಸಂಬಂಧಿಸಿದ ಗದ್ದೆಗಳನ್ನು 'ನಾಗಂಡ' ಎಂದು ಕರೆಯುತ್ತಾರೆ. ಈ 'ನಾಗಂಡ'ಗಳಲ್ಲಿ ಬೇಸಾಯ ಮಾಡುವ ದಿನ ನಾಗನಿಗೆ ವಿಶೇಷ 'ತಂಬಿಲ', 'ಪರ್ವ' ನಡೆಯುತ್ತದೆ. ಇದು 'ಏಣೇಲು' ಮತ್ತು 'ಸುಗ್ಗಿ' ಬೆಳೆಯ ಎರಡೂ ಸಂದರ್ಭಗಳಲ್ಲೂ ನಡೆಯುತ್ತದೆ. ಜೊತೆಗೆ 'ನಾಗರ ಪಂಚಮಿ'ಯಂದು ಎಂದಿನಂತೆ ಆಚರಣೆ ನಡೆಯುತ್ತದೆ. ಕೃಷಿ ಚಟುವಟಿಕೆಯನ್ನೆ ನಂಬಿ ಬದುಕುವ ತುಳುವರಿಗೆ ಹೊಲದಲ್ಲಿ ಬೆಳೆದ ಭತ್ತದ ಫಸಲು ಹಾನಿಯಿಲ್ಲದೆ ಮನೆ ಸೇರಬೇಕಾದರೆ ಅಷ್ಟು ಸುಲಭವಿಲ್ಲ. ಯಾಕೆಂದರೆ ಎಷ್ಟೇ ಚೆನ್ನಾಗಿ ಫಸಲು

ಬಂದರೂ ಕಾಡು ಹಂದಿಗಳು, ಮನೆಯಲ್ಲಿ ಸಾಕಿದ ಕೋಳಿಗಳೋ, ಕಾಡುಹಕ್ಕಿಗಳೋ ಬೆಳೆಯನ್ನು ತಿಂದು ನಾಶಮಾಡುವುದು ಒಂದು ರೀತಿಯ ತೊಂದರೆ. ಆದರೆ ಇವುಗಳನ್ನಾದರೋ ಮನೆ ಮಂದಿ ಏನಾದರೂ ಮಾಡಿ ಓಡಿಸಿ ಬೆಳೆಯನ್ನು ರಕ್ಷಿಸುತ್ತಾರೆ. ಆದರೆ ಇನ್ನು ಇಲಿ ಹೆಗ್ಗಣಗಳ ಕಾಟವನ್ನು ಎದುರಿಸುವುದು ತುಳುವರಿಗೆ ಕಷ್ಟ. ಹಾಗಾಗಿ ಇಲಿ ಹೆಗ್ಗಣಗಳಿಂದ ಬೆಳೆಯನ್ನು ರಕ್ಷಿಸುವವನೆಂದರೆ ಅದು ನಾಗನಿಂದ ಮಾತ್ರ ಸಾಧ್ಯ. ಈ ನೆಲೆಯಲ್ಲಿ ಕೃಷಿಯನ್ನು ಸಂರಕ್ಷಣೆ ಮಾಡಲು ನಾಗನನ್ನು ಬೇಡಿಕೊಳ್ಳುವುದು ನಾಗಾರಾಧನೆ ಮತ್ತು 'ನಾಗರ ಪಂಚಮಿ'ಯ ಆಶಯವಾಗಿರಬೇಕು ಕೆಲವರ ಅಭಿಪ್ರಾಯ. ಈ ಕುರಿತು ವಿದ್ವಾಂಸರು ಪಡುವ ಅಭಿಪ್ರಾಯವನ್ನು ಗಮನಿಸಬೇಕು.

"ಭತ್ತ ಬೇಸಾಯಕ್ಕೂ ನಾಗನಿಗೂ ಬಹಳ ಸಂಬಂಧವುಂಟು, ಗದ್ದೆಯ ಪಯಿರು ಒಳ್ಳೆಯ ಫಸಲು ಕೊಡುವುದಕ್ಕಾಗಿ ಒಳ್ಳೆ ಫಲವತ್ತಾದ ಮಣ್ಣು ಕೊಡುವವ ನಾಗನೆಂದು ತುಳುವರ ನಂಬಿಕೆ, ಪ್ರತಿ ಗುತ್ತು, ಬೀಡುಗಳ ಮನೆಯ ಎದುರಿನಲ್ಲಿ ದೊಡ್ಡ ಬಾಕ್ಯಾರ್ (ಬಾಕಿಲ್ + ತಿಮರ್) ಗದ್ದೆಗಳಿರುತ್ತವೆ. ಈ ಗದ್ದೆಗಳ ಬದಿಯಲ್ಲೊಂದು ಕಾಡು (ಬನ) ಇರುತ್ತದೆ. ಗದ್ದೆಯ ಮುಕ್ತಾಯದ ದಿನವನ್ನು 'ಕಂಡೊದ ಕೋರಿ' (ಗದ್ದೆ ಕೋರುವುದು) ಎಂದು ಎನ್ನುತ್ತಾರೆ. ಇದು ಸಾಮಾನ್ಯ ದಶಂಬರ ತಿಂಗಳಲ್ಲಿ ನಡೆಯುತ್ತದೆ. ಕಂಡೊದ ಕೋರಿಯ ಮೊದಲ ದಿನ ಭೂತಗಳಿಗೆ ಕೋಲ ಆಗುತ್ತದೆ. ನಾಗನಿಗೆ ತಂಬಿಲ ಆಗುತ್ತದೆ. ನಂತರ ಕುದ್ರೆ ಕೋಲ ಆಗಲಿಕ್ಕಿದೆ. ಕುದ್ರೆ ಕೋಲದ ಜೊತೆಗೆ ಒಂದು ಸಣ್ಣ ವೇಷ ಕೂಡ ಕುಣಿಯುವುದಕ್ಕೆ ಇದೆ. ಅದನ್ನು ಉರಗ (ಉರವೆ) ಎಂದು ಕರೆಯುತ್ತಾರೆ. ಗದ್ದೆಕೋರಿ ಬಿತ್ತುವುದಕ್ಕೆ ಮೊದಲ ದಿನ ನೀರು ಬಸಿದು ಹೋಗಲೆಂದು ಗದ್ದೆಯಲ್ಲಿ ಗುಂಡು ಕಲ್ಲನ್ನು ಎಳೆಯುತ್ತಾರೆ. ಹಾಗೆ ಗುಂಡು ಕಲ್ಲು ಎಳೆಯದೆ ಇರುವ ದೊಡ್ಡ ಗದ್ದೆಗಳಲ್ಲಿ ಸಂಕಪಾಲನೇ ಹರಿದು ಕೊಂಡು ಹೋಗಿ ನೀರು ಬಸಿದು ಹೋಗುವ ಹಾದಿ ಮಾಡಿಕೊಡುತ್ತಾನೆ ಎಂಬ ನಂಬಿಕೆ ಇಂದಿಗೂ ತುಳು ಜನರಲ್ಲಿದೆ. ಕಂಡೊದ ಕೋರಿ ದಿವಸ ನಾಗನ ಚಿತ್ರ ಬರೆದ ಮಣ್ಣಿನ ಮೂರು ಕೊಡಗಳನ್ನು ಇಟ್ಟು ಅವುಗಳಿಗೆ ಅಗೆಲು ಬಡಿಸಿ ನಾಗಾರಾಧನೆ ಮಾಡುವ ಕ್ರಮ ಉಂಟು. ಅದಾದ ನಂತರ ನಲ್ಕೆಜಾತಿಯ ಹೆಂಗಸರು ಸ್ನಾನಮಾಡಿ ಬಂದು ಗುತ್ತು ಮನೆಯ ಎದುರು ನಾಗನಲಿಕೆ ಮಾಡುತ್ತಾರೆ. ಇದನ್ನು ಮೂರ್ಲೆ ನಲಿಕೆ ಎಂದು ಕರೆಯುತ್ತಾರೆ. ಹೀಗೆ ನಾನಾ ವಿಧಾನದಲ್ಲಿ ತುಳುನಾಡಿನವರು ನಾಗಾರಾಧನೆಯನ್ನು ಮೊದಲಿನಿಂದಲೂ ಮಾಡಿಕೊಂಡು ಬಂದಿದ್ದಾರೆ. ತುಳುವರ ಪ್ರತಿಯೊಂದು ಕುಟುಂಬದ ಮೂಲದ ಮನೆಯಲ್ಲಿ ನಾಗಪ್ರತಿಷ್ಠೆ ಮಾಡಿ ತಂಬಿಲ,

ಪೂಜೆ ಇವತ್ತಿಗೂ ನಡೆಸುತ್ತಾ ಬರುತ್ತಾರೆ."[೧೨] ಹೀಗೆ ನಾಗ ತುಳುವರ ಭತ್ತ ಬೇಸಾಯಕ್ಕೆ ಸಹಾಯಕನೆಂಬುದು ನಾಗಾರಾಧನೆಯ ಒಂದು ಮುಖವಷ್ಟೆ. ಆದರೆ ಈ ಆರಾಧನೆ ಆಚರಣೆ ಬಂದಿರುವುದು ಭಕ್ತಿ, ಸಂತೋಷ ಮತ್ತು ಕೃತಜ್ಞತೆಗಾಗಿ ಎನ್ನುವುದಕ್ಕಿಂತಲೂ ಇದರ ಹಿಂದೆ ಭಯದ ನೆಲೆ ಇರುವುದೇ ಹೆಚ್ಚು. ಯಾಕೆಂದರೆ ನಾಗ ಜಾತಿಯ ಹಾವುಗಳು ಮನುಷ್ಯನ ಪಾಲಿಗೆ ಆತಂಕಕಾರಿಯಾದ ಪ್ರಾಣಿಗಳು. ಅವುಗಳ ವಿಷ ಅಷ್ಟೊಂದು ಪ್ರಾಣ ಹಾನಿಯನ್ನುಂಟು ಮಾಡುವಂತಹುದು. ತುಳುನಾಡು ಆರಂಭದಲ್ಲಿ ದಟ್ಟವಾದ ಕಾಡಿನಿಂದ ಅವೃತ್ತವಾಗಿದ್ದರಿಂದ ಅಂತಹ ಕಾಡಿನಲ್ಲಿ ವಿಷಜಂತುಗಳಾದ ನಾಗ ಸಂತತಿ ಅಧಿಕವಾಗಿದ್ದಿರಬೇಕು. ಹಾಗಾಗಿ ತುಳುನಾಡು ನಾಗಲೋಕವಾಗಿತ್ತೆಂದು ಹೇಳುವುದರಲ್ಲಿ ಅರ್ಥವಿದೆ. ಇಂತಹ ನಾಗಲೋಕದಲ್ಲಿ ಜನವಾಸ ಮಾಡಲು ಮುಂದಾದಾಗ ಅವರಿಗೆ ನಾಗಗಳ ಅಪಾಯ ಎದುರಾಗಿರಬೇಕು. ಕಾಡು ಕಡಿದು ಕೃಷಿ ಭೂಮಿಯನ್ನು ಮಾಡುವಾಗ ನಾಗಗಳ ತೊಂದರೆ ಅನುಭವಿಸಿ ಅವುಗಳ ವಿಷದ ತೀಕ್ಷ್ಣತೆಯನ್ನು ಅರ್ಥಮಾಡಿಕೊಂಡ ಆದಿಮ ಜನ ನಿರ್ವಾಹವಿಲ್ಲದೆ ನಾಗನಿಗೆ ದೇವರ ಸ್ಥಾನವನ್ನು ನೀಡಿ ಪೂಜೆಗೆ ತೊಡಗಿರಬೇಕು. ಕೊನೆಗೆ ಅವುಗಳಿಗೆಂದೇ ಪ್ರತ್ಯೇಕ ವನಗಳನ್ನು ಉಳಿಸಿರುವುದು 'ನಾಗಬನ' (ವನ)ಗಳಾಗಿ ಪವಿತ್ರ ಸ್ಥಾನಗಳಾಗಿ ಉಳಿದುಕೊಂಡಿರಬೇಕು. ಹಾವುಗಳು ಕಚ್ಚಿದರೆ ಬಹಳ ಅಪಾಯ. ಅದರಲ್ಲೂ ನಾಗರ ಹಾವುಗಳು ಕಚ್ಚಿದರೆ ಮತ್ತೆ ಮದ್ದಿಲ್ಲ. ನಾಗರ ಹಾವುಗಳು ಕಚ್ಚುವುದಷ್ಟೇ ಅಲ್ಲ; ಇನ್ನು ಬೇರೆ ಬೇರೆ ನೆಲೆಗಳಿಂದ ಅವುಗಳ ವಿಷದ ಸ್ಪರ್ಶವಾಗಿ ನಾನಾ ರೀತಿಯ ರೋಗ ರುಜಿನ ತೊಂದರೆಗಳು ಕಾಣಿಸಿಕೊಳ್ಳುತ್ತವೆ. ಅವುಗಳನ್ನು ಕೊಂದರೂ ದೋಷ ಬರುತ್ತದೆ. ಅಂದರೆ ಅವುಗಳ ವಿಷ ನೆಲದಲ್ಲಿ ಬಿದ್ದು ಇದರಿಂದ ಮತ್ತೆ ತೊಂದರೆ ಕಾಣಿಸಿಕೊಳ್ಳುತ್ತದೆಯಾದ್ದರಿಂದ ತುಳುವರು ನಾಗಗಳನ್ನು ಕೊಲ್ಲಲು ಹೋಗುವುದಿಲ್ಲ. ಹಾಗಾಗಿ ನಾಗಾರಾಧನೆಯು ಬಹುತೇಕವಾಗಿ ಅದರ ವಿಷದ ಭಯಕ್ಕಾಗಿ ಹುಟ್ಟಿಕೊಂಡಿದೆಯೆಂದರೇನೆ ಹೆಚ್ಚು ಸಮಂಜಸವಾಗಿ ಕಂಡು ಬರುತ್ತದೆ. ನಾಗವು ವಿಷದಿಂದಾಗಿ ದೈವತ್ವದ ಸ್ಥಾನವನ್ನು ಪಡೆದಿದೆ; ಮಾತ್ರವಲ್ಲ ಹತ್ತು ಹಲವು ನಂಬಿಕೆಗಳಿಗೆ ಅವಕಾಶವನ್ನುಂಟು ಮಾಡಿದೆ. 'ಇಸೊ ಇತ್ತ್‌ನೇಟ ಮರಿತ್ತ ಪೋಡಿಗೆ'(ವಿಷ ಇರುವವರೆಗೆ ನಾಗರಹಾವಿನ ಹೆದರಿಕೆ), 'ಇಸೊ ಇತ್ತ್‌ಂಡ್ಲ ಒಳ್ಳೆ ಒಳ್ಳೆನೆ, ನಾಗೆ ನಾಗೆನೆ'(ವಿಷವಿದ್ದರೂ ನೀರುಹಾವು ನೀರುಹಾವೇ, ನಾಗ ನಾಗನೇ) ಮುಂತಾದ ಗಾದೆ ನುಡಿಗಳೇ ನಾಗರ ಹಾವಿನ ವಿಷದ ಅಪಾಯವನ್ನು ಹೇಳುತ್ತವೆ.

ತುಳುನಾಡಿನಲ್ಲಿ ಕುಕ್ಕೆ ಸುಬ್ರಹ್ಮಣ್ಯ, ಅತ್ಯಂತ ಪ್ರಸಿದ್ಧ ನಾಗಾರಾಧನಾ ಕ್ಷೇತ್ರವಾಗಿದೆ. ಕಾಳಾವರ, ಕುಡುಪು, ಮಂಜೇಶ್ವರ, ಬಳ್ಳಮಂಜ, ಪಡುಬಿದ್ರಿ, ಕುಮಾರ ಮಂಗಲ, ಮುಗು,

ಕಾಟುಕುಕ್ಕೆ, ಕುಕ್ಕಂಗೋಡ್ಲು, ಕೊಕ್ಕರಾಡಿ, ಕಜಕ್ಕಾರು, ಪಾವಂಜೆ, ಕೋಟೆಕಾರು ಮೊದಲಾದೆಡೆಗಳಲ್ಲಿಯೂ ಪ್ರಸಿದ್ಧ ನಾಗಾರಾಧನಾ ಕ್ಷೇತ್ರಗಳಿವೆ. ಇಲ್ಲಿ ನಾಗಾರಾಧನೆಯನ್ನು ವೈವಿಧ್ಯಮಯ ಸಂಪ್ರದಾಯಗಳಿಂದ ಪೂಜಿಸುತ್ತಾ ಬರುತ್ತಾರೆ. ನಾಗನಿಗೆ ನಾನಾ ರೀತಿಯ ಹರಕೆಯನ್ನು ಸಲ್ಲಿಸುತ್ತಾರೆ.

ತುಳುನಾಡಿಗೆ 'ಆಲುಕ' ಎಂಬುದು ಪ್ರಾಚೀನ ಹೆಸರುಗಳಲ್ಲೊಂದೆಂದೂ 'ಆಲುಕ' ಎಂದರೆ ಸರ್ಪರಾಜನೆಂಬ ಹೇಳಿಕೆಯೂ ಇದೆ. ಮಾತ್ರವಲ್ಲ, ಶಂಖಕುಲದ ನಾಗವಂಶೀಯರು ತುಳುನಾಡಿನಲ್ಲಿದ್ದರೆಂದೂ ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ.[೧೩] ಈ ಎಲ್ಲ ವಿಚಾರಗಳು ನಾಗಾರಾಧನೆ ತುಳುನಾಡಿನಲ್ಲಿ ಮೂಲದಿಂದಲೇ ಆಚರಣೆಯಲ್ಲಿತ್ತು ಎಂಬುದನ್ನು ಇನ್ನಷ್ಟು ಸ್ಪಷ್ಟಪಡಿಸುತ್ತವೆ.

ತುಳುನಾಡು ಸಮೃದ್ಧವಾಗಿ ಮಳೆಯಾಗುವ ಭೂಭಾಗವಾಗಿದ್ದು, ಇಲ್ಲಿ ಅರಣ್ಯಗಳು ವಿಪುಲವಾಗಿದ್ದವು. ಈ ವನಗಳಲ್ಲಿ ಉರಗಗಳ ಸಂತಾನವೂ ಸಮೃದ್ಧವಾಗಿದ್ದುದು ಸಹಜವೇ. ಆತಂಕಕಾರಿ ಹಾಗೂ ಅಪಾಯಕಾರಿ ನಿಸರ್ಗ ಶಕ್ತಿಗಳನ್ನು ವಿವಿಧ ಆರಾಧನೆಗಳಿಂದ ಒಲಿಸಿಕೊಳ್ಳುವ ಪ್ರಯತ್ನ ಎಲ್ಲ ಜನಾಂಗಗಳಂತೆ ತುಳುವರಲ್ಲೂ ಬೆಳೆದು ಬಂದಿದೆ. ಹೀಗೆ ಭಯ, ಕನಸುಗಳಿಂದ ಮೈವಡೆದು ಮೂಡಿದ ದೇವತೆ ನಾಗ ಎಂಬುದಾಗಿ ಅಮೃತ ಸೋಮೇಶ್ವರರೂ ಅಭಿಪ್ರಾಯ ಪಡುತ್ತಾರೆ.[೧೪] ಹೀಗೆ ಭಯವೇ ಭಕುತಿಯಾಗಿ ನಾಗಾರಾಧನೆಯು ಹುಟ್ಟಿಕೊಂಡಿದೆ ಎಂಬುದರಲ್ಲಿ ಸಂಶಯವಿಲ್ಲ. ಮುಂದೆ ವರ್ಷದಲ್ಲಿ ಕೆಲವು ವಿಶಿಷ್ಟ ದಿನಗಳಲ್ಲಿ ಅಂದರೆ 'ಬಿಸು ಪರ್ಬ'ದಂದು, 'ದೀಪಾವಳಿ ಪರ್ಬ'ದಂದು, 'ಗದ್ದೆ ಕೋರಿ'ಯ ದಿನದಂದೆಲ್ಲ ನಾಗಾರಾಧನೆಗೆ ತುಳುವರು ನಿರ್ದಿಷ್ಟ ದಿನಗಳನ್ನು ಗುರುತಿಸಿಕೊಂಡಿರಬೇಕು. ಆದರೆ ವೈದಿಕರು ನಿರ್ದಿಷ್ಟವಾಗಿ ಶ್ರಾವಣ ಮಾಸದ ಪಂಚಮಿಯನ್ನು 'ನಾಗರ ಪಂಚಮಿ'ಯೆಂದು ಆಚರಿಸಲು ಪ್ರಾರಂಭಿಸಿರಬೇಕು. ಇದನ್ನು ಅನುಸರಿಸಿದ ತುಳುವರಿಗೂ 'ನಾಗರ ಪಂಚಮಿ' ವಾರ್ಷಿಕ ಆವರ್ತನದ ಆಚರಣೆಯಾಯಿತೆಂದೇ ಹೇಳಬೇಕಾಗುತ್ತದೆ. 'ನಾಗರ ಪಂಚಮಿ'ಯ ದಿನವೂ ಮಳೆಗಾಲದಲ್ಲಿ ಬರುತ್ತದೆ. ಆಗ 'ಏಣೇಲು' ಕೃಷಿ ಚಟುವಟಿಕೆ ಕೂಡ ಮುಗಿದಿರುತ್ತದೆ; ಮತ್ತು ಆಷಾಢ ಮಾಸ ಕಳೆದಿರುವುದರಿಂದ ('ಆಟಿ' ತಿಂಗಳು) ಹೊಸ ವರ್ಷದ ಕಲ್ಪನೆ ಕೂಡ ತುಳುನಾಡಿನಲ್ಲಿದೆ. ಇಂತಹ ಸಂದರ್ಭದಲ್ಲಿ ನಾಗನಿಗೆ 'ತನು' ಎರೆದು, 'ಪರ್ವ'ಮಾಡಿ ಬೆಳೆ ರಕ್ಷಣೆ ಮಾಡುವಂತೆ, ಎಲ್ಲ ರೀತಿಯ ಒಳಿತಿಗಾಗಿ ಪ್ರಾರ್ಥನೆ ಮಾಡುವ ಕ್ರಮ ಕಂಡು ಬರುತ್ತದೆ.

ತುಳುನಾಡಿನಲ್ಲಿ ನಾಗನನ್ನು ಸುಬ್ರಾಯ ಅಥವಾ ಸುಬ್ರಹ್ಮಣ್ಯನೆಂದು ಕರೆಯುವುದು ವಾಡಿಕೆಯಲ್ಲಿದೆ. ನಾಗ ಮತ್ತು ಸ್ಕಂದರು ಯಾವ ಕಾಲಘಟ್ಟದಲ್ಲಿ ಅಭಿನ್ನರಾಗಿಹೋದರೆಂದು ಖಚಿತವಾಗಿ ತಿಳಿಯುವುದಿಲ್ಲ; ಮತ್ತು ತುಳುನಾಡಿನಲ್ಲಿ ಸುಬ್ರಹ್ಮಣ್ಯನನ್ನು ಮುರುಗನ್ ಹಾಗೂ ಶೇಯೋನ್ ಎಂಬ ಹೆಸರಲ್ಲಿ ಆರಾಧಿಸುತ್ತ ಬಂದಿದ್ದಾರೆ ಎಂದು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ.[೧೫] ಆ ದೇವತೆ ಪ್ರಣಯ ಹಾಗೂ ಸಂತಾನಕ್ಕೆ ಅನುಕೂಲವಾಗಿರುವುದು ಗಮನಾರ್ಹ ಸಂಗತಿಯಾಗಿದೆ. ಒಂದೇ ಉದ್ದೇಶಕ್ಕಾಗಿ ಉಪಾಸನೆ ಮಾಡುವ ಎರಡು ಶಕ್ತಿಗಳನ್ನು ಒಂದಾಗಿ ಎರಕ ಹೊಯ್ಯುವುದು ಜನಪದರ ಜಾಯಮಾನ. ನಾಗ ಸ್ಕಂದರು ಮಾತ್ರವಲ್ಲ, ನಾಗ (ಅನಂತ) ಪದ್ಮನಾಭರ ಸಹಯೋಗವೂ ಇಲ್ಲಿನ ಉಪಾಸನಾರಂಗದಲ್ಲಿ ನಡೆದು ಹೋಗಿದೆ. ತುಳುಭಾಷೆಯ ಪ್ರಾಚೀನ ಪಾಡ್ದನ ಸಾಹಿತ್ಯದಲ್ಲಿ ನಾಗಬ್ರಹ್ಮನ ಆವಿರ್ಭಾವ, ಕಲೆ ಕಾರಣಿಕಗಳ ಬಗೆಗೆ ವಿವರಗಳು ಸಿಗುತ್ತವೆ. ನಾಗರಾಜ ಮತ್ತು ದುಗಣರಾಜ ಎಂಬ ನಾಗರಾಜರು ಚಿನ್ನದ ಹಾಗೂ ಬೆಳ್ಳಿಯ ಹುತ್ತಗಳಿಂದ ಪ್ರಕಟರಾಗಿ, ಮನುಷ್ಯ ರೂಪವನ್ನು ಧರಿಸಿ ನಾನಾ ಮಹಿಮೆಗಳನ್ನು ಮೆರೆದರೆಂದು ನಾಗಸಿರಿ ಪಾಡ್ದನದಲ್ಲಿ ಬಣ್ಣಿಸಲಾಗಿದೆ. ಕೆಮ್ಮಲಜೆ ನಾಗಬ್ರಹ್ಮನ ಜನನ ವಿಚಾರವು ಗಿಂಡೆ ಗಿಳಿ ರಾಮು ಎಂಬ 'ಸಂಧಿ'ಯಲ್ಲಿ ಕಂಡುಬರುತ್ತದೆ. 'ಕೋಟಿ ಚೆನ್ನಯ', 'ಸತ್ಯನಾಪುರ ಸಿರಿ'ಗಳ ಸಂಧಿಗಳಲ್ಲಿ ಉಲ್ಲೇಖಿತನಾದ 'ಬೆರ್ಮೆರ್' ಎಂದರೆ ನಾಗಬ್ರಹ್ಮವೇ ಎಂಬುದಾಗಿ ವಿದ್ವಾಂಸರು ಹೇಳುತ್ತಾರೆ.[೧೬] ಹೀಗೆ ಇತರ ಅನೇಕ ಪಾಡ್ದನಗಳಲ್ಲೂ ನಾಗಬ್ರಹ್ಮನ ಪ್ರಭಾವಗಳ ಉಲ್ಲೇಖಗಳಿರುವುದಾಗಿ ಹೇಳಲಾಗಿದೆ.

ತುಳುನಾಡಿನ 'ಆಲಡೆ' ಅಥವಾ 'ಬ್ರಹ್ಮಸ್ಥಾನ' ಎಂದು ಕರೆಯಲ್ಪಡುವ ವಿಶಿಷ್ಟ ಆರಾಧನಾ ಸ್ಥಳಗಳಲ್ಲಿ ಮುಖ್ಯವಾಗಿ ನಾಗಬ್ರಹ್ಮ, ನಂದಿ (ನಂದಿಗೋಣ) ರಕ್ತೇಶ್ವರಿ ಹಾಗೂ ಕ್ಷೇತ್ರಪಾಲ ಎಂಬ ಶಕ್ತಿಗಳನ್ನು ಸಮಷ್ಟಿಯಾಗಿ ಪೂಜಿಸುವ ಸಂಪ್ರದಾಯವೂ ಗೋಚರಿಸುತ್ತದೆ. (ನಂದಿಗೋಣನನ್ನು ಮೈಸಂದಾಯನೆಂದೂ, ರಕ್ತೇಶ್ವರಿಯನ್ನು ಲೆಕ್ಕೆಸಿರಿ ಎಂದೂ, ಕ್ಷೇತ್ರಪಾಲನನ್ನು ಗುಳಿಗನೆಂದೂ ಹೇಳುವುದುಂಟು.) ಇವಲ್ಲದೆ ಬೇರೆಯೂ ಕೆಲವು ದೈವಗಳು ಆಲಡೆಯ ಸಂಕೀರ್ಣದಲ್ಲಿರಬಹುದು. ಆದರೆ ನಾಗನ ಉಪಸ್ಥಿತಿಯಂತೂ ಅನಿವಾರ್ಯವಾಗಿ ಇರುತ್ತದೆ. ಗುಳಿಗ ದೈವದ ಬನದಲ್ಲೂ ನಾಗನಿಗೆ ಎಡೆಯಿದೆ. ಗುಳಿಗನ ವಾಹನವೂ ನಾಗ ಎನ್ನಲಾಗಿದೆ. ಅಷ್ಟನಾಗರಾಜರಲ್ಲಿ ಒಬ್ಬನ ಹೆಸರು 'ಕುಳಿಕ' ಎಂದಾಗಿದೆ.

"ಆಲಡೆ ಮತ್ತು ನಾಗಾಲಯಗಳು ಹಿಂದೆ ವನ ಪ್ರದೇಶದಲ್ಲಿದ್ದ ಪೂಜಾಸ್ಥಾನಗಳೆನ್ನ ಬಹುದು. ನಾಗನಿಗಂತೂ ಸಸ್ಯಶ್ಯಾಮಲವಾದ ತಂಪಾದ ತಾಣವೇ ಇಷ್ಟಕರ. ತುಳುನಾಡಿನ ನಾಗಸಂಬಂಧಿ ದೇಗುಲಗಳು ಇರುವ ಭೂಸ್ಥಿತಿಯನ್ನು ಗಮನಿಸಿದರೆ, ಸುತ್ತಲಿನ ಸ್ಥಳಕ್ಕಿಂತ ತಗ್ಗಿನ ತಂಪು ತಾವಿನಲ್ಲೆ ಆ ದೇಗುಲಗಳು ರೂಪುಗೊಂಡುದು ತಿಳಿದು ಬರುತ್ತದೆ. (ಉದಾ: ಸುಬ್ರಹ್ಮಣ್ಯ, ಕುಡುಪು, ಮಂಜೇಶ್ವರ) ಒಂದು ಕಾಲದಲ್ಲಿ ದೇವಳಗಳಿದ್ದ ಸ್ಥಾನದಲ್ಲಿ ಮರಗಿಡಬಳ್ಳಿಗಳಿಂದ ನಿಗೂಢವಾದ ನಾಗವನ ಅಥವಾ ಹಿರಿಯ ಹುತ್ತಗಳು ಇದ್ದಿರಬಹುದು. ಈಗಲೂ ಕೆಲವು ದೇವಸ್ಥಾನಗಳ ಗರ್ಭಗುಡಿಯೊಳಗೆ ಬರಿಯ ಹುತ್ತಮಾತ್ರವೇ ಇದ್ದು ಅದು ನಾಗದೇವತೆಯನ್ನು ಪ್ರತಿನಿಧೀಕರಿಸುವುದನ್ನು ಕಾಣಬಹುದು. ಸುಬ್ರಹ್ಮಣ್ಯದ ಮೂಲಸ್ಥಾನದಲ್ಲಿ ಹುತ್ತವೇ ಇದ್ದು ಅದರ ಮೃತ್ತಿಕೆಯನ್ನೆ ಪ್ರಸಾದವಾಗಿ ಕೊಡುವ ಸಂಪ್ರದಾಯವಿದೆ. ಬಳ್ಳಮಂಜ ಮೊದಲಾದೆಡೆಯಲ್ಲೂ ಇದೇ ರೀತಿಯ ಹುತ್ತವಿದೆ. ಬ್ರಹ್ಮಲಿಂಗೇಶ್ವರನನ್ನು ಹುತ್ತದ ರೂಪದಲ್ಲಿ ಆರಾಧಿಸುವುದುಂಟು. ಕುಂದಾಪುರ ಕಡೆಯ ಕೆಲವು ಮುಖ್ಯ ಮನೆತನದ ಮನೆಗಳ ಪಕ್ಕದಲ್ಲಿ 'ಸ್ವಾಮಿಮನೆ' ಎಂದು ಕರೆಯಲ್ಪಡುವ ಚಿಕ್ಕಗುಡಿಗಳಲ್ಲಿ ದೊಡ್ಡಹುತ್ತಗಳೇ ಬೆಳೆದುನಿಂತಿರುತ್ತವೆ. ಹುತ್ತದ ಆರಾಧನೆಯು ಭೂಮಿಯ ಅಥವಾ ಮಾತೃದೇವತೆಯ ಆರಾಧನೆಯ ಒಂದು ರೂಪವೂ ಆಗಬಲ್ಲುದು. ಹುತ್ತದ ಅಥವಾ ಭೂಮಿಯ ಮಗುವಾಗಿ ನಾಗನಿಗೆ ಪೂಜೆ"[೧೭] ಎಂದು ಹೇಳುತ್ತಾ ವಿದ್ವಾಂಸರು ನಾಗಾರಾಧನೆಯ ಕುರಿತು ಸೂಕ್ತವಾಗಿಯೇ ವಿಶ್ಲೇಷಿಸಿದ್ದಾರೆ. ತುಳುನಾಡಿನ ಸ್ಕಂದ ಮೂರ್ತಿಗಳು ದ್ವಿಬಾಹು ವಿಗ್ರಹಗಳಾಗಿದ್ದು, ಬಲಗೈಯಲ್ಲಿ ಹೆಚ್ಚಾಗಿ ನಾಗನ ಮೊಟ್ಟೆ ಅಥವಾ ಹೆಡೆಯನ್ನು ಧರಿಸಿಕೊಂಡುದನ್ನು ಕಾಣಬಹುದು. ದಕ್ಷಿಣ ಕನ್ನಡದ ಕೆಲವು ಶಕ್ತಿ ಕ್ಷೇತ್ರಗಳಲ್ಲಿ ನಾಗ ಮತ್ತು ದುರ್ಗಾ ಅಭೇದ್ಯವಾಗಿ ಆರಾಧನೆ ಹೊಂದುವ ಕುತೂಹಲಕರ ವಿಚಾರವನ್ನು ಗಮನಿಸಬಹುದು. ಬಸರೂರಿನ ದುರ್ಗಾಲಯ, ನೀಲಾವರದ ದುರ್ಗಾಭಗವತೀ ದೇವಾಲಯ (ಇಲ್ಲಿ ದೊಡ್ಡ ಬನ ಇದೆ.) ಕಣ್ಣೂರು ದುರ್ಗಾಲಯ, ಮಂದರ್ತೀ ಕ್ಷೇತ್ರ-ಇತ್ಯಾದಿ ಕಡೆಗಳಲ್ಲಿ ಈ ಸಾಮರಸ್ಯವನ್ನು ಕಾಣಬಹುದು. ಶಾಂತಾದುರ್ಗ ಎಂಬ ಹೆಸರಲ್ಲಿ (ಗೋವಾದಲ್ಲಿ 'ಸಾಂತೇರಿ' ಎನ್ನುತ್ತಾರೆ) ಹುತ್ತವನ್ನು ಪೂಜಿಸಲಾಗುತ್ತದೆ. 'ನಾಗ ಬ್ರಹ್ಮಲಿಂಗೇಶ್ವರ' ಎಂಬುದರಲ್ಲಿ ನಾಗ, ಬ್ರಹ್ಮ ಮತ್ತು ಶಿವ ಎಂಬ ಮೂರು ಶಕ್ತಿಗಳ ಬೆಸುಗೆಯನ್ನು ಕಾಣಬಹುದು. ಹೆಬ್ರಿಯ ಒಂದು ಬ್ರಹ್ಮಸ್ಥಾನದಲ್ಲಿ ಗಣೇಶನೂ ಇದ್ದಾನೆ. ಒಟ್ಟಿನಲ್ಲಿ ಎಲ್ಲ ದೇವತೆಗಳೊಂದಿಗೂ ಮತಪ್ರಸ್ಥಾನಗಳೊಂದಿಗೂ ನಾಗನಿಗೆ ಹಿತಸಂಬಂಧವಿದೆಯೆಂಬುದನ್ನು ಕಂಡುಕೊಳ್ಳಬಹುದು.

ಕಾಳಾವರ ಎಂಬ ಪ್ರಸಿದ್ಧ ನಾಗಕ್ಷೇತ್ರದಲ್ಲಿ ಷಷ್ಠಿ ಹಬ್ಬದ (ಸಾಮಾನ್ಯವಾಗಿ ಷಷ್ಠಿಯಂದು ಎಲ್ಲ ನಾಗಕ್ಷೇತ್ರಗಳಲ್ಲೂ ಉತ್ಸವ ಜರುಗುತ್ತದೆ.) ಮರುದಿನ ಬೆಳಗ್ಗೆ ನಾಗಮಂಡಲ ನಡೆಯುವುದು ವಾಡಿಕೆ. ಈ ಕ್ಷೇತ್ರದಲ್ಲಿ ಸುಬ್ರಹ್ಮಣ್ಯ ಕಾಳಿಂಗ ಸರ್ಪದ ರೂಪದಲ್ಲಿ ಹಿಂದೆ ಮೈದೋರಿದ್ದನಂತೆ. ಆ ಸರ್ಪ ಹರಿದು ಬಂದಿತೆಂದು ಹೇಳಲಾಗುವ ಅಂಕುಡೊಂಕಾದ ದಾರಿಯಲ್ಲಿ ತೋಡಿದರೆ ನೀರು ಬಹಳ ಮೇಲೆಯೇ ಸಿಗುತ್ತದೆ. ಅಂದರೆ ನಾಗನಿಗೂ ನೀರಿಗೂ ಬಲುನಂಟು. ಭೂಮಿಯ ಅಡಿಯ ನೀರಿನ ನಾಗಸಂಚಾರದ ಹಾದಿಯಲ್ಲಿ 'ನಾಗಬೀದಿ' ಎನ್ನುತ್ತಾರೆ. ಹುತ್ತ ಇದ್ದಲ್ಲಿ ನೀರಿನ ಸಾನಿಧ್ಯ ಇದೆ ಎಂದೂ ಊಹಿಸುತ್ತಾರೆ. ಇದನ್ನು 'ಕಾಳಿಂಗತೀರ್ಥ' ಎನ್ನುತ್ತಾರೆ. ಈ ಕ್ಷೇತ್ರದ ಕೆರೆಯಲ್ಲಿ ಮಿಂದು ಉರುಳುತ್ತಾ ದೇವಸ್ಥಾನಕ್ಕೆ ಪ್ರದಕ್ಷಿಣೆ ಬರುವ ಉರುಳುಸೇವೆಯನ್ನು ಕೆಲವರು ಕೈಗೊಳ್ಳುತ್ತಾರೆ. ಮಣ್ಣಿನ ಐದು ಹೆಡೆಗಳ ಆಕಾರಗಳಿರುವ ಕಲಶದಲ್ಲಿ ಅಕ್ಕಿ, ಕಾಯಿ, ಹೂವು ಹಣ್ಣುಗಳ ಹರಕೆ ಹೊರುವ ಪರಿಪಾಠ ಈ ಕ್ಷೇತ್ರದಲ್ಲಿದೆ. ಸಂತಾನ ಪ್ರಾಪ್ತಿ ಹಾಗೂ ಕುಷ್ಠರೋಗಾದಿ ಚರ್ಮರೋಗಗಳ ನಿವಾರಣೆಯ ಉದ್ದೇಶದಿಂದ ಬ್ರಾಹ್ಮಣರು ಉಂಡ ಎಲೆಗಳ ಮೇಲೆ ಹೊರಳುವ ಸೇವೆಯೂ ಇಲ್ಲಿನ ವೈಶಿಷ್ಟ್ಯಗಳಲ್ಲಿ ಒಂದು. ಈ ಬಗೆಯ ಮಡೆಸ್ನಾನ ಸೇವೆ(ಮಡೆ ಎಂದರೆ ಎಂಜಲು) ಸುಬ್ರಹ್ಮಣ್ಯದಲ್ಲೂ ರೂಢಿಯಲ್ಲಿದೆ.

'ಪರಶುರಾಮ ಸೃಷ್ಟಿ'ಯ ಸಪ್ತಮಹಾಕ್ಷೇತ್ರಗಳಲ್ಲೊಂದಾದ ಸುಬ್ರಹ್ಮಣ್ಯ ಕ್ಷೇತ್ರವು ಸುಪ್ರಸಿದ್ಧ ನಾಗಕ್ಷೇತ್ರ. ಕಾಡುಪ್ರದೇಶವಾದ ಇಲ್ಲಿ ಹಾವುಗಳ ಓಡಾಟ ಬಹುಸಾಮಾನ್ಯ. ಸಾವಿರಾರು ನಾಗಪ್ರತಿಮೆಗಳನ್ನು ಇಲ್ಲಿ ಕಾಣಬಹುದು. ಹರಕೆಯವರ ಅನುಕೂಲಕ್ಕಾಗಿ ಬೀದಿಯಲ್ಲಿ ಬೆಳ್ಳಿಯ ಹೆಡೆ, ಮೊಟ್ಟೆ, ದೃಷ್ಟಿ ಇತ್ಯಾದಿಗಳನ್ನು ಮಾರಾಟಕ್ಕೆ ಇಟ್ಟಿರುತ್ತಾರೆ. ನಾಗದೋಷ ಪರಿಹಾರಕ್ಕಾಗಿ ಈ ಕ್ಷೇತ್ರಕ್ಕೆ ಬರುವವರೇ ಅಧಿಕ. ಇಲ್ಲಿ 'ಬೀದಿ ಮಡೆಸ್ನಾನ' ಎಂಬ ವಿಧಿ (ಉರುಳು ಸೇವೆ) ರೂಢಿಯಲ್ಲಿದೆ. ಆಶ್ಲೇಷ ಬಲಿ, ನಾಗರ ಪ್ರತಿಷ್ಠೆ, ಮೊದಲಾದ ವಿಶಿಷ್ಟ ಸೇವೆಗಳೂ ಇಲ್ಲಿ ಜರಗುತ್ತವೆ.

ಷಷ್ಠಿ ಉತ್ಸವದ ಇಲ್ಲಿನ ರಥೋತ್ಸವ ಪ್ರಸಿದ್ಧವಾದದ್ದು. ಇಲ್ಲಿನ ಬ್ರಹ್ಮರಥ ಬೃಹತ್ ಗಾತ್ರದ್ದಾಗಿ ಕಲಾಪೂರ್ಣವಾಗಿದೆ. ರಥೋತ್ಸವದ ವೇಳೆ ಗರುಡಪಕ್ಷಿಗಳು ಆಕಾಶದಲ್ಲಿ ಹಾರುತ್ತಾ ರಥಕ್ಕೆ ಪ್ರದಕ್ಷಿಣೆ ಬರುತ್ತವೆಂಬ ಪ್ರತೀತಿ ಇದೆ. ಇಲ್ಲಿನ ಬ್ರಹ್ಮ ರಥವನ್ನು ಎಳೆಯುವುದಕ್ಕೆ ಬಳಸಿದ ಬೆತ್ತದ ತುಂಡುಗಳು ವಿಷನಿವಾರಕ ಗುಣವಿರುವವು ಎಂದು ನಂಬಿಕೆ. ಇದನ್ನು ಪ್ರಸಾದವಾಗಿ ನೀಡುತ್ತಾರೆ.

ಸಮೀಪದಲ್ಲೆ ಉನ್ನತವಾದ ಕುಮಾರ ಪರ್ವತವಿದ್ದು, ತಾರಕಾಸುರನನ್ನು ಕುಮಾರನು ಸಂಹರಿಸಿದ ಪೌರಾಣಿಕ ಕಥೆಗೆ ಕೋಡುಮೂಡಿಸಿದಂತಿದೆ. (ಇಲ್ಲಿ ಆರು ಕೋನಗಳಿರುವ ಚಿಕ್ಕ 'ಕುಮಾರಲಿಂಗ'ಗಳು ಅದೃಷ್ಟವಂತರಿಗೆ ದೊರಕುವುದೆನ್ನುತ್ತಾರೆ.) ಮಂಜೇಶ್ವರ, ಕುಡುಪು, ಬಳ್ಳಮಂಜ, ಪಾವಂಜೆ ಮೊದಲಾದ ಸುಬ್ರಹ್ಮಣ್ಯ ಕ್ಷೇತ್ರಗಳಲ್ಲೂ ಷಷ್ಠಿ ಉತ್ಸವಕ್ಕೆ ವಿಶೇಷ ಪ್ರಾಶಸ್ತ್ಯ ಇದೆ.

ತುಳುನಾಡಿನ ಪ್ರತಿಯೊಂದು ಮನೆತನದ ಪೂರ್ವಾರ್ಜಿತ ಸ್ಥಳದಲ್ಲಿ ನಾಗನ ಬನವಾಗಲೀ ನಾಗಾಲಯವಾಗಲೀ ಇದ್ದೇ ಇರುತ್ತವೆ. ಸಂತಾನಪ್ರದವೆನಿಸಿ ಆರೋಗ್ಯ ಭಾಗ್ಯದಾತನಾದ ಈ ದೈವತದ ಅನುಗ್ರಹವನ್ನು ತುಳುವರು ಬಯಸುತ್ತಾರೆ. ಹಾಗಾಗಿಯೇ ನಾಗನ ಕುರಿತಾದ ನಂಬಿಕೆ ಅತಿಯಾಗಿ ಕಂಡುಬರುತ್ತದೆ. ಪ್ರತಿಯೊಂದು ದೇವಸ್ಥಾನ, ಭೂತಸ್ಥಾನಕ್ಕೂ ಸಂಬಂಧಪಟ್ಟಂತೆ ಪ್ರತ್ಯೇಕ ನಾಗಬನ ಅಥವಾ ನಾಗಪ್ರತಿಷ್ಠೆಗಳಿರುವುದನ್ನು ನಾವು ಇಂದಿಗೂ ತುಳುನಾಡಲ್ಲಿ ಗಮನಿಸಬಹುದು. ಯಾವುದೇ ಆರಾಧನೆಯ ಸಂಕೀರ್ಣವಾದರೂ ನಾಗನಿಗೆ ಅನಿವಾರ್ಯವಾದೊಂದು ಸ್ಥಾನ ಮೀಸಲಿರುತ್ತದೆ. ಭೂಮಿಯ ಪುತ್ರನೆನಿಸಿದ ನಾಗನಿಗೆ ನೆಲದ ಒಡೆತನವನ್ನು ಆರೋಪಿಸಲಾಗುತ್ತದೆ. ಹಾಗಾಗಿ ನಾಗ 'ಸ್ಥಳಕರ್ತು'ವಾಗಿ (ಕ್ಷೇತ್ರಪಾಲನಾಗಿ) ಮನ್ನಣೆ ಪಡೆಯುತ್ತಾನೆ. 'ನಾಗೆದಾಂತಿ ಜಾಗೆಯಿಜ್ಜಿ' (ನಾಗನಿಲ್ಲದ ಜಾಗವೇ ಇಲ್ಲ) ಎಂಬ ಗಾದೆ ನುಡಿಯೇ ತುಳುನಾಡಿನಲ್ಲಿ ನಾಗನ ಪ್ರಾಶಸ್ತ್ಯ ಏನು ಎಂಬುದನ್ನು ತಿಳಿಸುತ್ತದೆ. ಆಲಡೆಯೆಂಬ ದೈವ ಸಂಕೀರ್ಣದಲ್ಲಿ ನಾಗಬ್ರಹ್ಮ ಒಂದು ಪ್ರಧಾನ ದೈವತವಾಗಿರುವುದನ್ನು ಗಮನಿಸಬೇಕು.

"ನಾಗಾರಾಧನೆಗೂ ಯಕ್ಷಾರಾಧನೆಗೂ ನಿಕಟಸಂಬಂಧವಿದ್ದಂತಿದೆ. ಇವೆರಡೂ ಬಹು ಪ್ರಾಚೀನವಾದವುಗಳು. ಮೂಲತಃ ನಾಗ ಮತ್ತು ಯಕ್ಷ ಎಂಬುದು ಭಿನ್ನ ಭಿನ್ನ ಜನಾಂಗಗಳ ಹೆಸರುಗಳಾಗಿದ್ದು, ಇವರು ನಾಗ ಮತ್ತು ಯಕ್ಷ ಲಾಂಛನವನ್ನು ಹೊಂದಿದವರಾಗಿರಬಹುದು. ಕ್ರಮೇಣ ಲಾಂಛನಗಳಿಗೆ ಹೆಚ್ಚು ಪ್ರಾಶಸ್ತ್ಯ ಪಡೆದು ಪೂಜ್ಯವಸ್ತುಗಳಾಗಿ ಪರಿಣಮಿಸಿರಬಹುದು. ಎರಡು ಜನಾಂಗಗಳು ಬೆರೆತಂತೆ, ಲಾಂಛನಗಳ ಸಮೀಕರಣವೂ ನಡೆದಿರಬೇಕು. ನಾಗನನ್ನು ಯಕ್ಷ–ಯಕ್ಷಿಯನ್ನು ಸಮೀಕರಿಸಿ 'ನಾಗಯಕ್ಷ(ಕ್ಷಿ)' ಸ್ವರೂಪದಲ್ಲಿ ಪೂಜಿಸುವ ಸಂಪ್ರದಾಯ ಜನಪ್ರಿಯವೆನಿಸಿತು. ನಾಗನ ಬನಗಳಲ್ಲಿ ಅಥವಾ ಇತರ ಆರಾಧನಾಲಯಗಳಲ್ಲಿ ಇರುವ ಅನೇಕ ನಾಗಶಿಲೆಗಳಲ್ಲಿ ನಾಗಯಕ್ಷ ಅಥವಾ ನಾಗಯಕ್ಷಿಯರ ಸಂಯುಕ್ತ ರೂಪದ ಶಿಲ್ಪಗಳನ್ನು ನೋಡಬಹುದು. ಇಂಥ ವಿಗ್ರಹಗಳಲ್ಲಿ ಸಾಮಾನ್ಯವಾಗಿ ದೇಹದ ಮೇಲುಭಾಗ ಯಕ್ಷ (ಅಥವಾ

ಮನುಷ್ಯ) ರೂಪದಲ್ಲೂ, ಕೆಳಭಾಗ ನಾಗರೂಪದಲ್ಲೂ ಇರುತ್ತದೆ. ನಾಗೋಪಾಸನೆಯ ಮಂತ್ರವೂ ಸಾಮಾನ್ಯವಾಗಿ ನಾಗಯಕ್ಷಿಯ ಮಂತ್ರವೇ ಆಗಿರುತ್ತದೆ ಎಂಬುದು ಗಮನೀಯ.

ಆಲಡೆಯ ದೈವಸಂಕೀರ್ಣದ ಮುಖ್ಯ ದೈವತ ಬ್ರಹ್ಮ (ಬೆರ್ಮೆರ್) ಅಥವಾ ನಾಗಬ್ರಹ್ಮನೆಂಬ ಪ್ರತೀತಿಯಷ್ಟೇ? ನಾಗಬ್ರಹ್ಮನು ನಾಗಯಕ್ಷನೆ ಎಂದು ಊಹಿಸಬಹುದು. ಹಾಗೆಯೇ ಆಲಡೆಯಲ್ಲಿನ ಪ್ರಾಚೀನ ದೇವತೆ ರಕ್ತೇಶ್ವರಿ ದೇವಿ ಪುರಾಣದ ರಕ್ತಬೀಜಮರ್ದಿನಿ ಎಂದು ತಿಳಿಯುವುದಕ್ಕಿಂತ ಯಕ್ಷ ಕನ್ನಿಕೆ ಅಥವಾ ಯಕ್ಷೇಶ್ವರಿ ಎಂದು ತಿಳಿಯುವುದೇ ಯುಕ್ತವೆನಿಸುತ್ತದೆ."[೧೮]

ಒಟ್ಟಿನಲ್ಲಿ "ನಾಗಾರಾಧನೆ ಅತ್ಯಂತ ಪ್ರಾಚೀನ ಕಾಲದ್ದು; ವೇದಗಳ ಕಾಲದ್ದು; ಜನ ಹಿಂದೆ ಪ್ರಕೃತಿ ಪೂಜೆ ಮಾಡುತ್ತಿದ್ದಾಗಲೇ ಅಸ್ತಿತ್ವದಲ್ಲಿದ್ದುದು"[೧೯] ಎಂಬುದು ವೇದ್ಯವಾಗುತ್ತದೆ. ವಿದ್ವಾಂಸರು ನೀಡುವ ಈ ವಿವರಗಳಲ್ಲಿ ನಾಗಾರಾಧನೆಯ ಸ್ವರೂಪ, ವ್ಯಾಪ್ತಿ ಮತ್ತು ಆಶಯಗಳು ಮನದಟ್ಟಾಗುತ್ತವೆ. ಈ ಹಿನ್ನೆಲೆಯಲ್ಲಿ 'ನಾಗರ ಪಂಚಮಿ' ಆಚರಣೆ ವಾರ್ಷಿಕ ಆವರ್ತನದಲ್ಲಿ ಅತ್ಯಂತ ಮಹತ್ವವನ್ನು ಪಡೆದುಕೊಂಡಿದ್ದು, ಉಳಿದೆಲ್ಲ ಆಚರಣೆಗಳಿಗಿಂತ ಹೆಚ್ಚು ಭಯ ಭಕ್ತಿ ಮತ್ತು ಶುದ್ಧಾಚಾರದಿಂದ ನಡೆದುಕೊಳ್ಳುವುದನ್ನು ಗಮನಿಸಬಹುದು. ಆದರೆ 'ನಾಗರಪಂಚಮಿ' ಆಚರಣೆ ವೈದಿಕರ ಮೂಲಕವೇ ಬಂದಿರುವುದನ್ನು ವಿಶೇಷವಾಗಿ ಗಮನಿಸಬೇಕು. ಹಾಗಾಗಿಯೇ ಆದಿನ ತುಳುನಾಡಿನ ವಾರ್ಷಿಕ ಆವರ್ತನದ ಇತರ ಆಚರಣೆಗಳಂದು ನಡೆಸುವ 'ಕೋಳಿಅಂಕ', 'ಬೇಟೆ' ಇಲ್ಲವೆ 'ತೆಂಗಿನಕಾಯಿ ಕುಟ್ಟುವ' ಜಾನಪದ ಕ್ರೀಡೆಗಳು ಕಂಡುಬರುವುದಿಲ್ಲ.

'ನಾಗರ ಪಂಚಮಿ' ಆಚರಣೆಯಿಂದ ನಾಗಬನಗಳ ಸಂರಕ್ಷಣೆಯಾಗುತ್ತದೆ. ನಾಗಗಳ ವಾಸಕ್ಕೆಂದೆ ಆ 'ಬನ'ಗಳು ಮೀಸಲಾದ್ದರಿಂದ ಮತ್ತು ನಾಗನ ಮೇಲಿನ ಭಯ ಭಕ್ತಿಯಿಂದ ಆ 'ಬನ'ದಿಂದ ಯಾರೂ ಸೊಪ್ಪು, ಕಟ್ಟಿಗೆ ಕಡಿಯುವಂತಿಲ್ಲ. ಹಾಗಾಗಿ ಆ 'ಬನ'ದಲ್ಲಿ ನಾನಾ ರೀತಿಯ ಗಿಡಮರ ಬಳ್ಳಿಗಳು ಬೆಳೆದು ಜೀವ ವೈವಿಧ್ಯಗಳ ರಕ್ಷಣೆಯಾಗುತ್ತದೆ. ವಿವಿಧ ಪ್ರಾಣಿಗಳಿಗೂ ಬದುಕಲು ವಾಸಸ್ಥಾನವಾಗುವುದೂ ಕಂಡು ಬರುತ್ತದೆ. ಈ ಮೂಲಕ ಪ್ರಾಕೃತಿಕ ಸಮತೋಲನಕ್ಕೆ 'ನಾಗರ ಪಂಚಮಿ' ಆಚರಣೆ ಕೊಡುಗೆಯೆನ್ನುವುದನ್ನು ಗಮನಿಸಬಹುದು. ಅಂತೆಯೇ ಅಂತರ್ಜಲದ ವೃದ್ಧಿಯಲ್ಲೂ 'ನಾಗಬನ'ಗಳ ಕೊಡುಗೆಯನ್ನು ಮರೆಯುವಂತಿಲ್ಲ. 'ನಾಗಪುಂಚ'(ಪುತ್ತ)ಗಳ ಮೂಲಕ ಮಳೆನೀರು ಭೂಮಿಯ ಆಳಕ್ಕೆ ಇಳಿಯುವುದರಿಂದ

ಅಂತರ್ಜಲ ಹೆಚ್ಚಾಗುತ್ತದೆ. ಈ 'ನಾಗಬನ'ದಲ್ಲಿ ನಾನಾ ರೀತಿಯ ಗಿಡಮರಗಳು ನಿರ್ಭಯವಾಗಿ ಬೆಳೆಯುವುದರಿಂದ ಪರಿಶುದ್ಧವಾದ ಗಾಳಿ ಇತ್ಯಾದಿ ಪ್ರಯೋಜನ ಸಿಗುತ್ತದೆ.

**೭.೩.೩: ನಾಗಾರಾಧನೆ ವ್ಯಾಪ್ತಿ**

ಈ ನಾಗಾರಾಧನೆ ಕೇವಲ ತುಳುನಾಡಿನ ಆಚರಣೆಯಷ್ಟೆ ಅಲ್ಲ. ನಾಗನ ಬಗೆಗಿನ ನಂಬಿಕೆ ಆಚರಣೆಗಳು ದೇಶವಿದೇಶಗಳಲ್ಲೂ ಕಂಡುಬರುತ್ತವೆ.

"ನಾಗಾರಾಧನೆ ಭಾರತ ಮಾತ್ರವಲ್ಲ ಜಗತ್ತಿನ ಬಹಳ ಪ್ರಾಚೀನ ಸಂಸ್ಕೃತಿ. ಕ್ರಿಪೂ. ೨೬೦೦ರ ಮೊದಲೇ ಸುಮೇರಿಯನ್ ದೊರೆ ಗುದಿಯನ್ ಎಂಬವನು ಬಳಸುತ್ತಿದ್ದ ಶೇಂದಿಯ ಮಣ್ಣಿನ ಕೊಡಪಾನದಲ್ಲಿ ಜೋಡಿನಾಗರ ಚಿತ್ತಾರ ಇತ್ತಂತೆ, ಗ್ರೀಕರು ಸರ್ಪವನ್ನು ರಾಷ್ಟ್ರಲಾಂಛನ ಮಾಡಿದ್ದರು. ಗ್ರೀಕರ ವೈದ್ಯ ದೇವತೆ ಈಸ್ಕುಲೇಪಿಯನ್ ಎಂಬವ ಹಿಡಿದುಕೊಂಡಿರುವ ದಂಡದಲ್ಲಿ ನಾಗಮಿಥುನ ಚಿಹ್ನೆ ಇತ್ತಂತೆ. ಈಗ ಅದುವೆ ವೈದ್ಯ ವಿಜ್ಞಾನದ ಲಾಂಛನ ಆಗಿದೆ. ತುಳುನಾಡಿನ ವೀರರು ಸತ್ತ ಮೇಲೆ ಭೂತಗಳಾಗುತ್ತಾರೆ ಎಂದು ಹೇಳುವ ಮಾತು ಇರುವಂತೆ ಗ್ರೀಕ್ ವೀರರು ಸತ್ತ ಮೇಲೆ ನಾಗರಾಗುತ್ತಾರೆ ಎಂಬ ನಂಬಿಕೆ ಇತ್ತು. ಅಥೇನ್ಸ್ ಪಟ್ಟಣದಲ್ಲಿ ಸರ್ಪ ದೇವಾಲಯಗಳು ಇದ್ದವು. ಗ್ರೀಕ್ ಜಾನಪದದಲ್ಲಿ ಒಲಿಂಪಿಯ ಮತ್ತು ಸರ್ಪರಾಜನ ಮಗ ಅಲೆಕ್ಸಾಂಡರ ಎಂದು ಹೇಳುವ ಉಲ್ಲೇಖ ಉಂಟು. ಮೆಸಪಟೋಮಿಯದಲ್ಲಿ, ಬ್ಯಾಬಿಲೋನಿಯದಲ್ಲಿ, ಈಜಿಪ್ಟಿನಲ್ಲಿ ಎಲ್ಲ ಕಡೆಯಲ್ಲೂ ಸರ್ಪಾರಾಧನೆ ಇತ್ತು. ಶ್ರೀಲಂಕ, ಕಾಂಬೋಡಿಯಾ, ಫಿಜಿದ್ವೀಪ, ಬರ್ಮ, ಜಾವಾ, ಬೋರ್ನಿಯೊ, ಚೀನಾ ಹೀಗೆ ಎಲ್ಲ ಕಡೆಗಳಲ್ಲೂ ಜನರು ನಾಗನನ್ನು ನಂಬುತ್ತಿದ್ದರು."[೨೦]

ನಾಗ ಸಂತಾನ ಸಂಬಂಧಿಯಾದ ಕಾಮವನ್ನು ಸಂಕೇತಿಸುತ್ತದೆ ಎಂಬ ವಿಚಾರವಿದೆ ಮತ್ತು ಈ ಕುರಿತು ಜನಪದರಲ್ಲಿ ಬಲವಾದ ನಂಬಿಕೆಯೂ ಕಂಡುಬರುತ್ತದೆ. ಈ ಹಿನ್ನೆಲೆಯಲ್ಲಿಯೇ ನಾಗಾರಾಧನೆ ವಿಶ್ವದಾದ್ಯಂತ ಹೆಚ್ಚು ಮಹತ್ವವನ್ನು ಪಡೆದಿರಬೇಕು. ಈಗಾಗಲೇ ಹೇಳಿದಂತೆ "ನಾಗಾರಾಧನೆ ವಿಶ್ವದ ಅನೇಕ ದೇಶಗಳಲ್ಲಿ ರೂಢವಾಗಿದ್ದು, ಆಯಾ ಪ್ರದೇಶದ ಸಂಸ್ಕೃತಿಯಲ್ಲಿ ವಿಶೇಷವಾದ ಸಂಬಂಧವನ್ನು ಪಡೆದ ವಿಚಾರವಾಗಿದೆ. ಭಾರತದಲ್ಲಿ ಮಾತ್ರವಲ್ಲದೆ, ಸುಮೇರಿಯಾ, ಬೆಬಿಲೋನಿಯಾ, ಏಸ್ಸೀರಿಯಾ, ಉರಿಸ್ತಾನ್, ಇರಾನ್, ಚೀನಾ, ಆಫ್ರಿಕಾ ಮುಂತಾದ ದೇಶಗಳಲ್ಲಿ ಉರಗಾರಾಧನೆ ಬೇರೆ ಬೇರೆ ರೂಪಗಳಲ್ಲಿ ಪ್ರಚಲಿತವಾಗಿತ್ತು. ಈಜಿಪ್ಟಿನ ಸೆಬ್ ದೇವತೆ ನಾಗಗಳ ರಾಜ. ಕ್ರೇಟ್ ದೇವತೆಯ ಕೈಯಲ್ಲಿ ಉತ್ಪನ್ನ ಶಕ್ತಿಯ

ಸಂಕೇತವಾದ ನಾಗಗಳಿದ್ದವು. ಗ್ರೀಸ್ ದೇಶದಲ್ಲಿ ಜೀವಂತ ನಾಗಗಳನ್ನು ಭೂಮಿಪುತ್ರರೆಂಬ ನಂಬಿಕೆಯಿಂದ ಕೆಲವೊಂದು ಪರ್ವದಿನಗಳಲ್ಲಿ ಉಣಿಸುತ್ತಿದ್ದರು. ಈ ಆರಾಧನೆಯ ಮೂಲವೆಲ್ಲಿ ಎಂಬುದು ಖಚಿತವಾಗಿ ತಿಳಿಯದಿದ್ದರೂ ಈ ದೇಶಗಳೊಂದಿಗೆ ಒಂದಲ್ಲ ಒಂದು ಕಾಲದಲ್ಲಿ ಭಾರತಕ್ಕೆ ಸಂಪರ್ಕವಿದ್ದುದನ್ನು ಅಲ್ಲಗಳೆಯುವಂತಿಲ್ಲ. ಬಹು ಪ್ರಾಚೀನ ಕಾಲದಿಂದಲೂ ಈ ಎಲ್ಲ ದೇಶಗಳಲ್ಲಿ ನಾಗನನ್ನು ಫಲ ಸಮೃದ್ಧಿಯ ಸಂಕೇತವೆಂದು ನಂಬಿಕೊಂಡು ಬಂದಿದ್ದಾರೆ ಎಂತಲೇ ನಾಗ ಮನಸ್ಸಿನ ಕಾಮನೆಯ ಪ್ರತೀಕವೂ ಹೌದು.

ಭಾರತದ ಉದ್ದಗಲಕ್ಕೂ ಸರ್ಪಾರಾಧನೆಯ ವಿವಿಧ ಪ್ರಕಾರಗಳು ಇಂದಿಗೂ ಕಾಣಸಿಗುತ್ತವೆ. ಈ ದೇಶದಲ್ಲಿ ನಾಗಾರಾಧನೆಗೆ ಇರುವಷ್ಟು ಪ್ರಾಶಸ್ತ್ಯ ಪ್ರಾಯಶಃ ಇನ್ನಾವ ದೇಶದಲ್ಲೂ ಇರಲಾರದು. ನಮ್ಮ ಹೆಚ್ಚಿನ ಎಲ್ಲ ದೇವತೆಗಳು ಒಂದಲ್ಲ ಒಂದು ರೀತಿಯಲ್ಲಿ ಸರ್ಪ ಸಂಬಂಧವನ್ನು ಹೊಂದಿದ್ದಾರೆ. ಶಿವ ನಾಗಭೂಷಣ. ವಿಷ್ಣು ನಾಗಶಯನ. ಲಂಬೋದರನ ಉದರವು ಸರ್ಪರಜ್ಜು ಬಂಧಿತ. ಸುಬ್ರಹ್ಮಣ್ಯನಂತೂ ನಾಗರೂಪಿ. ದೇವಿ ಶಾಂತಾದುರ್ಗೆ ನಾಗಸ್ವರೂಪಿಣಿ. ಬಂಗಾಲದ ಮಾನಸಾದೇವಿ ನಾಗದೇವಿಯೆನಿಸಿದ್ದಾಳೆ. ಸರ್ಪಮುಕುಟ, ಸರ್ಪ ಕಂಕಣ, ಸರ್ಪ ಕುಂಡಲ, ಸರ್ಪ ಮುದ್ರಿಕೆ, ಸರ್ಪಾಯುಧಗಳಿಂದ ಅಲಂಕೃತರಾದ ದೇವತೆಗಳು ಅನೇಕ. ಯೋಗ ಶಾಸ್ತ್ರದಲ್ಲಿ ಕುಂಡಲಿನಿ (ಸುಷುಮ್ನಾ ನಾಡಿ)ಯೂ ನಾಗಾಕೃತಿಯದೆನ್ನಲಾಗಿದೆ.

ಫಲ ಜ್ಯೋತಿಷ್ಯದಲ್ಲಿ, ಛಾಯಾಗ್ರಹವೆನಿಸಿದ ರಾಹುವು ಸರ್ಪರೂಪಿಯೆಂದು ಕಲ್ಪಿಸಲಾಗಿದೆ. ಅನಿಷ್ಟ ಕಾಲವೆನಿಸಿದ 'ರಾಹುಕಾಲ'ವನ್ನು ನಾಗದೇವರಿಗೆ ಸಂಬಂಧಿಸಿದ ಕಾಲವೆಂದು ನಂಬುತ್ತಾರೆ. ನಾಗನಿಗೆ ಸಂಬಂಧ ಪಟ್ಟ ಸೇವೆಗಳನ್ನು ಮಾತ್ರ ರಾಹುಕಾಲದಲ್ಲಿ ಮಾಡುತ್ತಾರೆ. 'ಕಾಲಸರ್ಪದೊಷ' ಮೊದಲಾದ ದೋಷವಿದ್ದವರು ರಾಹುವಿನ ಮಂತ್ರ ಜಪಿಸಬಹುದೆಂದೂ, ಗೋಮೇಧಿಕ ಕೂರಿಸಿ ಬೆಳ್ಳಿಯ ಉಂಗುರವನ್ನು ಧರಿಸಬಹುದೆಂದೂ ಹೇಳಲಾಗಿದೆ.

ಬುದ್ಧ ಜಾತಕಗಳಲ್ಲಿ ನಾಗನ ಕಥೆಗಳಿವೆ. ಜೈನ ತೀರ್ಥಂಕರರ ವಿಗ್ರಹಗಳಲ್ಲಿ ನಾಗನ ಹೆಡೆಯ ಚಿತ್ರಗಳಿರುವುದುಂಟು. ಮೊಹೆಂಜೋದಾರೋದಲ್ಲಿ ನಾಗವಿಗ್ರಹಾರಾಧನೆ ಇತ್ತೆಂದು ತಿಳಿದು ಬರುತ್ತದೆ. ನಾಗಕುಲ, ನಾಗರಖಂಡ, ನಾಗಲಾಂಛನಗಳ ಪ್ರಸ್ತಾಪಗಳನ್ನು ನಮ್ಮ ನಾಡಿನ ಸಾಂಸ್ಕೃತಿಕ ಅಧ್ಯಯನದಲ್ಲಿ ಆಗಾಗ ಇದಿರಾಗುತ್ತೇವೆ. ಜನಪದ ಸಾಹಿತ್ಯ ಕಲೆಗಳಲ್ಲಿ ನಾಗನ

ಸುಳಿದಾಟ ಧಾರಾಳ"೨೧ ಎಂಬುದಾಗಿ ವಿದ್ವಾಂಸರು ನಾಗಾರಾಧನೆಯ ವ್ಯಾಪಕತೆಯನ್ನು ಗುರುತಿಸಿದ್ದಾರೆ.

**೭.೩.೪: ನಾಗದೋಷ–ನಂಬಿಕೆ**

ನಾಗಸಂಬಂಧಿಯಾದ ನಂಬಿಕೆ ನಡವಳಿಕೆಗಳು ಇಲ್ಲಿನ ಜನಜೀವನದಲ್ಲಿ ಅತ್ಯಂತ ಸಹಜವಾಗಿ ಸೇರಿಕೊಂಡಿರುವುದನ್ನು ಗಮನಿಸಬಹುದು. ನಾಗರಹಾವಿಗೆ ಒಂದು ಸಾವಿರ ವರ್ಷ ಆಯುಸಿದೆಯೆಂದೂ ಅದಕ್ಕೆ ಅತೀಂದ್ರಿಯ ಜ್ಞಾನ ಇರುವುದೆಂದೂ ಪ್ರತೀತಿಯಿದೆ. ಏಳು ಕನ್ನಡಿ ಹಾವುಗಳನ್ನು ಕಬಳಿಸಿ, ಹಾರುತ್ತ ಬಾಲ ಕರಗಿ ಕ್ರಮೇಣ ರೆಕ್ಕೆ, ಹುಟ್ಟಿ, 'ಕುತ್ತೊಡಿ' ಎನಿಸಿ ಹಾರುತ್ತದೆಂದೂ ಅದರ ನೆರಳು ಸೋಂಕಿದವರಿಗೆ ಪಕ್ಷವಾತವೂ, ಅದರ ಬಾಯಿಯಿಂದ ಉಗುಳಿದ ಜೊಲ್ಲು ನೊರೆಯನ್ನು ಮೆಟ್ಟಿದವರಿಗೆ 'ಕಾಲೊತ್ತು' ಎಂಬ ಪೀಡೆಯೂ ಉಂಟಾಗುತ್ತದೆಂದು ಜನಪದರು ನಂಬಿದ್ದಾರೆ. ನಾಗರ ಹಾವನ್ನೋ, ಅದರ ಮೊಟ್ಟೆ, ವಾಸಸ್ಥಳ, ಬೀದಿ ಇತ್ಯಾದಿಗಳನ್ನು ಘಾತಿಸಿದವರಿಗೆ ದೃಷ್ಟಿದೊಷ, ಕುಷ್ಟರೋಗ, ಸಂತಾನಕ್ಷಯಾದಿ ದೋಷ ತಟ್ಟುವುದೆಂದೂ ನಂಬಿದ್ದಾರೆ. 'ಸರ್ಪಮತ್ಸರ' ಎಂಬುದು ಪ್ರಸಿದ್ಧವೇ ಆಗಿದೆ. ಸಾಮಾನ್ಯವಾಗಿ ತಿಳಿದು ತಿಳಿದೂ ಯಾರೂ ನಾಗರ ಹಾವನ್ನು ಹಿಂಸಿಸುವುದಿಲ್ಲ. ಅದರ ಸಾನಿಧ್ಯ ಇರುವ ಸ್ಥಳದಲ್ಲಿ ಅಶುದ್ಧಿ ಮಾಡಲು ಅಂಜುತ್ತಾರೆ. ಅಶುದ್ಧಿಯಾದರೆ ಸರ್ಪ ಕಾಣಿಸಿಕೊಳ್ಳುವುದೆನ್ನುತ್ತಾರೆ. ಹಾಗಾಗಿ ನಾಗ ಪಾವಿತ್ರ್ಯದ ಸಂಕೇತವೆನಿಸಿದೆ.

ಸರ್ಪವೊಂದು ಸತ್ತುದನ್ನು ಕಂಡರೆ, ಅದನ್ನು ಸಂಸ್ಕಾರ ಮಾಡದೆ ಹೋಗಬಾರದೆಂದು ಹೇಳುತ್ತಾರೆ. ಸತ್ತ ಹಾವಿನ ಬಾಯಲ್ಲಿ ನಾಣ್ಯವನ್ನು ಇಟ್ಟು ಬಿಳಿ ಬಟ್ಟೆ ಹೊದೆಯಿಸಿ ದಹನ ಸಂಸ್ಕಾರ ನಡೆಸುತ್ತಾರೆ. ಆ ಬಳಿಕ ವ್ರತಸ್ಥರಾಗಿ ಉತ್ತರ ಕ್ರಿಯೆ ಜರುಗಿಸಿ ಬ್ರಾಹ್ಮಣ ಸಂತರ್ಪಣೆ ನಡೆಯಿಸುವುದು ತುಳುನಾಡಲ್ಲಿ ಕಂಡುಬರುತ್ತದೆ.

ನಾಗದರ್ಶನ, ಬಾವಿಯ ನೀರು ಹಳದಿಯಾಗುವುದು, ಮೈಮೇಲೆ ಬಿಳಿಯ ಕಲೆ ಕಾಣಿಸಿಕೊಳ್ಳುವುದು, ಮರ, ಗಿಡ, ತರಕಾರಿಗಳಲ್ಲಿ ನಾಗನ ಆಕೃತಿ ಕಾಣಿಸಿಕೊಳ್ಳುವುದು ಇತ್ಯಾದಿ ಸಂಭವಿಸುವುದು ನಾಗದೋಷದಿಂದ ಎಂದು ನಂಬಲಾಗಿದೆ. ಇದಕ್ಕೆ ಪರಿಹಾರವಾಗಿ ನಾಗಕ್ಷೇತ್ರಗಳಲ್ಲಿ ನಾಗರಪ್ರತಿಷ್ಠೆ, ಆಶ್ಲೇಷಬಲಿ, ನಾಗದರ್ಶನ, ದಕ್ಕೆಬಲಿ, ನಾಗಮಂಡಲ, ತಂಬಿಲ ಇತ್ಯಾದಿ ಸೇವೆಗಳನ್ನು ಸಲ್ಲಿಸಬೇಕೆಂದು ಜ್ಯೋತಿಷಿಗಳು ಹೇಳುವುದು ಮತ್ತು ಅದರಂತೆ ಜನಪದರು ನಡೆದುಕೊಳ್ಳುವುದು ವಿಶೇಷವಾಗಿ ಗಮನ ಸೆಳೆಯುತ್ತದೆ. ತಿಳಿದೋ ತಿಳಿಯದೆಯೋ ಪ್ರಮಾದವಶಾತ್ ನಾಗನಿಗೆ ತುಳಿದರೆ, ಇಲ್ಲವೆ ತೊಂದರೆಯಾದರೆ ಜನ

ಜನಪದ ಮಂತ್ರವಾದಿಗಳ ಮೂಲಕ ಅಕ್ಕಿ ಮಂತ್ರಿಸಿಕೊಂಡು, ಇಲ್ಲವೆ ನೂಲು ಕಟ್ಟಿಸಿಕೊಂಡು 'ತಡೆ' ಮಾಡಿಕೊಳ್ಳುತ್ತಾರೆ. ಇದನ್ನು 'ತಡೆಕಟ್ಟುನ' ಎಂದು ಹೇಳಲಾಗುತ್ತದೆ. ಹಾಗಾಗಿ 'ಅರಿ ಮಂತ್ರಿತಿ ಮರಿತ್ತ ಗಾದೆ'(ಅಕ್ಕಿ ಮಂತ್ರಿಸಿದ ನಾಗರಹಾವಿನ ಗಾದೆ) ಎಂಬ ಗಾದೆಯೇ ಪ್ರಚಲಿತದಲ್ಲಿದೆ.

## ೭.೪: 'ನಾಗರ ಪಂಚಮಿ'-ಆಚರಣೆಯ ಒಟ್ಟೂ ಸ್ವರೂಪ

ಒಟ್ಟಿನಲ್ಲಿ ನಾಗರಪಂಚಮಿ ಆಚರಣೆಯ ಹಿನ್ನೆಲೆಯಲ್ಲಿ ಈ ಕೆಳಗಿನ ಅಂಶಗಳನ್ನು ಗುರುತಿಸಬಹುದು.

೧. ನಾಗರಪಂಚಮಿ ಆಚರಣೆಯನ್ನು 'ಆಟಿ ಅಮಾವಾಸ್ಯೆ' ಕಳೆದು ಬರುವ ಪಂಚಮಿಯಂದು ಆಚರಿಸಲಾಗುತ್ತದೆ.

೨. 'ನಾಗರ ಪಂಚಮಿ'ಯು ನಾಗಾರಾಧನೆಗೆ ಮೀಸಲಾದ ಆಚರಣೆಯಾಗಿದೆ.

೩. ಪರ್ವ, ತಂಬಿಲ, ಹಾಲೆರೆಯುವುದು ನಾಗರಪಂಚಮಿಯಂದು ನಾಗಬನಗಳಲ್ಲಿ ನಡೆಯುವ ಆಚರಣೆಯ ಭಾಗಗಳಾಗಿರುತ್ತವೆ.

೪. ನಾಗಾರಾಧನೆ ಮೂಲತಃ ದ್ರಾವಿಡ ಮೂಲದ ಆಚರಣೆಯಾಗಿದ್ದು, ತುಳುನಾಡಿಗೆ ಆರ್ಯರ ಆಗಮನದ ನಂತರ ಈ ಆಚರಣೆಯಲ್ಲಿ ವಿಶೇಷವಾಗಿ ವೈದಿಕ ಕ್ರಮ ಸೇರಿಕೊಂಡಿದೆ ಮತ್ತು 'ನಾಗರ ಪಂಚಮಿ' ದಿನ ವೈದಿಕರೇ ನಿಗದಿಗೊಳಿಸಿದ ದಿನವಾಗಿ ಕಂಡುಬರುತ್ತದೆ.

೫. ನಾಗಾರಾಧನೆಯನ್ನು ವರ್ಷದುದ್ದಕ್ಕೂ ತುಳುವರು ವಿಶೇಷ ದಿನ ಸಂದರ್ಭಗಳಲ್ಲಿ ತಪ್ಪದೆ ಆಚರಿಸುತ್ತಾರೆ.

೬. ನಾಗಾರಾಧನೆ ಮೂಲತಃ ನಾಗನ ವಿಷದ ಭಯದಿಂದ ಹುಟ್ಟಿಕೊಂಡಿದೆ.

೭. ನಾಗಾರಾಧನೆ ವಿಶ್ವದ ಅನೇಕ ದೇಶಗಳಲ್ಲಿ ಕಂಡುಬರುತ್ತದೆ.

೮. ತುಳುನಾಡಿನಲ್ಲಿ ನಾಗನ ಬಗೆಗಿನ ನಂಬಿಕೆ ಮತ್ತು ನಾಗ ಸಾನಿಧ್ಯ ವ್ಯಾಪಕವಾಗಿ ಕಂಡುಬರುತ್ತದೆ.

೯. ತುಳುನಾಡಿಗೆ ಆಗಮಿಸಿದ ಮುಸ್ಲಿಮ್, ಕ್ರಿಶ್ಚಿಯನ್ ಜನಾಂಗಗಳವರೂ ನಾಗಾರಾಧನೆಯಲ್ಲಿ ಒಲವು ತೋರಿಸಿದ್ದಾರೆ.

೧೦. ನಾಗಾರಾಧನೆಯಿಂದ ಬೆಳೆ, ಬದುಕಿಗೆ ರಕ್ಷಣೆ ಸಿಗುವುದು ಮಾತ್ರವಲ್ಲ, ಸಂತಾನವೂ ಪ್ರಾಪ್ತಿಯಾಗುತ್ತದೆ ಎಂಬ ಬಲವಾದ ನಂಬಿಕೆಯಿದೆ.

೧೧. ನಾಗಾರಾಧನೆಗೆ ಬಹಳ ಶುದ್ಧಾಚಾರವಿರಬೇಕು.; ಕುಟುಂಬಕ್ಕೆ ಸೂತಕವಿದ್ದರೆ ಈ ಆರಾಧನೆ ಮಾಡುವುದಿಲ್ಲ ಮತ್ತು ಬಹಿಷ್ಠೆಯಾದ ಹೆಂಗಸರು ನಾಗಬನದ ಬಳಿಗೂ ಸುಳಿಯಬಾರದು ಎಂಬ ನಂಬಿಕೆಯಿದೆ.

೧೨. 'ನಾಗರ ಪಂಚಮಿ'ಯಂದು ವಿಶೇಷ ಅಡುಗೆ ಮಾಡುವ ಕ್ರಮವಿಲ್ಲ. ಅಂತೆಯೇ ಯಾವುದೇ ರೀತಿಯ ಜಾನಪದ ಕ್ರೀಡೆಯನ್ನೂ ನಡೆಸುವುದಿಲ್ಲ.

---

<u>**ಅಡಿಟಿಪ್ಪಣಿ**</u>

೧. **ತುಳುವ ಜಾನಪದ:** ಕೆಲವು ನೋಟಗಳು: ೨೦೦೭: ಡಾ.ಅಮೃತ ಸೋಮೇಶ್ವರ: ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ: ಪುಟ-೧೭

೨. **ತುಳು ನಿಘಂಟು:** ಸಂಪುಟ-೦೪: ೧೯೯೭: ಡಾ.ಯು.ಪಿ.ಉಪಾಧ್ಯಾಯ: ರಾಷ್ಟ್ರಕವಿ ಗೋವಿಂದ ಪೈ ಸಂಶೋಧನ ಕೇಂದ್ರ, ಉಡುಪಿ: ಪುಟ-೧೭೩೪

೩. **ತುಳುವ ಜಾನಪದ:** ಕೆಲವು ನೋಟಗಳು: ೨೦೦೭: ಡಾ.ಅಮೃತ ಸೋಮೇಶ್ವರ: ಪೂರ್ವೋಕ್ತ: ಲೇಖನ: ತುಳುನಾಡಿನ ನಾಗಪೂಜೆ: ಪುಟ-೧೬

೪. **ಅದೇ:** ಪೂರ್ವೋಕ್ತ: ಪುಟ-೨೬, ೨೭

೫. **ತುಳು ನಡೆನುಡಿ:** ೧೯೮೮: ವೆಂಕಟರಾಜ ಪುಣಿಂಚತ್ತಾಯ: ರಾಷ್ಟ್ರಕವಿ ಗೋವಿಂದ ಪೈ ಸಂಶೋಧನ ಕೇಂದ್ರ, ಉಡುಪಿ: ಪುಟ-೬೨, ೬೩

೬. **ಮಂಗಳ ತಿಮರು:** ೧೯೮೭: (ಸಂ.) ಏರ್ಯ ಲಕ್ಷ್ಮೀನಾರಾಯಣ ಆಳ್ವ: ಅಮಟಾಡಿ ಮಂಗಳ ತಿಮರು ಶ್ರೀ ಅಣ್ಣಪ್ಪ ಸ್ವಾಮಿ ದೈವಸ್ಥಾನ, ಬಂಟ್ವಾಳ,ದ.ಕ.: ಲೇಖನ: ಜಿಲ್ಲೆಯ ಭೂತಾರಾಧನೆಯ ಬಡಗು, ಸಂಪ್ರದಾಯ-ಪಾಣಾರಾಟ: ಎ.ವಿ.ನಾವಡ: ಪುಟ-೬೯

೭. **ತುಳುವ ಜಾನಪದ:** ಕೆಲವು ನೋಟಗಳು: ೨೦೦೭: ಡಾ.ಅಮೃತ ಸೋಮೇಶ್ವರ: ಪೂರ್ವೋಕ್ತ: ಪುಟ-೨೮

೮. **ಮುಗೇರರು ಜನಾಂಗ ಜಾನಪದ ಅಧ್ಯಯನ:** ೧೯೯೭: ಡಾ.ಅಭಯ ಕೌಕ್ರಾಡಿ: ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು; ಕರ್ನಾಟಕ ತುಳು ಸಾಹಿತ್ಯ ಅಕಾಡೆಮಿ, ಮಂಗಳೂರು: ಪುಟ-೬೦

೯. **ತುಳುವ ಜಾನಪದ:** ಕೆಲವು ನೋಟಗಳು: ೨೦೦೭: ಡಾ.ಅಮೃತ ಸೋಮೇಶ್ವರ: ಪೂರ್ವೋಕ್ತ: ಪುಟ-೨೯

೧೦. **ಕೊಡಿಪು: ವಿಶ್ವತುಳು ಸಮ್ಮೇಳನ ೨೦೦೯ ನೆಂಪು ಸಂಚಿ:** ೨೦೦೯: (ಸಂ.)ಡಾ.ವಾಮನ ನಂದಾವರ: ವ್ಯವಸ್ಥಾಪನಾ ಸಮಿತಿ, ವಿಶ್ವತುಳು ಸಮ್ಮೇಳನ, ಉಜಿರೆ: ಲೇಖನ: ನಾಗರ ಪಂಚಮಿ ವಿರೂಪಗೊಳ್ಳುತ್ತಿರುವ ನಾಗಬನ-ಆರಾಧನಾ ಆಶಯ: ಕೆ.ಎಲ್.ಕುಂಡಂತಾಯ: ಪುಟ-೩೪, ೩೫

೧೧. **ಕನ್ನಡಾನುವಾದ: ತುಳು ಸಂಸ್ಕೃತಿದ ಪೊಲಬು:** ೨೦೦೮: ಡಾ.ಪಾಲ್ತಾಡಿ ರಾಮಕೃಷ್ಣ ಆಚಾರ್: ಕರ್ನಾಟಕ ತುಳು ಸಾಹಿತ್ಯ ಅಕಾಡೆಮಿ: ಪುಟ–೨೩, ೨೪, ೨೫

೧೨. **ಅದೇ:** ಪೂರ್ವೋಕ್ತ: ಪುಟ–೨೭, ೨೮

೧೩. **ತುಳುವ ಜಾನಪದ:** ಕೆಲವು ನೋಟಗಳು: ೨೦೦೭: ಡಾ.ಅಮೃತ ಸೋಮೇಶ್ವರ: ಪೂರ್ವೋಕ್ತ: ಪುಟ–೧೭

೧೪. **ಅದೇ:** ಪೂರ್ವೋಕ್ತ: ಪುಟ–೧೭, ೧೮

೧೫. **ಅದೇ:** ಪೂರ್ವೋಕ್ತ: ಪುಟ–೧೯

೧೬. **ಅದೇ:** ಪೂರ್ವೋಕ್ತ: ಪುಟ–೧೯

೧೭. **ಅದೇ:** ಪೂರ್ವೋಕ್ತ: ಪುಟ–೨೦

೧೮. **ಅದೇ:** ಪೂರ್ವೋಕ್ತ: ಪುಟ–೨೧, ೨೨

೧೯. **ಸಿಂಗದನ:** ೧೯೮೭: ವಾಮನ ನಂದಾವರ: ಹೇಮಾಂಶು ಪ್ರಕಾಶನ, ಮಂಗಳೂರು: ಪುಟ–೫೮

೨೦. **ಕನ್ನಡಾನುವಾದ:** ತುಳು ಸಂಸ್ಕೃತಿದ ಪೊಲಬು: ೨೦೦೮: ಡಾ.ಪಾಲ್ತಾಡಿ ರಾಮಕೃಷ್ಣ ಆಚಾರ್: ಪೂರ್ವೋಕ್ತ: ಪುಟ–೨೩, ೨೪, ೨೫

೨೧. **ತುಳುವ ಜಾನಪದ:** ಕೆಲವು ನೋಟಗಳು: ೨೦೦೭: ಡಾ.ಅಮೃತ ಸೋಮೇಶ್ವರ: ಪೂರ್ವೋಕ್ತ: ಪುಟ–೧೬, ೧೭

■■■

# ಅಧ್ಯಾಯ-೮

## ತುಳುನಾಡಿನ ವಾರ್ಷಿಕ ಆವರ್ತನದ ಆಚರಣೆ-'ಕುರಲ್‌ಪರ್ಬ'
## (ಕದಿರು ಹಬ್ಬ)

# ಅಧ್ಯಾಯ-೮

## ತುಳುನಾಡಿನ ವಾರ್ಷಿಕ ಆವರ್ತನದ ಆಚರಣೆ-'ಕುರಲ್‌ಪರ್ಬ' (ಕದಿರು ಹಬ್ಬ)

# ಅಧ್ಯಾಯ–೮

# ತುಳುನಾಡಿನ ವಾರ್ಷಿಕ ಆವರ್ತನದ ಆಚರಣೆ 'ಕುರಲ್‌ಪರ್ಬ'

# (ಕದಿರು ಹಬ್ಬ)

## ೮.೧: 'ಕುರಲ್‌ಪರ್ಬ'–ಅರ್ಥ

'ಕುರಲ್‌ಪರ್ಬ' ಎಂದರೆ ಕದಿರು ಹಬ್ಬ. ಅರ್ಥಾತ್ ಮನೆ ತುಂಬಿಸುವ ಆಚರಣೆ. ತುಳುವಿನಲ್ಲಿ ಇದನ್ನು 'ಕುರಲ್‌ಕಟ್ಟುನ' (ಕದಿರು ಕಟ್ಟುವುದು), 'ಇಲ್ಲ್‌ದಿಂಜಾವುನ' (ಮನೆ ತುಂಬಿಸುವುದು) ಮುಂತಾಗಿ ಪರ್ಯಾಯ ಹೆಸರುಗಳಿಂದಲೂ ಕರೆಯುತ್ತಾರೆ. "ಗದ್ದೆಯಲ್ಲಿ ಮಳೆಗಾಲದ 'ಏಣೇಲು' ಬೆಳೆಯ ಪೈರು ಬೆಳೆದು ತೆನೆ ತುಂಬಿ ನಿಂತಾಗ ಬೆಳೆ ಕೊಯ್ಯುವ ಮೊದಲು, ಕದಿರನ್ನು ಇನ್ನಿತರ ಕಾಡ ಸಂಪತ್ತಿನ ಜೊತೆ ಮನೆಯೊಳಗೆ ತಂದು 'ಮನೆ ತುಂಬಿಸುವ ಹಬ್ಬ' ಅಥವಾ 'ಕುರಲ್‌ಪರ್ಬ'ವನ್ನು ಆಚರಿಸಲಾಗುತ್ತದೆ."[೧] ಎಂದು ಈ ಹಬ್ಬವನ್ನು ಕುರಿತು ವಿಶ್ಲೇಷಿಸಲಾಗುತ್ತಿದೆ.

ಸಾಮಾನ್ಯವಾಗಿ 'ನಿರ್ನಾಲ' ತಿಂಗಳ 'ಸಿಂಗೊಡೆ' (ಮೊದಲದಿನ)ಯಂದು ಈ ಆಚರಣೆಯನ್ನು ಮಾಡುತ್ತಾರೆ, ಅಥವಾ 'ನಿರ್ನಾಲ' ತಿಂಗಳ ಮೊದಲ ಶುಭ ಶುಕ್ರವಾರದಂದು ತಪ್ಪಿದರೆ 'ನಿರ್ನಾಲ' ತಿಂಗಳು ಮುಗಿಯುವುದರೊಳಗೆ 'ಕುರಲ್‌ಪರ್ಬ'ವನ್ನು ಆಚರಿಸುವ ಕ್ರಮ ಕಂಡುಬರುತ್ತದೆ. ಈ ಆಚರಣೆಗೂ ಮುಂದಿನ 'ಪುದ್ದಾರ್' ಆಚರಣೆಗೂ ತೀರಾ ಹತ್ತಿರದ ಸಂಬಂಧವಿರುವುದು ಗಮನಾರ್ಹವಾಗಿದೆ. 'ಕುರಲ್‌ಪರ್ಬ' ಮಾಡದೆ 'ಪುದ್ದಾರ್' ಮಾಡುವಂತಿಲ್ಲ. 'ಕುರಲ್‌ಪರ್ಬ' ಮತ್ತು 'ಪುದ್ದಾರ'ನ್ನು ಒಂದೇ ದಿನ ಆಚರಿಸುವುದೂ ಕಂಡು ಬರುತ್ತದೆ. ಬೆಳಿಗ್ಗೆ 'ಕುರಲ್‌ಪರ್ಬ' ಆಚರಿಸಿ, ಮಧ್ಯಾಹ್ನ ಇಲ್ಲವೆ ರಾತ್ರಿ 'ಪುದ್ದಾರ್' ಊಟ ಮಾಡುವುದೂ ಉಂಟು. ಕೃಷಿಯನ್ನು ದೇವರೆಂದೇ ನಂಬಿಕೊಂಡು ಬಂದಿರುವ ತುಳುವರು ಭತ್ತದ ತೆನೆಯನ್ನು ವಿಧಿವತ್ತಾಗಿ ಮನೆಯೊಳಗೆ ತಂದು ಕಾಡ ಸಂಪತ್ತಿನ ಜೊತೆ ಕಟ್ಟುಗಳನ್ನಾಗಿಸಿ ದೇವರ ಮಣೆಗೆ, ಭೂತದ 'ಪದೊಲಿ'ಗೆ, ಅಟ್ಟಕ್ಕೆ, ಬಾಗಿಲಿಗೆ, ಬಾವಿದಂಡೆಗೆ, ಹಟ್ಟಿಗೆ ಹೀಗೆ ಬೇರೆ ಬೇರೆ ಕಡೆಗಳಲ್ಲಿ ಕಟ್ಟುವುದು ಈ ಆಚರಣೆಯ ಒಂದು ಭಾಗವಾಗಿರುತ್ತದೆ.

ತುಳುನಿಘಂಟಿನಲ್ಲೂ 'ಕುರಲ್‌ಕಟ್ಟುನಿ' ಎಂದರೆ ಹೊಸ ಕದಿರು ತಂದು ಮನೆತುಂಬಿಸುವ ಆಚರಣೆ. ಭತ್ತದ ('ಏಣೇಲು') ಬೆಳೆಯನ್ನು ಕಟಾವು ಮಾಡುವ ಮೊದಲು ಅದರ ತೆನೆಯನ್ನು ಸಾಂಪ್ರದಾಯಿಕವಾಗಿ ತಂದು ಪೂಜಿಸಿ ಮಾವು, ಹಲಸು, ಅಶ್ವತ್ಥ,

ಮೊದಲಾದವುಗಳ ಎಲೆಗಳೊಂದಿಗೆ ಸುತ್ತಿ ದೇವಸ್ಥಾನಕ್ಕೆ, ಮನೆಗೆ, ಕೃಷಿ ಸಂಬಂಧಿಯಾದ ಉಪಕರಣ ಮೊದಲಾದವುಗಳಿಗೆ, ಫಲ ಬಿಡುವ ಗಿಡಮರಗಳಿಗೆ ಕಟ್ಟುವುದು; ಮನೆತುಂಬಿಸಿವುದು, ಕದಿರು ಕಟ್ಟುವುದು; A ritual performed before the first harvest. (The spike of corn is ceremoniously brought into the house, worshipped as goddess of wealth and prosperity and tied with mango and jack leaves to the pillars and doors of the house, temples and cattle shed and also to the agricultural implements; granary, fruit bearing trees etc.-ಇತ್ಯಾದಿ ಅರ್ಥವಿವರಣೆ ಇರುವುದನ್ನು ವಿಶೇಷವಾಗಿ ಗಮನಿಸಬಹುದು.[೨] ಕನ್ನಡ ಜಾನಪದ ವಿಶ್ವಕೋಶದಲ್ಲಿ –"ಮಳೆಗಾಲದ ಏಣೆಲು ಬೆಳೆಯ ಕಟಾವಿಗೆ ಮೊದಲು ಒಂದು ನಿಶ್ಚಿತ ಮುಹೂರ್ತದಲ್ಲಿ ಕೊಯ್ಲಿಗೆ ಬಂದಿರುವ ಭತ್ತದ ಬೆಳೆಯಲ್ಲಿ ಸ್ವಲ್ಪವನ್ನು ಕುಯ್ದು ಮನೆಗೆ ತರುವ ಶಾಸ್ತ್ರಕ್ಕೆ ಮನೆ ತುಂಬಿಸುವುದು ಎನ್ನುವರು. ಈ ಶಾಸ್ತ್ರ ನಡೆಸುವ ಹಿಂದಿನ ದಿನ ಅಥವಾ ಆ ದಿನವೇ ಬೆಳಗಾಗುವ ಮೊದಲೇ ಗದ್ದೆಯಿಂದ ತೆನೆಯನ್ನು ಕುಯ್ದು ತಂದು ಅಂಗಳದಲ್ಲಿ ಎತ್ತರವಾದ ಪ್ರದೇಶದಲ್ಲಿಟ್ಟಿರುತ್ತಾರೆ. ಇದರ ಜೊತೆಗೆ ಮಾವಿನ ಎಲೆ, ಗೋಳಿ (ಆಲ)ಎಲೆ, ಅರಳಿ ಎಲೆ, ಇಟ್ಟೇವು ಎಲೆ ಇವುಗಳನ್ನು ಹಿಂದಿನ ದಿನವೇ ತಂದಿಟ್ಟಿರುವರು. ಇದರ ಜೊತೆಗೆ ದಡ್ಡಾಳು ಮರದ ನಾರು ಕೂಡ ಇಟ್ಟಿರುವರು. ನಿಶ್ಚಿತವಾದ ಸಮಯಕ್ಕೆ ಸರಿಯಾಗಿ ಮನೆಯ ಯಜಮಾನನು ಇವೆಲ್ಲವುಗಳನ್ನು ತಲೆಯ ಮೇಲೆ ಹೊತ್ತುಕೊಂಡು ಮನೆಯೊಳಕ್ಕೆ ಬರುವನು. ಮೆಟ್ಟಿಲು ಹತ್ತಿ ಬರುವಾಗ ಮನೆಯೊಡತಿ ಅವನ ಕಾಲಿಗೆ ನೀರು ಹಾಕುವಳು. ಆಗ 'ಪೊಲಿಪೊಲಿಯೆ' (ಧಾನ್ಯಲಕ್ಷ್ಮಿ ಬರಲಿ) ಎಂದು ಹೇಳುವರು. ಅನಂತರ ನಡುಕೋಣೆಯಲ್ಲಿಟ್ಟು ಆರತಿ ಮಾಡಿ ಸೇಸೆ ಹಾಕುವರು. ತಂದ ಎಲ್ಲಾ ಜಾತಿಯ ಎಲೆಯನ್ನು ಭತ್ತದ ತೆನೆಯೊಂದಿಗೆ ಕಟ್ಟಿ ಮನೆಯ ಛಾವಣಿಗೆ, ಕಣಜಕ್ಕೆ, ಕೊಟ್ಟಿಗೆಗೆ, ತೆಂಗಿನಮರಕ್ಕೆ, ಕಬ್ಬಿಣದ ಪೆಟ್ಟಿಗೆಗಳಿಗೆ ಒಂದೊಂದು ಕಟ್ಟುಗಳನ್ನು ಕಟ್ಟುವರು. ಅನಂತರ ಯಾವುದೇ ದಿನ ಕೊಯ್ಲು ಪ್ರಾರಂಭಿಸಬಹುದು. ಈ ಶಾಸ್ತ್ರ ಬೆಳಗಿನ ಹೊತ್ತು ನಡೆಯುತ್ತದೆ. ಕೊಯ್ಯುವ ಮೊದಲು ಗದ್ದೆಯ ಒಂದು ಮೂಲೆಯ ನಾಲ್ಕು ಪೈರುಗಳನ್ನು ಕೊಯ್ದು ಹಲಸಿನ ದೊನ್ನೆಯಲ್ಲಿ ಹಾಲು ಇಡುವರು"[೩] ಎಂಬುದಾಗಿ ವಿವರಿಸಲಾಗಿದೆ.

## ೮.೨: 'ಕುರಲ್‌ಪರ್ಬ'-ಆಚರಣೆಯ ವಿಧಾನ

'ಕುರಲ್‌ಪರ್ಬ'ದ ಮೊದಲ ದಿನ ಇಲ್ಲವೆ ಅದೇ ದಿನ ಬೆಳಿಗ್ಗೆ ಬೇಗ ಹೆಂಗಸರು ಮನೆಯನ್ನು ಸೆಗಣಿ ಸಾರಿಸಿ ಶುದ್ಧಗೊಳಿಸುತ್ತಾರೆ. ಮನೆಯ ಯಜಮಾನ ಸ್ನಾನಮಾಡಿ ಮಡಿ ಬಟ್ಟೆಯುಟ್ಟು ತಲೆಗೆ ಮುಂಡಾಸು, ಹೆಗಲಲ್ಲಿ ಬೈರಾಸು ಧರಿಸಿ, ದೇವರ ಮಣೆಯ ಕೆಳಗೆ ಇನ್ನೊಂದು ಮಣೆಯನ್ನು ತೊಳೆದಿಟ್ಟು, ಅದರಲ್ಲಿ ಒಂದು ದೀಪ ಉರಿಸುತ್ತಾನೆ. ಅನಂತರ ಕದಿರು ತರಲು ಗದ್ದೆಗೆ ಹೋಗುತ್ತಾನೆ. ಅಲ್ಲಿ ಬೆಳೆದು ನಿಂತ ಪೈರಿಗೆ ವಿಧಿವತ್ತಾಗಿ ಪೂಜಿಸಿ, ಅನನ್ಯ ಭಕ್ತಿಭಾವದಿಂದ ಪ್ರಾರ್ಥಿಸಿ ಒಂದು 'ಸೂಡಿ'ಯಷ್ಟು ತೆನೆಯನ್ನು ಕಿತ್ತು ಇಲ್ಲವೆ ಕತ್ತರಿಸಿ ತಂದು ಒಂದು 'ಕೊಡಿ' ಬಾಳೆ ಎಲೆಯಲ್ಲಿ ಹಾಕಿ ತಲೆಯಲ್ಲಿ ಹೊತ್ತು ತರುತ್ತಾನೆ. ಕೆಲವೊಮ್ಮೆ ತೆನೆಯನ್ನು ಮುಂಚಿನ ದಿನ ಸಾಯಂಕಾಲವೇ ತರುವುದೂ ಉಂಟು. ಹಾಗೆ ತಂದು ಬಾವಿಯ ದಂಡೆಯಲ್ಲಿಯೋ, ಇಲ್ಲವೆ ತುಳಸೀ ಕಟ್ಟೆಯ ಬಳಿಯಲ್ಲಿಯೋ ಇಟ್ಟಿರುತ್ತಾರೆ. ಹಾಲು ಬರುವ ಮರದಡಿಯಲ್ಲಿ ತೆನೆಯನ್ನು ಇಡಬೇಕೆಂಬ ನಂಬಿಕೆಯೂ ಇದೆ. ಅದರಂತೆ ಮನೆಯ ಆವರಣದೊಳಗಿರುವ ಹಲಸಿನ ಮರದಡಿಯಲ್ಲಿ ಸಂಗ್ರಹಿಸಿಡುತ್ತಾರೆ. ಅದರ ಜೊತೆಗೆ ತುದೀ ಗೆಲ್ಲು ಸಹಿತ ಮಾವಿನಸೊಪ್ಪು, ಹಲಸಿನಸೊಪ್ಪು, ಗರಿಕೆಹುಲ್ಲು, 'ಪಚ್ಚೆಕುರಲ್', ರುಕ್ಕಿ, 'ಪೊಲಿಬಲ್ಲ್', 'ದಡ್ಡಲ್‌ನಾರ್', 'ನೆಯ್‌ಕಂಬುರ್ಲ', 'ಇಟ್ಟೊವು', ಅಶ್ವತ್ಥ, ಅತ್ತಿ, ಇತ್ತಿ, 'ಬಲಿಪಬಳ್ಳಿ', 'ಗೋಳಿ', ಹೂವು ಸಹಿತವಾದ ಸೌತೆ ಮಿಡಿ, ಬಿದಿರುಸೊಪ್ಪು, ತುಳಸಿ, ಗೌರಿಹೂವು, ಗಂಧ, ಕುಂಕುಮ ಇತ್ಯಾದಿಗಳನ್ನು ಸಂಗ್ರಹಿಸಿ ಇಡುತ್ತಾರೆ. ಹೀಗೆ ಎಲ್ಲ ವಸ್ತುಗಳನ್ನು ಜೋಡಿಸಿಯಾದ ನಂತರ ಒಂದಿಬ್ಬರು ಯಜಮಾನನ ಜೊತೆಗೆ ಸೇರಿಕೊಳ್ಳುತ್ತಾರೆ. ಯಜಮಾನ ಆ ವಸ್ತುಗಳಿಗೆ ಧೂಪ ಆರತಿ ಮಾಡಿ ಅವುಗಳನ್ನು ಶುದ್ಧಗೊಳಿಸುತ್ತಾನೆ. ನಂತರ ಇಬ್ಬರು ಮೂವರು ಅವುಗಳನ್ನೆಲ್ಲ ಹಿಡಿದುಕೊಂಡು ಮನೆಯೊಳಗೆ ತರುತ್ತಾರೆ. ಹೀಗೆ ತರುವಾಗ ಮನೆಯ ಯಜಮಾನ ತೆನೆಗಳನ್ನು ಹಿಡಿದು ಮುಂದುಗಡೆಯಿಂದಲೂ, ಉಳಿದವರು ಉಳಿದ ವಸ್ತುಗಳನ್ನು ಹಿಡಿದುಕೊಂಡು ಆತನನ್ನು ಹಿಂಬಾಲಿಸಿ ಮನೆಯೊಳಗೆ ತೆನೆ ತರುತ್ತಾರೆ. ಆಗ ಎಲ್ಲರೂ 'ಪೊಲಿ ಪೊಲಿ ಪೊಲಿ' ಎಂದು ಹೇಳುತ್ತಾ ತುಳಸೀಕಟ್ಟೆಗೆ ಒಂದುಸುತ್ತು ಪ್ರದಕ್ಷಿಣೆ ಬಂದು ಮನೆಯೊಳಗೆ ಪ್ರವೇಶಿಸುತ್ತಾರೆ. ಹೀಗೆ ಮನೆಯೊಳಗೆ ಪ್ರವೇಶಿಸುವ ಮೊದಲು ಮನೆಯ ಹೆಂಗಸರು ಯಜಮಾನನ ಪಾದವನ್ನು ತೊಳೆಯುತ್ತಾರೆ. ನಂತರ ದೇವರಮಣೆಯ ಕೆಳಗೆ ಶುಚಿಗೊಳಿಸಿಟ್ಟ ಮಣೆಯ ಮೇಲೆ ಹೊತ್ತುತಂದ ತೆನೆಗಳನ್ನು ಯಜಮಾನ ಇಡುತ್ತಾನೆ. ಮಣೆಯ ಪಕ್ಕದಲ್ಲಿ ದೀಪ ಉರಿಸುತ್ತಾನೆ. ತೆನೆಗಳನ್ನು 'ಕಳಸೆ' ಇಲ್ಲವೆ 'ಮಿಜ'ಗಳಲ್ಲಿ ಅಥವಾ

ಹೊಸ 'ಕುರುವೆ'ಯಲ್ಲಿ ಇಡುತ್ತಾರೆ. ಈ 'ಕಳಸೆ', 'ಮಿಜ' ಇಲ್ಲವೆ 'ಕುರುವೆ'ಗಳನ್ನು ಮೊದಲ ದಿನವೇ ಸೆಗಣಿ ಸಾರಿಸಿ ಪರಿಶುದ್ಧಗೊಳಿಸಿರುತ್ತಾರೆ. ಅವುಗಳಿಗೆ ಗಂಧ ಹಚ್ಚುತ್ತಾರೆ. ಹಾಗೆಯೇ ಅಲ್ಲಿ ಒಂದು 'ಮಂತು' (ಕಡೆಗೋಲು), ಒಂದು 'ಪರ್ದತ್ತಿ' (ಪೈರು ಕೊಯ್ಯುವ ಹಲ್ಲುಗಳಿರುವ ಕತ್ತಿ) ಒಂದು 'ಸೇರು' (ಅಕ್ಕಿ, ಭತ್ತ ಮೊದಲಾದವುಗಳನ್ನು ಅಳೆಯುವ ಸಾಧನ) – ಇತ್ಯಾದಿಗಳನ್ನು ಗಂಧ ಹಚ್ಚಿ ಇಡುತ್ತಾರೆ. ಅವುಗಳಲ್ಲಿಯೇ ಐದು ವೀಳ್ಯ, ಒಂದು ಅಡಕೆ ಇಡುತ್ತಾರೆ. ಒಂದು 'ಕೊಡಿ' ಎಲೆಯಲ್ಲಿ ೧ 'ಪಾವು' ಬೆಳ್ತಿಗೆ ಅಕ್ಕಿ, ಅದರ ಮೇಲೆ, ತೆಕ್ಕರ್ಪೆ (ನೀರುಸೌತೆ) ಇಡುತ್ತಾರೆ. ಅದರಲ್ಲಿಯೂ ೫ ವೀಳ್ಯ, ೧ ಅಡಿಕೆ ಇಡುತ್ತಾರೆ. ೧ ಹರಿವೆ, ೧ 'ಕರಿಚೇವು ದಂಡ್' (ಕರಿಕೆಸು) ಅಕ್ಕಿಯ ಬದಿಯಲ್ಲಿಡುತ್ತಾರೆ. ಈ ಹರಿವೆ, 'ಚೇವು', ಸೌತೆಗಳನ್ನು ನಂತರ ನಡೆಯುವ 'ಪುದ್ವಾರ್'ಗೆ ಪದಾರ್ಥಕ್ಕೆ ಬಳಸಿಕೊಳ್ಳುತ್ತಾರೆ.. ಮನೆಯೊಳಗೆ ಇಟ್ಟ 'ಕುರಲ್'ಗೆ ತೆಂಗಿನಕಾಯಿ ಒಂದನ್ನು ಒಡೆಯುತ್ತಾರೆ. ನಂತರ 'ಕುರಲ್'ಗೆಲ್ಲ ಗಂಧ ಪ್ರಸಾದ ಮುಟ್ಟಿಸಲಾಗುತ್ತದೆ. ತೆಂಗಿನ ಕಾಯಿಯ ಗಡಿಗಳಿಗೆ ಭತ್ತ ಇಲ್ಲವೆ ಗಂಧ ಹಾಕುತ್ತಾರೆ. ನಂತರ ಎಲ್ಲರೂ ಸೇರಿ ಮನೆಯೊಳಗೆ ಮತ್ತೆ ತೆನೆಗಳಿಗೆ ಧೂಪ, ಆರತಿ ಬೆಳಗಿ ಈ ರೀತಿ ಪ್ರಾರ್ಥನೆ ಸಲ್ಲಿಸುತ್ತಾರೆ. "ತಾಯಿ ಸಂಪತ್ತು ಲಕ್ಷ್ಮಿಯನ್ನು ಸ್ವಾಗತಿಸುವ ಹೊತ್ತಿನಲ್ಲಿ ವಿಷ ಇದ್ದರೆ ಗರುಡನ ಬಾಯಿಗೆ ಹಾಕಿ ಅಮೃತ ಘಳಿಗೆಯನ್ನಾಗಿ ಮಾಡಿ ಎಲ್ಲರನ್ನು ಸುಖ ಸೌಖ್ಯದಿಂದ ನಡೆಸಿಕೊಡಿ" ಎಂದು ನಿವೇದಿಸಿ ಎಲ್ಲರೂ ಆ ತೆನೆಗಳನ್ನು ಮುಟ್ಟಿ ನಮಸ್ಕರಿಸುತ್ತಾರೆ; ಅಡ್ಡಬೀಳುತ್ತಾರೆ. ಹೀಗೆ ನಮಸ್ಕರಿಸಿದ ನಂತರ ಭತ್ತದ ತೆನೆಯಿಂದ ಮೂರು ಇಲ್ಲವೇ ಐದು ಭತ್ತ ತೆಗೆದು ಅದರ ಸಿಪ್ಪೆ ಸುಲಿದು ಅಕ್ಕಿಯನ್ನು ಉರಿಸಿಟ್ಟ ದೀಪಕ್ಕೆ ಹಾಕುತ್ತಾರೆ. ಪುನಃ ನಮಸ್ಕರಿಸಿ ಗಂಧ ಸ್ವೀಕರಿಸುತ್ತಾರೆ. ನಂತರ ಭತ್ತದಿಂದ ಅಕ್ಕಿ ಕಾಳು ತೆಗೆದು ಹಾಲಿಗೆ ಸೇರಿಸಿ ಮನೆಮಂದಿ ಕುಡಿಯುವ ಕ್ರಮವಿದೆ. ಇದನ್ನು 'ತೊಲ್ಲುಪುದ್ವಾರ್' ಎಂದೂ ಕರೆಯುತ್ತಾರೆ. ಹೀಗೆ ಆರಾಧನೆಯ ಕ್ರಮ ಮುಗಿದು ಎಲ್ಲರು ಒಟ್ಟು ಸೇರಿ ತಂದಿದ್ದ ಪರಿಕರಗಳ ಸಹಿತ 'ಕುರಲ್‌ಕಟ್ಟುನ' ಕ್ರಿಯೆಗೆ ಮುಂದಾಗುತ್ತಾರೆ. ಮೂರು 'ಕುರಲ್'ಗಳನ್ನು ಈಗಾಗಲೇ ತಿಳಿಸಿದ ವಸ್ತುಗಳ ಸಹಿತ 'ದಡ್ಡಲ್‌ನಾರಿ'ನಿಂದ ಕಟ್ಟುಗಳನ್ನಾಗಿ ಕಟ್ಟಿ ವಿಂಗಡಿಸುತ್ತಾರೆ. ಮುಖ್ಯವಾಗಿ ದೇವರ ಮಣೆಗೆ, ಬಾಗಿಲಿಗೆ, ಭೂತದ ಕೋಣೆಗೆ, ತುಳಸಿ ಕಟ್ಟೆಗೆ, ಬಾವಿ ದಂಡೆಗೆ, ಪಟ್ಟಿಗೆ, ತೆಂಗಿನ ಮರಕ್ಕೆ, ಹಲಸಿನ ಮರಕ್ಕೆ, ಒನಕೆ ಪಗ್ಗಕ್ಕೆ, 'ನಿಗಸಾಯಿರ್' (ನೊಗನೇಗಿಲು)ಗಳಿಗೆ ಇತ್ಯಾದಿಗಳಿಗೆಲ್ಲ ಕಟ್ಟುತ್ತಾರೆ. ಹೀಗೆ 'ಕುರಲ್‌ಕಟ್ಟುನ' ಆದ ಮೇಲೆ ಮಧ್ಯಾಹ್ನ ಮನೆಯ ಹೆಂಗಸರು ರುಚಿಕರವಾದ ತರಕಾರಿ ಅಡುಗೆ ಮಾಡಿರುತ್ತಾರೆ. ಎಲ್ಲರೂ ಸೇರಿ ಊಟ ಮಾಡುತ್ತಾರೆ. ಕುಟುಂಬದ ಸದಸ್ಯರು ಎಲ್ಲಿದ್ದರೂ ಈ

ದಿನ ಮನೆಗೆ ಬರುತ್ತಾರೆ. ಈ ಆಚರಣೆಯಲ್ಲಿ ಭಕ್ತಿ ಸಂಭ್ರಮಗಳಿಂದ ಪಾಲ್ಗೊಳ್ಳುತ್ತಾರೆ. ಕೋಳಿಅಂಕ, ಬೇಟೆಯಾಡುವುದು ಇಲ್ಲವೆ ತೆಂಗಿನಕಾಯಿ ಕುಟ್ಟುವಂತಹ ಕ್ರೀಡೆಯನ್ನು ಮನೋರಂಜನೆಗಾಗಿ ಆಡುತ್ತಾರೆ. ಹುಟ್ಟು ಸಾವುಗಳ ಸೂತಕಗಳು ಬಂದರೆ ಈ ಆಚರಣೆಯನ್ನು ಮಾಡುವುದಿಲ್ಲ. ('ಕುರಲ್‌ಪರ್ಬ' ಆಚರಣೆಗೆ ಸಂಬಂಧಿಸಿದಂತೆ ಅನುಬಂಧ ಪುಟ– viii ರಲ್ಲಿನ ಚಿತ್ರ–೧.೫.೧ ರಿಂದ ೧.೫.೧೨ ಇವುಗಳನ್ನು ಗಮನಿಸಬಹುದು.)

## ೮.೩: 'ಕುರಲ್‌ಪರ್ಬ' ಆಚರಣೆ–ವಿಶ್ಲೇಷಣೆ

ತುಳುವರಿಗೆ ಭತ್ತವೇ ದೇವರು. ಭತ್ತ ಬೇಸಾಯವೇ ದೇವತಾಕಾರ್ಯ. ಈ ನೆಲೆಯಲ್ಲಿ ಕುರಲ್‌ಪರ್ಬಕ್ಕೆ ಬಹಳಷ್ಟು ಮಹತ್ವವಿದೆ. 'ಏಣೇಲು' ಬೆಳೆ ಮೊದಲ ಬೆಳೆಯಾಗಿ 'ನಿರ್ನಾಲ' ತಿಂಗಳ ಸಮಯಕ್ಕೆ ತೆನೆ ಹಾಲಿನಿಂದ ತುಂಬಿ ತುಳುಕುತ್ತಿರುತ್ತದೆ. ಮಳೆಗಾಲದ ಆರ್ಭಟ ಕಡಿಮೆಯಾಗಿರುತ್ತದೆ. ಇಂತಹ ಸಂದರ್ಭದಲ್ಲಿ ಈ ಹಬ್ಬವನ್ನು ಆಚರಿಸಲಾಗುತ್ತದೆ. ಈ ಹಬ್ಬವನ್ನು ಆಚರಿಸದೇ ಅಂದರೆ 'ಇಲ್ಲ್‌ದಿಂಜಾವುನ' ಮಾಡದೆ 'ಏಣೇಲು' ಕೊಯ್ಲು ಮಾಡಬಾರದು ಎಂಬ ನಂಬಿಕೆ ತುಳುನಾಡಿನಲ್ಲಿದೆ. ಅಂದರೆ ಬದುಕಲು ಜೀವಶಕ್ತಿಯಾಗಿ ಅನ್ನಾಹಾರವನ್ನು ನೀಡುವ ಭತ್ತದ ಬೆಳೆಯನ್ನು ಅತ್ಯಂತ ಶ್ರದ್ಧಾಭಕ್ತಿಯಿಂದ ಪೂಜಿಸುವುದು ತುಳುನಾಡಿನ ಧಾರ್ಮಿಕಶ್ರದ್ಧೆಯನ್ನು ತೋರಿಸುತ್ತದೆ. ಈ ಪರ್ಬವನ್ನು 'ನಿರ್ನಾಲ' ತಿಂಗಳ ಮೊದಲ ದಿನ ಇಲ್ಲವೆ 'ನಿರ್ನಾಲ' ತಿಂಗಳ ಅಂತ್ಯದೊಳಗೆ ಮಾಡಬೇಕು ಎಂಬುದು ವಿಚಾರಯೋಗ್ಯವಾಗಿದೆ. ಅಂದರೆ ಮೇಲೆ ಹೇಳಿದಂತೆ ಮಳೆ ಕಡಿಮೆಯಾಗಿ ಭತ್ತದ ಕದಿರು ಬಂದಿರುತ್ತದೆ, ಮತ್ತು ಅದು ಬೆಳೆದು ಅದನ್ನು ಕಟಾವು(ಕೊಯ್ಲು) ಮಾಡುವ ಮೊದಲು ಈ ಹಬ್ಬವನ್ನು ಮಾಡಲೇ ಬೇಕು. ಅದೂ ಸಾಮಾನ್ಯವಾಗಿ ಈ ಕದಿರು ಕಟ್ಟುವುದನ್ನು ಪೈರು ಇನ್ನೂ ಪೂರ್ತಿ ಬೆಳೆಯುವ ಮೊದಲೇ ಮಾಡುತ್ತಾರೆ. ಅಂದರೆ ತೆನೆಯಲ್ಲಿ ಹಾಲುಗಟ್ಟಿಯಾಗುತ್ತಿರುವ ಸಮಯ ಹೆಚ್ಚು ಪ್ರಶಸ್ತ. ಹಾಗಾಗಿ 'ನಿರ್ನಾಲ' ತಿಂಗಳು ಕಳೆದರೆ ಮತ್ತೆ ಪೈರು ತೀರ ಬೆಳೆದು ಕೊಯ್ಲಿಗೆ ಬರುತ್ತದೆ. ಇದಲ್ಲದೆ 'ನಿರ್ನಾಲ' ಕೊನೆಯ ದಿನ 'ಕಾವೇರಿ ಸಂಕ್ರಾಂತಿ'. 'ಕಾವೇರಿ ಸಂಕ್ರಾಂತಿ'ಗೆ ಮೊದಲು 'ಪುದ್ವಾರ್' ಊಟ ಆಚರಣೆ ಮಾಡಬೇಕು ಎಂಬ ನಂಬಿಕೆಯೂ ತುಳುನಾಡಿನಲ್ಲಿರುವುದರಿಂದ, ಈ 'ಪುದ್ವಾರ್' ಊಟಕ್ಕೆ ಮೊದಲು 'ಕುರಲ್‌ಕಟ್ಟುನ' ಆಚರಣೆ ಆಗಲೇ ಬೇಕಾದದ್ದು ಅನಿವಾರ್ಯ. ಹೀಗೆ ತುಳುನಾಡಿನ ಆಚರಣೆಗಳಿಗೆ ಆಂತರಿಕ ಸಂಬಂಧವಿರುವುದನ್ನು ಇಲ್ಲಿ ಗಮನಿಸಬಹುದು. ತುಳುನಾಡಿನ ಭತ್ತ ಕೃಷಿಯ ನಿರಂತರ

ಚಟುವಟಿಕೆಯನ್ನು ನಿರ್ವಹಿಸುವಲ್ಲಿ ಈ ರೀತಿಯ ಆಚರಣೆಗಳು, ನಂಬಿಕೆಗಳು ಮಹತ್ವದ ಪಾತ್ರ ವಹಿಸುವುದು ಇದರಿಂದ ಸ್ಪಷ್ಟವಾಗುತ್ತದೆ.

ಮನೆ ತುಂಬಿಸುವುದು ಎಂದರೆ ಸಮೃದ್ಧಿಯನ್ನು ಮನೆಗೆ ಆಹ್ವಾನಿಸುವುದು ಎಂದರ್ಥ. ಅಂದರೆ ತುಳುನಾಡಿನ ಜನರಿಗೆ ಭತ್ತ ಬೇಸಾಯ ಎಂಬುದು ಬಹಳ ದೊಡ್ಡ ಸಂಪತ್ತು. ಅಂತಹ ಭತ್ತದ ತೆನೆಗಳನ್ನು ಮನೆಯೊಳಗೆ ತಂದು ಪೂಜಿಸುವುದರಿಂದ ಎಲ್ಲ ರೀತಿಯ ಕಷ್ಟಗಳು ಪರಿಹಾರವಾಗುತ್ತವೆ, ಕುಟುಂಬಕ್ಕೆ ಒಳ್ಳೆಯದಾಗುತ್ತದೆ ಎಂಬ ನಂಬಿಕೆ ಈ ಆಚರಣೆಯ ಹಿಂದಿದೆ. ಮನೆಯೊಳಗೆ ತಂದು ಕದಿರನ್ನು ಪೂಜಿಸುವ ಸಂದರ್ಭದಲ್ಲಿ "ಸೌಭಾಗ್ಯ ನೀಡುವ ಧಾನ್ಯಲಕ್ಷ್ಮೀ ಇಂದು ನಿನ್ನನ್ನು ವರ್ಷಂಪ್ರತಿಯಂತೆ ಮನೆ ತುಂಬಿಕೊಂಡು ಪೂಜಿಸಿದ್ದೇವೆ. ಈ ಘಳಿಗೆ ವಿಷವಿದ್ದರೂ ಅಮೃತ ಕಾಲವನ್ನಾಗಿ ಮಾಡಿಕೊಂಡು ಈ ಗೃಹಗತಿಯನ್ನು ಬೆಳಗುವ ಐಶ್ವರ್ಯ ದೇವತೆಯಾಗಿ ಹೊಲಗದ್ದೆಗಳಲ್ಲಿ ಪೈರು ಸಮೃದ್ಧಿಗೊಳ್ಳುವಂತೆ ಅನುಗ್ರಹಿಸಿ ಹಟ್ಟಿ ಕೊಟ್ಟಿಗೆಗಳಲ್ಲಿರುವ ಗೋವುಗಳಿಗೆ, ಸೌಖ್ಯ ಸಂಪದವನ್ನೊದಗಿಸಿ ಮನೆಮಂದಿಗೆಲ್ಲ ಆರೋಗ್ಯವನ್ನಿತ್ತು ಪರವೂರಿನಲ್ಲಿರುವ ಮನೆ ಮಕ್ಕಳು ಸೌಖ್ಯವಾಗಿರುವಂತೆ ಕರುಣಿಸು ಸಿರಿ ದೇವಿ"[೪] ಎಂದು ಬೇಡಿಕೊಂಡು ಅಡ್ಡ ಬೀಳುವರು. ಈ ಸಾಮೂಹಿಕ ಪ್ರಾರ್ಥನೆಯಲ್ಲಿ ತುಳುವರು ಪ್ರಕೃತಿ ಆರಾಧಕರು ಮತ್ತು ಅನ್ನಾಹಾರ ನೀಡುವ ಭತ್ತದ ಮುಂದೆ ಶರಣಾಗತಿಯಾಗುವ ಭಾವ ವ್ಯಕ್ತವಾಗುತ್ತದೆ.

ಕದಿರು ಕಟ್ಟುವಾಗ ವಿವಿಧ ಜಾತಿಯ ಎಲೆಗಳನ್ನು, ಬಳ್ಳಿಗಳನ್ನು ಬಳಸುವುದು ಪ್ರಕೃತಿಯ ಜೊತೆಗಿನ ಸಮನ್ವಯವನ್ನು ತಿಳಿಸುತ್ತದೆ ಎಂಬುದು ಒಂದಂಶವಾದರೆ ಎರಡನೆಯದಾಗಿ ಕದಿರನ್ನು ಮಾವಿನಎಲೆ, ಹಲಸಿನಎಲೆ ಮತ್ತಿತರ ಎಲೆ-ಬಳ್ಳಿಗಳನ್ನು ಸೇರಿಸಿ ಕಟ್ಟುವುದರಿಂದ ಆ ತೆನೆ ಮುಂದಿನ ಕದಿರು ಹಬ್ಬದವರೆಗೂ ಏನೂ ಹಾಳಾಗದೆ ಉಳಿಯುತ್ತದೆ. ಅದೂ 'ದಡ್ಡಲ್ ನಾರ'ನ್ನು ತೆನೆ ಕಟ್ಟಲು ಬಳಸುತ್ತಾರೆ. ಈ ನಾರು ಅತ್ಯಂತ ಗಟ್ಟಿಯಾಗಿರುತ್ತದೆ. ಬಹಳ ಕಾಲದವರೆಗೆ ಇರುತ್ತದೆ. ಹೀಗೆ ಪ್ರಕೃತಿಯಲ್ಲಿ ದೊರೆಯುವ ಸಸ್ಯ ಸಂಪತ್ತನ್ನು ಬಳಸುವುದು ತುಳುನಾಡಿನ ಜನರಿಗೆ ಸಸ್ಯಲೋಕದ ಮೇಲಿನ ವಿಶೇಷ ಅರಿವನ್ನು ತಿಳಿಸುತ್ತದೆ. ಕದಿರು ಕಟ್ಟುವ ಸಂದರ್ಭದಲ್ಲಿ "ಕೆಲವೆಡೆ ತುಳಸಿಯ ಪಕ್ಕದಲ್ಲಿ ಕೃಷಿಗೆ ಅಗತ್ಯವಿದ್ದ ಕಳಸೆ, ಅಕ್ಕಿ ಅಳೆಯುವ ಕೋಲು, ನೇಗಿಲು, ನೊಗ, ಕಾಂಟ್ಯ, ಹೆಡಿಗೆ, ನಾಮದ ಮರಿಗೆ, ತಿರುಪತಿಯ 'ಮುಡಿಪು' (ಹುಂಡಿ), ಒನಕೆ, ಅಕ್ಕಿಮುಡಿ ಇತ್ಯಾದಿಗಳನ್ನು ಇರಿಸುವ ಕ್ರಮವಿದೆ"[೫] ಎಂದು ಹೇಳಲಾಗುತ್ತಿದೆ. "ಮನೆಯ ಮುಡಿಪು (ಕುಲದೇವರಿಗೆ ಹರಕೆರೂಪದಲ್ಲಿ ನಾಣ್ಯಗಳನ್ನು ಹಾಕಿಡುವ ಮಣ್ಣಿನ

ಮಡಕೆ) ತಂದು ಪಕ್ಕದಲ್ಲಿಟ್ಟು ಬಿಡುತ್ತಾರೆ. ತೆಂಗಿನಕಾಯಿ ಒಡೆದು ನೀರು ಬೆಲ್ಲದ ಅರ್ಚನೆ ಮಾಡಿ ಆರತಿ ಮಾಡುತ್ತಾರೆ. ನಾಣ್ಯ, ಕರಿಮೆಣಸು, ತುಳಸಿ ಎಸಳುಗಳನ್ನು ಆ ಮುಡಿಪುವಿಗೆ ಹಾಕಿ ಕಟ್ಟಿಡುತ್ತಾರೆ. ಕದಿರು ಕಟ್ಟುವುದಕ್ಕೆ ಸಂಬಂಧಿಸಿದಂತೆ ಉಳಿಕೆಯಾದ ಸಾಮಾಗ್ರಿಗಳನ್ನು ಬಾಳೆ ಎಲೆಯಲ್ಲಿ 'ಮುಡಿಪು' ಕಟ್ಟಿಡುವಲ್ಲಿ ಕಟ್ಟುತ್ತಾರೆ. ಇದು ಮುಂದಿನ ವರ್ಷದ ಆಚರಣೆಯವರೆಗೆ ಇರುತ್ತದೆ."[೬] ಇದು ತುಳುವರು ಕೃಷಿಗೆ ನೀಡಿರುವ ಮಹತ್ವ ಮತ್ತು ಕೃಷಿಯ ಮೇಲಿನ ದೇವತಾ ಭಕ್ತಿಯನ್ನು ಎತ್ತಿ ತೋರಿಸುತ್ತದೆ. ಮೇಲಿನ ಈ ವಸ್ತುಗಳೆಲ್ಲವೂ ಕೃಷಿ ಕುಟುಂಬದಲ್ಲಿ ಇರಲೇಬೇಕಾದವುಗಳು ಎಂಬುದನ್ನು ವಿಶೇಷವಾಗಿ ಗಮನಿಸಬೇಕು.

"ಯಾವ ಕಾರಣಕ್ಕಾದರೂ ಮನೆಯ ಯಜಮಾನನಿಗೆ ಅನನುಕೂಲ ಒದಗಿದಲ್ಲಿ ಎಳೆಯರು 'ಕುರಲ್' ಹೊರುವ ಕೆಲಸ ಮಾಡುವರು. ಕೆಲವೆಡೆ ಗಂಡಸರ ಅಭಾವದಿಂದ ಬಾಲಕರಿಂದ ಕದಿರು ಹೊರಿಸುವುದಂತೂ ತುಂಬಾ ಮೋಜನ್ನುಂಟುಮಾಡುವುದು. ಮನೆತನಕ್ಕೆ 'ಅಮೆ' ಅಥವಾ 'ಕರ' ಬಂದರೆ ಕದಿರು ಹಬ್ಬ ಮಾಡುವುದಿಲ್ಲ. ಏನಿದ್ದರೂ ಸೂತಕ ಕಳೆದ ಬಳಿಕವೇ ಆಚರಣೆ ನಡೆಯುವುದು"[೭] ಎಂದು ಹೇಳಿರುವ ವಿದ್ವಾಂಸರ ಮಾತಿನಲ್ಲಿ 'ಕುರಲ್ ಪರ್ಬ'ದ ಧಾರ್ಮಿಕ ಪಾವಿತ್ರ್ಯವನ್ನೂ, ಕುಟುಂಬದಲ್ಲಿ ಗಂಡಸರ ಜವಾಬ್ದಾರಿ ಮತ್ತು ಪ್ರಾಶಸ್ತ್ಯವನ್ನೂ ತಿಳಿಯಬಹುದಾಗಿದೆ.

ಕದಿರು ತರಲು ಹೋಗುವಾಗ ಮನೆಯ ಯಜಮಾನ ವೀಳ್ಯ ತಿಂದು ಗದ್ದೆಗೆ ಇಳಿಯುತ್ತಾನೆ ಮತ್ತು ಬೇರೆ ಬೇರೆ ಮನೆಗಳಿಗೆ ಸೇರಿರುವ ಮೂರು ಇಲ್ಲವೆ ಐದು ಇಲ್ಲವೆ ಏಳು ಗದ್ದೆಗಳ ಕದಿರನ್ನು ಕಿತ್ತು ತರುತ್ತಾನೆ. ಈ ಕೆಲಸವನ್ನು ಮುನ್ನಾ ದಿನ ಸಾಯಂಕಾಲವೇ ಮಾಡುವಾಗ, ತಂದ ಕದಿರನ್ನು ಗೊಂಚಲಾಗಿ ಕಟ್ಟಿ ತೋಟದಲ್ಲಿ ಮರದ ಕೊಂಬೆಗೆ ಅಥವಾ ಗಿಡದ ಪೊದೆಯಲ್ಲಿ ಕಟ್ಟಿಡುತ್ತಾರೆ. ಕದಿರು ಪೂಜೆ ಆಗುವ ತನಕ ಅದನ್ನು ನೆಲದಲ್ಲಿ ಇಡಬಾರದು ಎಂಬ ನಿಯಮವೂ ಇದೆ.

"ವ್ಯವಸಾಯಕ್ಕೆ ಸಂಬಂಧಪಟ್ಟಂತೆ ತುಳುವರು ಹಲವು ಹಬ್ಬಗಳನ್ನು ಆಚರಿಸುತ್ತಾರೆ. ಅವುಗಳಲ್ಲಿ ಮೊದಲನೆಯದು ಮನೆ ತುಂಬಿಸುವ ಹಬ್ಬ......... ಇದಕ್ಕೆ ನಿಶ್ಚಿತ ದಿನವೆಂಬುದೇನೂ ಇಲ್ಲ. ಒಬ್ಬೊಬ್ಬರು ಒಂದೊಂದು ದಿನ ಶುಭ ಮುಹೂರ್ತ ನೋಡಿ ಆಚರಿಸುತ್ತಾರೆ. ಮನೆ ತುಂಬಿಸುವ ಹಬ್ಬ ಪ್ರಕೃತಿ ಅಥವಾ ಸಸ್ಯಗಳ ಆರಾಧನೆಯ ಹಬ್ಬ. ನಮ್ಮ ಪೂರ್ವಜರಿಂದ ನಡೆದು ಬಂದ ವನಮಹೋತ್ಸವ"[೮] ಎಂಬುದು ಓರ್ವ ವಿದ್ವಾಂಸರ ಅಭಿಪ್ರಾಯ. ಅವರ ಅಭಿಪ್ರಾಯದಂತೆ ಕದಿರು ಹಬ್ಬ ವ್ಯವಸಾಯಕ್ಕೆ ಸಂಬಂಧ ಪಟ್ಟ ಹಬ್ಬ ಎಂಬುದು ಪ್ರಶ್ನಾತೀತ.

ಆದರೆ ಇದನ್ನು ಅವರು ಮೊದಲನೆಯ ಹಬ್ಬ ಎಂದು ಹೇಳಿರುವುದು ಯಾವ ನೆಲೆಯಲ್ಲಿ ಎಂಬುದನ್ನು ಸ್ಪಷ್ಟಪಡಿಸುವುದಿಲ್ಲ. ಯಾಕೆಂದರೆ ತುಳುನಾಡಿಗೆ ವರ್ಷಾರಂಭವಾಗುವುದು 'ಪಗ್ಗು' ತಿಂಗಳಿನಿಂದ. ಹಾಗಾಗಿ 'ಪಗ್ಗು' ತಿಂಗಳ 'ಸಿಂಗೊಡೆ' (ಮೊದಲದಿನ)ಯಂದು 'ಬಿಸು' ಆಚರಣೆ ಬರುತ್ತದೆ. ಇದೂ ಕೃಷಿ ಸಂಬಂಧ ಹಬ್ಬವಾದ್ದರಿಂದ ಇದು ಮೊದಲ ಹಬ್ಬವಾಗುತ್ತದೆ. ಆದರೆ ಅವರು 'ಏಣೇಲು' ಮೊದಲ ಬೆಳೆಯ ನೆಲೆಯಲ್ಲಿ ಈ ಮಾತನ್ನು ಹೇಳಿರಬಹುದಾದರೂ ವರ್ಷಾರಂಭದ ತಿಂಗಳಿನಿಂದ ಹಬ್ಬಗಳನ್ನು ಗಣನೆಗೆ ತೆಗೆದುಕೊಳ್ಳುವುದು ಹೆಚ್ಚು ಅರ್ಥಪೂರ್ಣವಾಗುತ್ತದೆ. ಎರಡನೆಯದಾಗಿ ಕದಿರು ಹಬ್ಬಕ್ಕೆ ನಿಶ್ಚಿತ ದಿನವೆಂಬುದೇನೂ ಇಲ್ಲ. ಒಬ್ಬೊಬ್ಬರು ಒಂದೊಂದು ದಿನ ಶುಭಮುಹೂರ್ತ ನೋಡಿ ಆಚರಿಸುತ್ತಾರೆ ಎಂದು ಹೇಳಿರುವುದರಲ್ಲಿಯೂ ಸ್ಪಷ್ಟತೆ ಕಾಣುವುದಿಲ್ಲ. ಯಾಕೆಂದರೆ ತುಳುನಾಡಿನ ವಾರ್ಷಿಕ ಆವರ್ತನದ ಯಾವುದೇ ಆಚರಣೆಗಳಿಗೂ ಒಂದು ನಿರ್ದಿಷ್ಟ ದಿನ ಇಲ್ಲವೇ ತಿಂಗಳುಗಳ ವೇಳಾಫಳಿಗೆ ಇರುವುದು ಅಧ್ಯಯನದಿಂದ ತಿಳಿದು ಬರುತ್ತದೆ. ಕದಿರು ಹಬ್ಬಕ್ಕೆ 'ನಿರ್ನಾಲ' ತಿಂಗಳು ಮೀಸಲಾಗಿದೆ. ಈಗಾಗಲೇ ಆಚರಣೆಯ ವಿಧಾನದಲ್ಲಿ ಹೇಳಿರುವಂತೆ 'ನಿರ್ನಾಲ' ತಿಂಗಳ ಮೊದಲ ದಿನ ಇಲ್ಲವೆ ಮೊದಲ ಶುಕ್ರವಾರ ಇಲ್ಲವೆ 'ನಿರ್ನಾಲ' ತಿಂಗಳಾಂತ್ಯದೊಳಗೆ ಅಂದರೆ 'ಕಾವೊರಿ ಸಂಕ್ರಾಂತಿ'ಯೊಳಗೆ ಈ ಆಚರಣೆಯನ್ನು ಮಾಡಲೇ ಬೇಕು ಎಂಬ ಪರಂಪರಾಗತ ಪದ್ಧತಿ ತುಳುನಾಡಿನಲ್ಲಿದೆ. ಯಾವುದೇ ಆಚರಣೆಗಳನ್ನು ತುಳುವರು ಮನ ಬಂದಂತೆ ಆಚರಿಸುವುದಿಲ್ಲ. ಆಚರಣೆಗಳು ಕೃಷಿ ಚಟುವಟಿಕೆಗಳನ್ನು ಆಧರಿಸಿರುತ್ತವೆ. ಕೃಷಿ ಚಟುವಟಿಕೆಗಳು ಕಾಲಸ್ಥಿತಿಯನ್ನು ಅವಲಂಬಿಸಿರುತ್ತವೆ. ಆದ್ದರಿಂದ ವಾರ್ಷಿಕ ಆವರ್ತನದ ವ್ಯವಸಾಯ ಚಟುವಟಿಕೆಗಳ ನಿರಂತರತೆಯಲ್ಲಿ ಆಚರಣೆಗಳು ಮಹತ್ವದ ಪಾತ್ರವಹಿಸುವುದು ಕಂಡುಬರುತ್ತದೆ. ಬಹುಷಃ ವಿದ್ವಾಂಸರ ಅಭಿಪ್ರಾಯವನ್ನು ಇಂದಿನ ಆಧುನಿಕ ದಿನಗಳ ಸಂದರ್ಭದಲ್ಲಿ ಒಪ್ಪಿಕೊಳ್ಳಬಹುದಷ್ಟೆ. ಯಾಕೆಂದರೆ ಇಂದು ಭತ್ತ ಬೇಸಾಯ ಕಣ್ಮರೆಯಾಗುತ್ತಿರುವುದರಿಂದ ಜನರು ಈ ಆಚರಣೆಗಳಿಂದ ದೂರ ಸರಿಯುತ್ತಿದ್ದಾರೆ ಮತ್ತು ಆಚರಿಸುವುದಿದ್ದರೂ ತಮ್ಮ ಅನುಕೂಲಕ್ಕೆ ಹೊಂದಿಕೊಂಡು ಆಚರಿಸುವುದರಿಂದ ಕಾಲವನ್ನು ಗಂಭೀರವಾಗಿ ಗಣನೆಗೆ ತೆಗೆದುಕೊಳ್ಳುವುದಿಲ್ಲ. ಇಂದಿನ ದಿನಗಳಲ್ಲಿ ಹೆಚ್ಚಾಗಿ ಗಣೇಶ ಚೌತಿಯ ದಿನ ಕದಿರು ಕಟ್ಟುವ ಆಚರಣೆ ಮಾಡುವುದು ಎಲ್ಲೆಡೆ ಕಂಡು ಬರುತ್ತದೆ. ಅದೂ ಊರಿನ ದೇವಾಲಯದಿಂದ ಕದಿರು ತಂದು ಮನೆ ತುಂಬಿಸುವುದೇ ಜಾಸ್ತಿಯಾಗಿದೆ. ಆಚರಣೆಗಳು ಕಾಲದೇಶ ಬದ್ಧವಾದವುಗಳು ಎಂಬುದನ್ನು ಸ್ಪಷ್ಟಪಡಿಸುವುದಾದರೆ, ಭಾರತೀಯ ಸಂಸ್ಕೃತಿಗೆ

ಹೊಂದಿಬಾಳುತ್ತಿರುವ ತುಳುನಾಡಿನಲ್ಲಿರುವ ಕ್ರೈಸ್ತರು ಕದಿರು ಹಬ್ಬವನ್ನು ಕನ್ಯಾಮರಿಯಮ್ಮನ ಜನ್ಮದಿನವಾದ ಸೆಪ್ಟೆಂಬರ್ ೮ ರಂದು ಆಚರಿಸುವುದು ಕಂಡುಬರುತ್ತದೆ. ಅಂದರೆ ಕಾಲ ಮತ್ತು ದೇಶ ಯಾವ ರೀತಿಯ ಪ್ರಭಾವವನ್ನು ಬೀರುತ್ತದೆ ಎಂಬುದು ಇದರಿಂದ ಸ್ಪಷ್ಟವಾಗುತ್ತದೆ. ಇದಕ್ಕೆ ಪೂರಕವಾಗಿ ಬನ್ನಂಜೆ ಬಾಬು ಅಮೀನ್ ಅವರು ಈ ವಿಷಯವನ್ನು ವಿವೇಚಿಸುತ್ತಾ “ಕೆಲವು ಊರುಗಳಲ್ಲಿ ಊರವರೆಲ್ಲ ಸೇರಿ ಸಾಮೂಹಿಕವಾಗಿ ಕದಿರು ಹಬ್ಬವನ್ನು ಆಚರಿಸುವರು. ಊರ ಆರಾಧನಾ ಸ್ಥಳಗಳಲ್ಲಿ ಕದಿರು ಪೂಜೆ ನಡೆಸಿ ಅಲ್ಲಿಂದ ಕದಿರು ಹಂಚಿಕೊಂಡು ಮನೆಗೆ ತಂದು ಕಟ್ಟುವರು. ತುಳುನಾಡಿನ ಕದಿರು ಹಬ್ಬವನ್ನು ನಂತರದ ದಿನಗಳಲ್ಲಿ ಈ ಪ್ರದೇಶಕ್ಕೆ ಆಗಮಿಸಿದ ಕ್ರೈಸ್ತ ಮತದ ಬಂಧುಗಳು ಕೂಡಾ ಆಚರಿಸುವುದು ಉಲ್ಲೇಖನೀಯ. ಚರ್ಚುಗಳಲ್ಲಿ ‘ಕದಿರುಪೂಜೆ’ ಯನ್ನು ಸಾಮೂಹಿಕವಾಗಿ ನಡೆಸಿ ಬಳಿಕ ತಮ್ಮ ಮನೆಗೆ ತಂದು ಕಟ್ಟುವುದನ್ನು ನಾವು ನೋಡಬಹುದು” ಎಂದು ಹೇಳಿರುವುದು ಕದಿರು ಹಬ್ಬದ ಮಹತ್ವವನ್ನೂ, ಭತ್ತ ಬೇಸಾಯಕ್ಕಿರುವ ಪ್ರಾಧಾನ್ಯತೆಯನ್ನೂ ಎತ್ತಿ ತೋರಿಸುತ್ತದೆ. ಕದಿರು ಹಬ್ಬದ ಸಂದರ್ಭದಲ್ಲಿ ಕೆಲವರು ಹಬ್ಬದ ಹಿಂದಿನ ದಿನವೇ ಸಾಯಂಕಾಲ ಕದಿರು ಸಂಗ್ರಹಿಸುತ್ತಾರೆ ಎಂದು ಹೇಳಿದೆ. ಇದರರ್ಥ ಮೊದಲನೆಯದಾಗಿ ಹಬ್ಬದ ದಿನ ಬೆಳಿಗ್ಗೆ ಕೆಲಸದ ಒತ್ತಡ ಇರುವುದರಿಂದ ಅನುಕೂಲವಾಗಲೆಂದೂ, ಮತ್ತು ಎರಡನೆಯದಾಗಿ ದೂರದೂರದಲ್ಲಿ ಹೊಲಗದ್ದೆಗಳಿರುವವರು ಹಬ್ಬದ ದಿನ ಅಲ್ಲಿಗೆ ಹೋಗಿ ಕದಿರು ತರಲು ಕಷ್ಟವಾಗುತ್ತದೆಂದು ಮೊದಲ ದಿನವೇ ತಯಾರಿ ನಡೆಸುವ ಕ್ರಮ ಅದಾಗಿದೆಯೆಂದೂ ತುಳುಜನಪದರು ಹೇಳುತ್ತಾರೆ. ಹಾಗಾಗಿ ಆಚರಣೆಗಳ ಪ್ರತಿಯೊಂದು ಕ್ರಮಗಳಲ್ಲಿ ಶಾಸ್ತ್ರೀಯ ಅರ್ಥಗಳನ್ನು ಹುಡುಕುವುದು ಸಾಧ್ಯವಿಲ್ಲ. ಬದಲಾಗಿ ಪರಿಸರ ಕಾಲ ಸಂದರ್ಭದ ಹಿನ್ನೆಲೆಯಲ್ಲಿ ಅನುಕೂಲ ಸೌಲಭ್ಯಗಳನ್ನು ಅನುಸರಿಸುವುದಾಗಿರುತ್ತದೆ.

ಕದಿರು ಹಬ್ಬ ಆಚರಣೆಗೆ ಸಂಬಂಧಿಸಿದಂತೆ ಕೆಲವು ಗಾದೆಗಳು, ನಂಬಿಕೆಗಳು, ದೃಷ್ಟಿಕತೆಗಳು ಕೂಡ ಬರುತ್ತವೆ. ಗದ್ದೆಯಲ್ಲಿ ಬೆಳೆ ಬಂದು ಅದರ ಕೊಯ್ಲಾಗುವ ಮೊದಲು ನಂಬಿದ ಸತ್ಯ ದೈವಗಳಿಗೆ ಬೆಳೆಕಾಣಿಕೆ ಸಲ್ಲಿಸಿ, ಗದ್ದೆಗೆ ಹಾಲು ಸುರಿದು, ಮನೆತುಂಬಿಸಿಕೊಳ್ಳಲೇಬೇಕು ಎನ್ನುತ್ತಾರೆ. ಮನೆ ತುಂಬಿಸಿದ ದಿನ ಸಾವು ಸಂಭವಿಸಬಾರದು ಎಂಬ ನಂಬಿಕೆಯಿದೆ. ಆಕಸ್ಮಿಕವಾಗಿ ಸಾವು ಸಂಭವಿಸಿದರೆ ಆ ಮನೆಯ ‘ಪೊಲ್ಲು’(ಸಂಪತ್ತು) ಸಾವಿನ ರೂಪದಲ್ಲಿ ಹೋಗುತ್ತದೆ. ಇನ್ನು ಮನೆ ತುಂಬಿಸಿದ ದಿನ ಮನೆಯ ಸಂಪತ್ತು, ವಸ್ತು, ಹಣಗಳ ರೂಪದಲ್ಲಿ ಹೋಗಬಾರದು ಎಂಬ ನಂಬಿಕೆಯೂ ಇದೆ. ಹಾಗಾಗಿ ಮನೆಯ ಆಳಿಗೂ

ಕೂಡಾ ಕೂಲಿಯನ್ನು ಕೊಡಬಾರದಂತೆ. ಕದಿರು ಹಬ್ಬದ ದಿನ ಮನೆಯ ಬಾಗಿಲು ಮುಚ್ಚಬಾರದು; ಹೆಂಡತಿ ತೀರಿದ ವ್ಯಕ್ತಿ ತೆನೆ ಹೊರಬಾರದು; ತನ್ನ ಮನೆಯಲ್ಲಿ ಕದಿರು ಕಟ್ಟುವ ಮೊದಲು ಬೇರೆ ಮನೆಯಲ್ಲಿ 'ಪುದ್ವಾರ್' ಊಟ ಮಾಡಬಾರದು; ಕದಿರು ಕಟ್ಟಿದ ಮನೆಯವರು ಆ ದಿನ ಬೇರೆ ಮನೆಯಲ್ಲಿ ರಾತ್ರಿಯನ್ನು ಕಳೆಯಬಾರದು–ಮುಂತಾದ ನಂಬಿಕೆಗಳಿವೆ. ಈ ನಂಬಿಕೆಯನ್ನು ಉಲ್ಲಂಘಿಸಿದರೆ ಆ ಮನೆಯ ಸಮೃದ್ಧಿ ಹೊರಟುಹೋಗುತ್ತದೆ ಎನ್ನುತ್ತಾರೆ.

### ೮.೪: 'ಕುರಲ್‌ಪರ್ಬ'–ಸಮಾನವಾದ ಆಚರಣೆಗಳು

"ಮನೆ ತುಂಬಿಸಿದ ದಿನ 'ತೊಲ್ತು ಪುದ್ವಾರ್' ಇರುತ್ತದೆ. ಅಥವಾ ಹಾಲಿನಲ್ಲಿ ಹೊಸ ಅಕ್ಕಿ ಹಾಕಿ ಕುಡಿಯುತ್ತಾರೆ. ಪೈರು ಕೊಯ್ದ ಮೇಲೆ ಹೊಸ ಅಕ್ಕಿ ಊಟ ಆರಾಮವಾಗಿ ಮಾಡಿಕೊಳ್ಳುತ್ತಾರೆ. ಅಂದು ಹೊಸ ಅಕ್ಕಿ ಪಾಯಸ ಆಗಬೇಕು. ಕೊಡಗಿನಲ್ಲಿ ಇದನ್ನು ಹುತ್ತರಿ ಹಬ್ಬ ಎನ್ನುತ್ತಾರೆ. ಕದಿರು ಕಟ್ಟುವುದನ್ನು ನೆರೆ ಕಟ್ಟುವುದು ಎನ್ನುತ್ತಾರೆ. ಆ ಸಂದರ್ಭದಲ್ಲಿ ಮಕ್ಕಳು ಪಟಾಕಿ ಬಿಟ್ಟು ಆನಂದಿಸುತ್ತಾರೆ. ಹುತ್ತರಿ ಕಳೆದು ಕೆಲವು ದಿನಗಳವರೆಗೆ ಕೋಲಾಟ, ಮನೆ ಹಾಡುವುದು ಮೊದಲಾದ ಮನೋರಂಜನೆಯ ಕಾರ್ಯಕ್ರಮಗಳಿರುತ್ತವೆ. ಮೂರು ಅಥವಾ ಐದು ಅಥವಾ ಏಳು ದಿನಗಳಲ್ಲಿ 'ಊರೊರುಮೆ' ಎಂಬ ಊಟವನ್ನು ಊರಿನವರು ಸೇರಿ ನೆರವೇರಿಸುತ್ತಾರೆ.

ಕೇರಳದಲ್ಲಿ ಈ ತರದ ಹಬ್ಬವನ್ನು 'ಓಣಂ' ಎನ್ನುವರು. ತಮಿಳ್ನಾಡಿನಲ್ಲಿ 'ಪೊಂಗಲ್' ಎನ್ನುತ್ತಾರೆ. ಹಾಲಿನಲ್ಲಿ ಬೆಳ್ತಿಗೆ ಅಕ್ಕಿ ಹಾಕಿ ಕುದಿಸುತ್ತಾರೆ. ಅದು ಉಕ್ಕಿ ಹೋಗಲೇಬೇಕು. ಕ್ರೈಸ್ತರು ತಮ್ಮ ಮರಿಯಮ್ಮನ ಜನ್ಮದಿನದಂದು ಕುರಲ್‌ಪರ್ಬ ಆಚರಿಸುತ್ತಾರೆ. ಒಂದು ನಿಶ್ಚಿತ ಮನೆಯಿಂದ ಬ್ಯಾಂಡ್ ಸಂಭ್ರಮದಲ್ಲಿ ಇಗರ್ಜಿಗೆ ಕದಿರು ಒಯ್ಯುತ್ತಾರೆ. ಅಲ್ಲಿ ಪ್ರತಿ ಮನೆಗೂ ಕದಿರು ಹಂಚಲಾಗುವುದು.

ತುಳುವರು ಚೌತಿಗೆ ಅಥವಾ ನೋಂಪಿಗೆ (ಅನಂತ ಚತುರ್ದಶಿ) ಮನೆ ತುಂಬಿಸುತ್ತಾರೆ. ಆ ದಿವಸಗಳಿಗೆ ದಿನ ನೋಡಬೇಕಾಗಿಲ್ಲ. ಊರ ದೇವಸ್ಥಾನ ಅಥವಾ ದೈವಸ್ಥಾನಗಳಲ್ಲೂ ಭಂಡಾರ ಮನೆಗಳಲ್ಲೂ ಹೀಗೆ ಕದಿರು ಕಟ್ಟುವುದಿದೆ. ಅಲ್ಲಿ ಈ ಹಬ್ಬ ಆಚರಿಸಿದ ಬಳಿಕ ಮನೆಗಳಲ್ಲಿ ಕದಿರು ಕಟ್ಟುವುದಕ್ಕೆ ಅನುಮತಿ ಸಿಕ್ಕಿದಂತೆ"[೧೦] ಎಂಬುದಾಗಿ ಡಾ.ವಾಮನ ನಂದಾವರ ಅವರು ಕದಿರು ಹಬ್ಬಕ್ಕೆ ಸಮಾನವಾದ ಹಬ್ಬಗಳ ಕುರಿತು ಮತ್ತು ಕದಿರು ಹಬ್ಬ ಆಚರಣೆಯ ನಿಶ್ಚಿತ ದಿನ ಹಾಗೂ ತುಳುವೇತರ ಜನಾಂಗದವರ ಮೇಲೆ 'ಕುರಲ್‌ಪರ್ಬ'

ಆಚರಣೆಯ ಪ್ರಭಾವದ ಕುರಿತು ಹೇಳುತ್ತಾರೆ. ಮೇಲೆ ಹೇಳಲಾದ 'ತೊಲ್ತು ಪುದ್ವಾರ್' ಎಂದರೆ ಅದು ಕುರಲ್ ಕಟ್ಟುವಾಗ ಭತ್ತದಿಂದ ಅಕ್ಕಿಯನ್ನು ಸುಲಿದು ತೆಗೆದು ಹಾಲಿಗೆ ಹಾಕಿ ಮಾಡುವ 'ಪುದ್ವಾರ್' ಊಟವಾಗಿರುತ್ತದೆ. 'ತೊಲ್ತು' ಎಂದರೆ ಸುಲಿದು ಎಂದರ್ಥ.

ಕೊಡಗಿನ 'ಹುತ್ತರಿ ಹಬ್ಬ'ವನ್ನು ಹೊರತುಪಡಿಸಿದರೆ ಕರ್ನಾಟಕದ ಮಲೆನಾಡಿನ ಕಡೆ ದೀಪಾವಳಿಯ ಹಬ್ಬದಲ್ಲಿ ಕದಿರು ತರುವ ಆಚರಣೆ ರೂಢಿಯಲ್ಲಿದೆ ಎಂದು ಹೇಳಲಾಗುತ್ತದೆ. ದೀಪಾವಳಿ ದಿನ ಪ್ರತಿ ಮನೆಯವರೂ ತಮ್ಮ ತಮ್ಮ ಗದ್ದೆಗೆ ಹೋಗಿ ಭೂಮಿ ಪೂಜೆ ಮಾಡಿ ಭತ್ತದ ತೆನೆಯನ್ನು ತಂದು ತುಳಸಿಕಟ್ಟೆಯ ಹತ್ತಿರ ಇಟ್ಟು ಪೂಜೆ ಮಾಡಿ ಅದರ ಜೊತೆಗೆ ಮಾವಿನ ಎಲೆ ಮತ್ತು ಹಲಸಿನ ಎಲೆಗಳನ್ನು ಸೇರಿಸಿ ಮನೆಬಾಗಿಲು, ಕೊಟ್ಟಿಗೆಬಾಗಿಲು, ಪಣತ, ಕಡೆಗೋಲು ಕಂಬ ಇತ್ಯಾದಿಗಳಿಗೆ ಕಟ್ಟುತ್ತಾರೆ. ಹೀಗೆ ಭತ್ತದ ತೆನೆಯನ್ನು ತಂದು ಮನೆಯಲ್ಲಿ ಕಟ್ಟುವುದಕ್ಕೆ ಕದಿರು ತರುವುದು ಎಂದು ಹೇಳಲಾಗುತ್ತದೆ.[೧೧] ಹಬ್ಬ ಆಚರಣೆಗಳು ಕಾಲದೇಶ ಬದ್ಧವಾಗಿರುತ್ತವೆ ಎಂಬುದನ್ನು ಇದರಿಂದ ತಿಳಿಯಬಹುದು. ಮಲೆನಾಡಿನಲ್ಲಿ ಭತ್ತ ತೆನೆ ಬಿಟ್ಟು ಕೊಯ್ಲಿಗೆ ಬರುವುದು ಸಾಮಾನ್ಯವಾಗಿ ದೀಪಾವಳಿಯ ಸಮಯದಲ್ಲಿ. ಆದ್ದರಿಂದ ಅವರು ಕದಿರು ಹಬ್ಬವನ್ನು ದೀಪಾವಳಿಯಂದೇ ಆಚರಿಸುವುದನ್ನು ವಿಶೇಷವಾಗಿ ಲಕ್ಷಿಸಬೇಕು.

ಒಟ್ಟಿನಲ್ಲಿ 'ಕುರಲ್‌ಪರ್ಬ'ವು ವಾರ್ಷಿಕ ಆವರ್ತನದ ಮೊದಲಲ್ಲಿ ಬರುವ 'ಏಣೇಲು' ಬೆಳೆಯನ್ನು ಮನೆತುಂಬಿಸಿಕೊಳ್ಳುವ ಮೂಲಕ ಸಂಪತ್ತು, ಸಮೃದ್ಧಿ, ಆರೋಗ್ಯಭಾಗ್ಯವನ್ನು ಮನೆಯೊಳಗೆ ಆಹ್ವಾನಿಸುವ ಸಂಕೇತವಾಗಿ ಆಚರಣೆಯಾಗುತ್ತದೆ. ಹಿಂದಿನ ಕಾಲದಲ್ಲಿ ಭತ್ತ ಇಲ್ಲವೆ ಅಕ್ಕಿಯೇ ತುಳುನಾಡಿನಲ್ಲಿ ವಸ್ತು ವಿನಿಮಯ ಸಾಧನವಾಗಿದ್ದು, ಈ ಆಚರಣೆಯ ಮೂಲಕ ಅದರ ಅಗತ್ಯ ಮತ್ತು ಮಹತ್ವವನ್ನು ಎತ್ತಿ ಹಿಡಿಯಲಾಗಿದೆ.

### ೮.೫: 'ಕುರಲ್‌ಪರ್ಬ'–ಆಚರಣೆಯ ಒಟ್ಟೂ ಸ್ವರೂಪ

ಅಂತಿಮವಾಗಿ ಈ ಆಚರಣೆಯ ಒಟ್ಟೂ ಸ್ವರೂಪವನ್ನು ಈ ರೀತಿ ಕ್ರೋಢೀಕರಿಸಿ ಹೇಳಬಹುದು.

೧. 'ಏಣೇಲು' ಬೇಸಾಯದ ಭತ್ತದ ತೆನೆಗಳನ್ನು ವಿವಿಧ ಸಸ್ಯಸಂಪತ್ತುಗಳೊಂದಿಗೆ ವಿಧಿವತ್ತಾಗಿ ಮನೆಯೊಳಗೆ ತರುವ ಆಚರಣೆಯನ್ನು 'ಕದಿರು ಹಬ್ಬ' ಎಂದು ಕರೆಯುತ್ತಾರೆ.

೨. ಸಂಪತ್ತು ಸಮೃದ್ಧಿಯನ್ನು ಮನೆಯೊಳಗೆ ಆಹ್ವಾನಿಸುವುದೆಂಬ ನಂಬಿಕೆ ಈ ಆಚರಣೆಯ ಹಿಂದಿದೆ.

೩. 'ನಿರ್ನಾಲ' ತಿಂಗಳ 'ಸಿಂಗೊಡೆ'(ಮೊದಲದಿನ) ಇಲ್ಲವೆ ಮೊದಲ ಶುಕ್ರವಾರ, ತಪ್ಪಿದರೆ ಆ ತಿಂಗಳಾಂತ್ಯದೊಳಗೆ ಒಂದು ಗೊತ್ತಾದ ಶುಭದಿನದಂದು ಈ ಆಚರಣೆಯನ್ನು ಆಚರಿಸುತ್ತಾರೆ.

೪. ಕದಿರು ಕಟ್ಟುವಾಗ ಮಾವಿನಎಲೆ, ಹಲಸಿನಎಲೆ, ಗರಿಕೆಹುಲ್ಲು, 'ಪಚ್ಚೆಕುರಲ್', 'ರುಕ್ಕಿ', 'ಪೊಲಿಬಲ್ಲ್', 'ದಡ್ಡಲ್‌ನಾರ್', 'ನೆಯ್‌ಕಂಬುರ್ಲ್', 'ಇಟ್ಟೊವು', ಅಶ್ವತ್ಥ, 'ಅತ್ತಿ', 'ಇತ್ತಿ', 'ಬಲಿಪಬಳ್ಳಿ', 'ಗೋಳಿ', ಸೌತೆಮಿಡಿ, ಬಿದಿರುಸೊಪ್ಪು, ತುಳಸಿ, ಗೌರಿಹೂವು, ಗಂಧ, ಕುಂಕುಮ ಇತ್ಯಾದಿ ಸಸ್ಯಸಂಪತ್ತನ್ನು ವಿಶೇಷವಾಗಿ ಬಳಸಿಕೊಳ್ಳಲಾಗುತ್ತದೆ.

೫. ಮುಖ್ಯವಾಗಿ ದೈವದ ಗುಡಿಗೆ, ದೇವರ ಮಣೆಗೆ, ಬಾಗಿಲಿಗೆ, ತುಳಸಿ ಕಟ್ಟೆಗೆ, ಬಾವಿ ದಂಡೆಗೆ, ಹಟ್ಟಿಗೆ, ತೆಂಗು, ಅಡಿಕೆ, ಮಾವು, ಹಲಸು ಮೊದಲಾದ ಮರಗಳಿಗೆ, ಒನಕೆಗೆ, ನೊಗನೇಗಿಲುಗಳಿಗೆ ಇತ್ಯಾದಿಗಳಿಗೆಲ್ಲ ಕದಿರು ಕಟ್ಟುತ್ತಾರೆ.

೬. ದೈವದೇವರು ಮತ್ತು ಪಿತೃಗಳನ್ನು ವಿಶೇಷವಾಗಿ ಪ್ರಾರ್ಥಿಸಿಕೊಳ್ಳುತ್ತಾರೆ.

೭. ಈ ದಿನ ಬೇಸಾಯದ ಕೆಲಸವನ್ನು ಯಾರೂ ಮಾಡುವುದಿಲ್ಲ. ವಿಶ್ರಾಂತಿಯ ದಿನವಾಗಿರುತ್ತದೆ.

೮. ಕೋಳಿಅಂಕ, ತೆಂಗಿನಕಾಯಿ ಕುಟ್ಟುವುದು, ಬೇಟೆಗೆ ಹೋಗುವುದು ಮೊದಲಾದವುಗಳನ್ನು ಮಾಡುತ್ತಾರೆ.

೯. ಈ ದಿನ ಹೊರಗಿರುವ ಮನೆಮಂದಿಯೆಲ್ಲ ಮನೆಗೆ ಬರುತ್ತಾರೆ.

೧೦. ಹಣವಾಗಲಿ, ಯಾವುದೇ ವಸ್ತುವನ್ನಾಗಲಿ ಈ ದಿನ ಸಾಲ ಕೊಡುವುದಿಲ್ಲ.

೧೧. ಕದಿರು ಹಬ್ಬದ ಹಿನ್ನೆಲೆಯಲ್ಲಿ ಕೆಲವು ನಂಬಿಕೆ-ವಿಧಿನಿಷೇಧಗಳೂ ಇವೆ.

೧೨. ಜನನಮರಣಗಳ ಸೂತಕವಿದ್ದಲ್ಲಿ ಈ ದಿನ ಹಬ್ಬ ಆಚರಿಸುವುದಿಲ್ಲ.

---

<u>ಅಡಿಟಿಪ್ಪಣಿ</u>

೧. **ಜಾನಪದ ಮಿಸದನ:** ೧೯೯೭: ಡಾ.ಪಾಲ್ತಾಡಿ ರಾಮಕೃಷ್ಣ ಆಚಾರ್: ಸುಪ್ರಿಯಾ ಪ್ರಕಾಶನ, ಪುತ್ತೂರು: ಪುಟ-೬೨

೨. **ತುಳು ನಿಘಂಟು:** ಸಂಪುಟ-೩: ೧೯೯೭: ಡಾ.ಯು.ಪಿ.ಉಪಾಧ್ಯಾಯ: ಡಾ.ಗೋವಿಂದ ಪೈ ಸಂಶೋಧನಾ ಕೇಂದ್ರ, ಉಡುಪಿ: ಪುಟ-೨೪೫

೩. **ಕನ್ನಡ ಜಾನಪದ ವಿಶ್ವಕೋಶ:** ಸಂಪುಟ–೨: ೧೯೮೫: (ಸಂ.) ಚಂದ್ರಶೇಖರ ಕಂಬಾರ: ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು: ಪುಟ–೧೫೪೫

೪. **ತುಳು ಜಾನಪದ ಆಚರಣೆಗಳು:** ೨೦೦೩: ಬನ್ನಂಜೆ ಬಾಬು ಅಮೀನ್: ಕೆಮ್ಮಲಜೆ ಜಾನಪದ ಪ್ರಕಾಶನ, ಉಡುಪಿ: ಪುಟ–೧೨೮

೫. **ಅದೇ:** ಪೂರ್ವೋಕ್ತ: ಪುಟ–೧೨೭, ೧೨೮

೬. **ಪೂಕರೆ ಮತ್ತು ಇತರ ಜಾನಪದೀಯ ಲೇಖನಗಳು:** ಡಾ. ಪೂವಪ್ಪ ಕಣಿಯೂರು: ರಾಜ್ ಪ್ರಕಾಶನ, ಮೈಸೂರು: ೨೦೦೪: ಪುಟ–೭೩

೭. **ತುಳು ಜಾನಪದ ಆಚರಣೆಗಳು:** ೨೦೦೩: ಬನ್ನಂಜೆ ಬಾಬು ಅಮೀನ್: ಪೂರ್ವೋಕ್ತ: ಪುಟ–೧೨೭

೮. **ಜಾನಪದ ಮಿನದನ:** ೧೯೯೭: ಡಾ.ಪಾಲ್ತಾಡಿ ರಾಮಕೃಷ್ಣ ಆಚಾರ್: ಪೂರ್ವೋಕ್ತ: ಪುಟ– ೬೨

೯. **ತುಳು ಜಾನಪದ ಆಚರಣೆಗಳು:** ೨೦೦೩: ಬನ್ನಂಜೆ ಬಾಬು ಅಮೀನ್: ಪೂರ್ವೋಕ್ತ: ಪುಟ–೧೨೮, ೧೨೯

೧೦. **ಸಿಂಗದನ:** ೧೯೮೭: ಡಾ.ವಾಮನ ನಂದಾವರ: ಹೇಮಾಂಶು ಪ್ರಕಾಶನ, ಕಾಟಿಪಳ್ಳ: ಪುಟ–೬೦, ೬೧

೧೧. **ಕನ್ನಡ ಜಾನಪದ ವಿಶ್ವಕೋಶ:** ಸಂಪುಟ–೧: ೧೯೮೫: (ಸಂ.)ಚಂದ್ರಶೇಖರ ಕಂಬಾರ: ಪೂರ್ವೋಕ್ತ: ಪುಟ–೩೦೮

■■■

# ಅಧ್ಯಾಯ-೯

# ತುಳುನಾಡಿನ ವಾರ್ಷಿಕ ಆವರ್ತನದ ಆಚರಣೆ-'ಪುದ್ವಾರ್'
## (ಹೊಸ ಅಕ್ಕಿ ಊಟ)

# ಅಧ್ಯಾಯ–೯

# ತುಳುನಾಡಿನ ವಾರ್ಷಿಕ ಆವರ್ತನದ ಆಚರಣೆ–'ಪುದ್ವಾರ್' (ಹೊಸ ಅಕ್ಕಿ ಊಟ)

# ಅಧ್ಯಾಯ-೯

# ತುಳುನಾಡಿನ ವಾರ್ಷಿಕ ಆವರ್ತನದ ಆಚರಣೆ 'ಪುದ್ವಾರ್'

## (ಹೊಸ ಅಕ್ಕಿ ಊಟ)

### ೯.೧: 'ಪುದ್ವಾರ್'-ಅರ್ಥ

'ನಿರ್ನಾಲ' ತುಳುವರಿಗೆ ಆರನೆಯ ತಿಂಗಳು. ಈ ತಿಂಗಳಿನಲ್ಲಿ ತುಳುವರು 'ಪುದ್ವಾರ್' ಆಚರಿಸುತ್ತಾರೆ. ಈ 'ಪುದ್ವಾರ್' ಆಚರಣೆಗೂ 'ಕುರಲ್‌ಪರ್ಬ' ಆಚರಣೆಗೂ ತೀರಾ ನಿಕಟ ಸಂಬಂಧವಿದೆಯೆಂದು ಈಗಾಗಲೇ ಹೇಳಿದೆ. ಅಂದರೆ 'ಕುರಲ್‌ಪರ್ಬ' ಆಚರಣೆಯ ಮುಂದುವರಿದ ಭಾಗವೇ 'ಪುದ್ವಾರ್'. "ಏಣೇಲು ಬೆಳೆ ಕೊಯ್ದು ಆ ಭತ್ತದ ಅಕ್ಕಿಯನ್ನು ಮೊದಲ ಸಲ ಬೇಯಿಸಿ ಅನ್ನ ಊಟ ಮಾಡುವುದು ಕೂಡಾ ಒಂದು ಹಬ್ಬ. ಈ ಹಬ್ಬವನ್ನು ಪುದ್ದರಿ, ಪುದ್ದಾರು ಎನ್ನಲಾಗುತ್ತದೆ. ಪುದ್ದರಿ ಎಂದರೆ ಹೊಸ ಅಕ್ಕಿಯ ಊಟ ಅಥವಾ ಹೊಸ್ಟೂಟ. ಪುದು ಅರಿ ಎಂಬೆರಡು ಪದಗಳು ಕೂಡಿ ಪುದ್ದರಿ ಎಂಬ ಪದ ಉಂಟಾಗಿದೆ. ತುಳು ಭಾಷೆಯಲ್ಲಿ ಪುದು ಎಂದರೆ ಹೊಸ, ಅರಿ ಎಂದರೆ ಅಕ್ಕಿ, ಬಾರ್ ಎಂದರೆ ಭತ್ತ. ಪುದುವಾರ್ ಅಥವಾ ಪುದುವಾಳ್ ಎಂಬ ಪದಕ್ಕೆ ಹೊಂದಿಕೊಂಡು ಬಾಳು ಅಥವಾ ಕೂಡಿ ಬಾಳು ಎಂಬರ್ಥವೂ ಇದೆ".[೧] 'ಏಣೇಲು' ಬೆಳೆಯ ಕದಿರು ತಂದು ಮನೆ ತುಂಬಿಸುವ ಆಚರಣೆಯ ದಿನವೇ 'ಪುದ್ವಾರ್' ಆಚರಣೆಯನ್ನು ಕೆಲವರು ಆಚರಿಸುತ್ತಾರೆ. ಮತ್ತೆ ಕೆಲವರು 'ಕುರಲ್‌ಪರ್ಬ'ವನ್ನು ಮೊದಲು ಮಾಡಿ ನಂತರ 'ನಿರ್ನಾಲ' ತಿಂಗಳು ಮುಗಿಯುವುದರೊಳಗೆ 'ಪುದ್ವಾರ್' ಆಚರಿಸುತ್ತಾರೆ. ಇದನ್ನು ಕುಟುಂಬದವರೆಲ್ಲ ಸೇರಿ ಸಂತೋಷ ಸಂಭ್ರಮದಿಂದ ಮತ್ತು ಭಕ್ತಿ ಶ್ರದ್ಧೆಯಿಂದ ಆಚರಿಸುತ್ತಾರೆ. 'ಪುದ್ವಾರ'ನ್ನು ಕೆಲವರು ಮಧ್ಯಾಹ್ನ ಮಾಡಿದರೆ ಕೆಲವರು ರಾತ್ರಿಯೂ ಮಾಡುವುದಿದೆ. ನೆರೆಹೊರೆಯವರನ್ನು ಪ್ರೀತಿಯಿಂದ ಊಟಕ್ಕೆ ಆಹ್ವಾನಿಸುತ್ತಾರೆ.

ಪುದ್ಬಾರ್ > ಪುದ್ವಾರ್-ಪೊಸಾರ್-ಹೊಸಕ್ಕಿಯ ಊಟ, ಹೊಸಕ್ಕಿಯ ಊಟದ ದಿನ; A ceremony observed in partaking of new produce for the first time; a feast with new rice after the harvest; The day of just with new rice-ಇದು ತುಳು ನಿಘಂಟಿನಲ್ಲಿ ನೀಡಿರುವ ಅರ್ಥ.[೨]

## ೯.೨: 'ಪುದ್ವಾರ್'-ಆಚರಣೆಯ ವಿಧಾನ

'ಪುದ್ವಾರ್' ಆಚರಣೆಯ ದಿನ ಬೆಳಿಗ್ಗೆ ಉಪಾಹಾರಕ್ಕೆ 'ತೆಲಿತ ಮಣ್ಣಿ' (ಗಂಜಿ ನೀರಿನ ಹಲ್ವ ತಿಂಡಿ) ಮಾಡುತ್ತಾರೆ. ಮನೆಮಂದಿಯೆಲ್ಲ ಈ 'ಮಣ್ಣಿ'ಯನ್ನು ಬೆಳಗ್ಗಿನ ಉಪಾಹಾರವಾಗಿ ಸೇವಿಸುತ್ತಾರೆ. ನಂತರ ಗಂಡಸರಿಗೆ ಸಾಮಾನ್ಯವಾಗಿ ಆ ದಿನ ವಿಶೇಷ ವಿಶ್ರಾಂತಿಯ ದಿನವಾಗಿರುತ್ತದೆ. ಹೆಂಗಸರು ಮೊದಲು ಮನೆಯನ್ನೆಲ್ಲ ಸೆಗಣಿ ಸಾರಿಸಿ ಶುದ್ಧಗೊಳಿಸುತ್ತಾರೆ. ನಂತರ 'ಪುದ್ವಾರ್' ಊಟದ ತಯಾರಿಯಲ್ಲಿ ತೊಡಗುತ್ತಾರೆ. ಅಟ್ಟದಿಂದ 'ಪುದ್ವಾರ್'ದ ಕರ' ('ಪುದ್ವಾರ್'ಗಾಗಿಯೇ ಇರುವ ಮಣ್ಣಿನ ದೊಡ್ಡ ದೊಡ್ಡ ಮಡಕೆ)ಗಳನ್ನು ತೆಗೆಯುತ್ತಾರೆ. ಅವುಗಳನ್ನೆಲ್ಲ ತೊಳೆದು, ಅವುಗಳಲ್ಲಿ ಅನ್ನ ಬೇಯಿಸುವ ದೊಡ್ಡ ಮಡಕೆಯೊಂದನ್ನು ಹಿಡಿದುಕೊಂಡು ಬಾವಿಯ ಹತ್ತಿರ ಹೋಗುತ್ತಾರೆ. ಮೊದಲು 'ಪುದ್ವಾರ್'ಗ್ ನೀರ್ ಕೊನರ್ಪುನ' (ಪುದ್ವಾರ್'ಗೆ ನೀರು ತರುವುದು) ಕ್ರಮ ಮಾಡುತ್ತಾರೆ. ಅಂದರೆ ಮನೆಯ ಮೂವರು ಇಲ್ಲವೆ ಐದು ಮಂದಿ ಹೆಣ್ಣು ಹೆಂಗಸರು ಈ ನೀರು ತರುವ ಆಚರಣೆಯಲ್ಲಿ ಪಾಲುಗೊಳ್ಳಬೇಕೆಂಬುದು ನಂಬಿಕೆ. ಹೀಗೆ 'ಪುದ್ವಾರ್'ಗೆ ನೀರು ತರಲು ಬಾವಿಯ ಬಳಿಗೆ ಹೋಗುವಾಗ 'ಬಚ್ಚಿರೆ ಬಜ್ಜೆಯಿ' (ಎಲೆ ಅಡಿಕೆ) ತಿಂದು ಕೊಂಡು ಹೋಗುತ್ತಾರೆ. ಬಾವಿದಂಡೆಯಲ್ಲಿ ವೀಳ್ಯ ಅಡಿಕೆ ಅರ್ಪಿಸಿ ಮನೆಯ ಯಜಮಾನ್ತಿ 'ಪುದ್ವಾರ್ ಕರ'ದಲ್ಲಿ ನೀರು ಹಿಡಿದುಕೊಂಡು ಮುಂದೆ ಬರುತ್ತಾರೆ. ಹಿಂದಿನಿಂದ ಇತರರು ಬೇರೆ ಬೇರೆ ಪಾತ್ರೆಗಳಲ್ಲಿ ನೀರು ಹಿಡಿದುಕೊಂಡು ಬರುತ್ತಾರೆ. ಬರುವಾಗ 'ಪೊಲಿಯೇ ಪೊಲಿ ಪೊಲಿ' ಎಂದು ಹೇಳುತ್ತಾರೆ. ಈ ಕ್ರಮದಲ್ಲಿ ನೀರು ತಂದು 'ಅಡ್ಪಿಲ್' (ಅಡುಗೆ ಮಾಡುವ ಮನೆ)ಯಲ್ಲಿ ಇಡುತ್ತಾರೆ. ಅನ್ನ ಬೇಯಿಸಲು ಒಲೆಯ ಮೇಲೆ ಇಡಲಿರುವ 'ಪುದ್ವಾರ್'ದ ಕರಕ್ಕೆ ತೇದ ಗಂಧವನ್ನು ನಾಮ ಹಾಕುತ್ತಾರೆ. ತುಂಬೆ ಹೂವು, ಬೆಳ್ತಿಗೆ ಅಕ್ಕಿಯಿಂದ ಅಕ್ಷತೆ ಹಾಕುತ್ತಾರೆ. ನಂತರ ನೀರು ತಂದ ಮಂದಿಯೆಲ್ಲ ಸೇರಿ ಒಟ್ಟಿಗೆ ಹಿಡಿದು ಆ 'ಪುದ್ವಾರ್'ದ ಕರ'ವನ್ನು ಒಲೆಗೆ ಇಡುತ್ತಾರೆ. ಬಳಿಕ ನೀರು ಕುದಿದಾಗ ಅದಕ್ಕೆ ಅಕ್ಕಿ ಹಾಕಿ ಅನ್ನ ಬೇಯಿಸುತ್ತಾರೆ. ಹೀಗೆ ಬೇಯಿಸುವ ಅನ್ನಕ್ಕೆ 'ಏಣೇಲು' ಬೆಳೆಯ ಕದಿರಿನಿಂದ ತೆಗೆದ ನಾಲ್ಕಾರು ಅಕ್ಕಿಯನ್ನು, ಹಸುವಿನ ಹಾಲು ಅಥವಾ ತೆಂಗಿನ ಕಾಯಿಯ ಹಾಲಿನೊಂದಿಗೆ ಹಾಕುತ್ತಾರೆ. ಹಿಂದಿನ ಬೆಳೆಯ ಅಕ್ಕಿಯ ಅನ್ನವಾದರೂ ಅದಕ್ಕೆ ಈ ರೀತಿ ನಾಲ್ಕಾರು ಭತ್ತದಿಂದ ತೆಗೆದ ಹೊಸ ಅಕ್ಕಿಯನ್ನು ಹಾಕುವುದು ಬಹಳ ಪ್ರಧಾನವಾಗುತ್ತದೆ. ಹೀಗೆ 'ಹೊಸ ಅಕ್ಕಿ ಊಟ'ಕ್ಕೆ ಹೊಸ ಅಕ್ಕಿಯ ಅನ್ನ ತಯಾರಾಗುತ್ತದೆ.

ಇನ್ನೊಂದು ಕಡೆ ಹೆಂಗಸರು ಮೂರು, ಇಲ್ಲವೆ ಐದು, ಇಲ್ಲವೆ ಏಳು, ಇಲ್ಲವೆ ಒಂಭತ್ತು ಹೀಗೆ ಬೆಸ ಸಂಖ್ಯೆಯ ಪ್ರಮಾಣದಲ್ಲಿ ವಿಶೇಷ ತರಕಾರಿ ಪದಾರ್ಥಗಳನ್ನು ತಯಾರಿಸುತ್ತಾರೆ. ಮೊದಲ ದಿನವೇ ಈ ತರಕಾರಿಗಳನ್ನು ಸಂಗ್ರಹಿಸಿಡುತ್ತಾರೆ. 'ಚೇವು ಮತ್ತು ಪದ್ವೆ' (ಕೆಸು ಮತ್ತು ಹರಿವೆ) 'ಪುದ್ವಾರ್'ಗೆ ಕಡ್ಡಾಯವಾಗಿ ಆಗಲೇಬೇಕು. ಅಂತೆಯೇ 'ತೆಕ್ಕರೆದ ತಲ್ಲಿ ಪಜ್ಜಿ ಕಜಿಪು' (ಸೌತೆಯ ಹಸಿ ಪದಾರ್ಥ) ಮತ್ತು ಉಪ್ಪು-ಶುಂಠಿಗಳು ಕೂಡ ಅತ್ಯಗತ್ಯ. ಉಳಿದಂತೆ ಇನ್ನು ಲಭ್ಯವಿರುವ ತರಕಾರಿಗಳನ್ನು ಅವಲಂಬಿಸಿ ಮತ್ತು ಮನೆಯವರ ಪುರುಸೊತ್ತು ಸೌಲಭ್ಯಗಳನ್ನು ಅವಲಂಬಿಸಿ ಹೆಚ್ಚು ಹೆಚ್ಚು ವಿಧದ ಪದಾರ್ಥಗಳನ್ನು ಸಂಭ್ರಮಕ್ಕಾಗಿ ಮಾಡಬಹುದಾಗಿದೆ. ಅನ್ನ ಬೇಯಿಸಲು 'ಪುದ್ವಾರ್ ಕರ' ಇದ್ದ ಹಾಗೆ 'ಪುದ್ವಾರ್'ನ 'ಚೇವು ಮತ್ತು ಪದ್ವೆ' (ಕೆಸು ಮತ್ತು ಹರಿವೆ)ಪದಾರ್ಥ ಮಾಡಲು 'ಪುದ್ವಾರ್'ದ ಬಿಸಲೆ' (ಪಾತ್ರೆ) ಕೂಡ ಇರುತ್ತದೆ. ಈ ರೀತಿಯ ಪಾತ್ರೆಗಳು 'ಪುದ್ವಾರ್'ಗಾಗಿಯೇ ಮೀಸಲಾಗಿದ್ದು, 'ಪುದ್ವಾರ್' ಕಳೆದಾದ ಮೇಲೆ ಅವುಗಳನ್ನು ಅಟ್ಟದಲ್ಲಿಡುತ್ತಾರೆ.

ಹೀಗೆ 'ಪುದ್ವಾರ್' ಊಟಕ್ಕೆ ಎಲ್ಲ ತಯಾರಿ ಆದ ಬಳಿಕ ವೀಳ್ಯ ಅಡಕೆಯನ್ನು ಬಾಳೆಲೆಯಲ್ಲಿಟ್ಟು ಪತ್ನಿಸಹಿತನಾಗಿ ಮನೆಯ ಯಜಮಾನ ಒಲೆಯ ಬೆಂಕಿಗೆ ಹೊಸ ಅನ್ನವನ್ನು ಅರ್ಪಿಸುತ್ತಾನೆ. ಇದನ್ನು 'ಅಗ್ಗಿಷ್ಟಕೆ' ಎನ್ನುತ್ತಾರೆ. ನಂತರ 'ಕುಲೆಕ್ಕುಲೆಗ್ ಬಳಸುನ' ಕ್ರಮ (ಸತ್ತ ಹಿರಿಯರಿಗೆ ಅಗೆಲು ಹಾಕುವ ಕ್ರಮ) ಮಾಡುತ್ತಾರೆ. 'ಪುದ್ವಾರ್'ಗಾಗಿ ತಯಾರಿಸಿದ ವಿಶೇಷ ಅಡುಗೆಯನ್ನು ಹಿರಿಯರಿಗೆ ಒಪ್ಪಿಸಿ ಅವರಿಗೆ ಭಕ್ತಿಯಿಂದ ಕೈ ಮುಗಿಯುತ್ತಾರೆ. ನಂತರ ಮನೆಯವರು ಮತ್ತು ಮನೆಗೆ 'ಪುದ್ವಾರ್' ಊಟಕ್ಕೆ ಬಂದ ನೆರೆಹೊರೆಯವರು, ನೆಂಟರಿಷ್ಟರೆಲ್ಲ ಒಟ್ಟಿಗೆ ಊಟಕ್ಕೆ ಕುಳಿತುಕೊಳ್ಳುತ್ತಾರೆ. ಮನೆಯ ಹೆಂಗಸರು ಊಟ ಬಡಿಸುತ್ತಾರೆ. ಎಲ್ಲರೂ ಆ ದಿನ 'ಕೊಡಿ' ಬಾಳೆ ಎಲೆಯಲ್ಲಿ ಊಟ ಮಾಡುವುದು ವಿಶೇಷ ಪದ್ಧತಿಯಾಗಿರುತ್ತದೆ.

'ಪುದ್ವಾರ್' ಊಟ ಬಡಿಸುವಾಗ 'ಪುದ್ವಾರ್ ಸಮ್ಮನ'ವನ್ನು ಉಪಯೋಗಿಸುತ್ತಾರೆ. ಬಡಿಸುವಾಗ ಮೂರು ಸಲ ಬಡಿಸಬೇಕು. ಹೀಗೆ ಬಡಿಸಿಕೊಳ್ಳುವಾಗ ಪ್ರತಿ ಸಲವೂ ಅನ್ನವನ್ನು ಸಟ್ಟುಗದಲ್ಲಿರುವಾಗಲೇ ಮುಟ್ಟಿ ನಮಸ್ಕರಿರುತ್ತಾರೆ. 'ಪುದ್ವಾರ್' ಊಟ ಬಡಿಸಲೆಂದೇ ವಿಶೇಷ ಮರದ ಸಟ್ಟುಗವೂ ಇರುತ್ತದೆ. ಮನೆಯ ಗಂಡಸರು ಅಡುಗೆ ಕೋಣೆಯಲ್ಲಿಯೇ ಮೊದಲು 'ಪುದ್ವಾರ್' ಊಟ ಮಾಡುತ್ತಾರೆ. ಊಟ ಮಾಡುವಾಗ ತಲೆಗೆ ಮುಂಡಾಸು ಸುತ್ತಿರುತ್ತಾರೆ. 'ಪುದ್ವಾರ್' ಊಟ ಮಾಡುವಾಗ ಪ್ರತಿಯೊಬ್ಬರೂ ಪರಸ್ಪರ 'ಎಂಕಲೊ ಪುದ್ವಾರ್ ಉಣ್ಪೊ' (ನಾವು ಪುದ್ವಾರ್ ಊಟ ಮಾಡುತ್ತೇವೆ) ಎಂದು ಮೂರು ಮೂರು ಸಲ ಕೇಳಿಕೊಳ್ಳುತ್ತಾರೆ.

ಆಗ ಇತರರು 'ದೇವೆರಪ್ಪಣೆ'(ದೇವರ ಅಪ್ಪಣೆ) ಎಂದು ಒಪ್ಪಿಗೆ ಸೂಚಿಸುತ್ತಾರೆ. ಹೀಗೆ ಎಲ್ಲರೂ ಪರಸ್ಪರ ಒಟ್ಟಿಗೆ ಕೇಳಿಕೊಂಡು ಸಹಭೋಜನ ಮಾಡುತ್ತಾರೆ. 'ಪುದ್ವಾರ್' ಊಟದ ಬಳಿಕವೂ 'ಬಚ್ಚಿರೆ ಬಜ್ಜೆಯಿ' (ಎಲೆಅಡಿಕೆ) ತಿನ್ನುವ ಕ್ರಮವೂ ಇದೆ.

ಆ ವರ್ಷ ಮನೆಯಲ್ಲಿ ಮಗು ಜನಿಸಿದ್ದರೆ, ಆ ಮಗುವಿಗೆ 'ಪುದ್ವಾರ್' ದಿನ ಅನ್ನ ಕೊಡುವ ಕ್ರಮವಿರುತ್ತದೆ. ಇದನ್ನು 'ಬಾಲೆಗ್ ಉಣ್ಪು ಕೊರ್ಪುನ'(ಮಗುವಿಗೆ ಅನ್ನ ಕೊಡುವುದು) ಎಂದು ಕರೆಯುತ್ತಾರೆ. 'ಪುದ್ವಾರ್' ಊಟದ ಸಂದರ್ಭದಲ್ಲಿ ಮಗುವಿನ ತಾಯಿ ತಂದೆ ಮತ್ತು ಮನೆ ಮಂದಿಯೆಲ್ಲ ಆ ಮಗುವಿಗೆ ಅನ್ನದ ಅಗುಳನ್ನು ಉಣಿಸುವುದು ಕ್ರಮ.

ಇದೇ ರೀತಿ ಆ ವರ್ಷ ಮನೆಯಲ್ಲಿ ಮದುವೆಯಾದ ಮದುವಣಿಗರಿದ್ದರೆ ಆ 'ಪುದ್ವಾರ್'ಗೆ ವಿಶೇಷತೆಯಿದೆ. ಅದನ್ನು 'ಪೊಸ ಪುದ್ವಾರ್'(ಹೊಸ ಪುದ್ವಾರ್) ಎಂದು ಕರೆಯುತ್ತಾರೆ. ಅಂದರೆ ಹೆಣ್ಣು ತಂದ ಮನೆಯಲ್ಲಿ ಈ ಪೊಸಪುದ್ವಾರ್ ಆಚರಣೆಯಾಗುತ್ತದೆ. ಈ ಪುದ್ವಾರ್‌ಗೆ ಹೆಣ್ಣಿನ ತವರು ಮನೆಯಿಂದ ನೆಂಟರು ಬಂದಿರುತ್ತಾರೆ.
ಕುಟುಂಬದ ಸದಸ್ಯರು ಎಲ್ಲಿದ್ದರೂ 'ಪುದ್ವಾರ್' ಊಟಕ್ಕೆ ಮನೆಗೆ ಬರುತ್ತಾರೆ. ಈ ಆಚರಣೆಯಲ್ಲಿ ಭಕ್ತಿ ಸಂಭ್ರಮಗಳಿಂದ ಪಾಲ್ಗೊಳ್ಳುತ್ತಾರೆ. ಕೋಳಿಅಂಕ, ಬೇಟೆಯಾಡುವುದು ಇಲ್ಲವೆ ತೆಂಗಿನಕಾಯಿ ಕುಟ್ಟುವಂತಹ ಕ್ರೀಡೆಯನ್ನು ಮನೋರಂಜನೆಗಾಗಿ ಆಡುತ್ತಾರೆ. ಹುಟ್ಟು ಸಾವುಗಳ ಸೂತಕಗಳು ಬಂದರೆ ಈ ಆಚರಣೆಯನ್ನು ಮಾಡುವುದಿಲ್ಲ. ಹೀಗೆ 'ಪುದ್ವಾರ್' ಆಚರಣೆಯ ಕ್ರಮ ವಿಶಿಷ್ಟವಾಗಿ ಕಂಡುಬರುತ್ತದೆ. ('ಪುದ್ವಾರ್' ಆಚರಣೆಗೆ ಸಂಬಂಧಿಸಿದಂತೆ ಅನುಬಂಧ ಪುಟ-X ರಲ್ಲಿನ ಚಿತ್ರ-೧.೬.೧ ರಿಂದ ೧.೬.೬ ಇವುಗಳನ್ನು ಗಮನಿಸಬಹುದು.)

## ೯.೩: 'ಪುದ್ವಾರ್' ಆಚರಣೆ-ವಿಶ್ಲೇಷಣೆ

ತುಳುನಾಡಿನಲ್ಲಿ ಕದಿರು ಹಬ್ಬ ಮತ್ತು ಹೊಸತೂಟ ('ಪುದ್ದಾರ್') ಆಚರಣೆಗಳಿಗೆ ಬಹಳ ಮಹತ್ವವಿದೆ. ಭತ್ತವನ್ನೇ ಪ್ರಧಾನವಾಗಿ ಬೆಳೆಯುವ ಜನ ಪರಿಸರ ಮತ್ತು ಕಾಲ ಬದ್ಧತೆಯ ಹಿನ್ನೆಲೆಯಲ್ಲಿ ಈ ಆಚರಣೆಯನ್ನು ಆಚರಿಸುವುದು ಕಂಡುಬರುತ್ತದೆ.

"ಹೊಸತೂಟದ ಆಚರಣೆಯನ್ನು ಮನೆ ತುಂಬಿಸಿದ ದಿನವೇ ಆಚರಿಸುವುದು ರೂಢಿ. ಕೆಲವೊಮ್ಮೆ ಅನುಕೂಲಕ್ಕಾಗಿ ವ್ಯತ್ಯಾಸವಾಗುವುದುಂಟು. ಆದರೆ ಭಾವನಾತ್ಮಕವಾಗಿ ಮನೆ ತುಂಬಿಸಿದ ದಿನ ಹೊಸ ದಿನವಾಗುವುದರಿಂದ ಆ ದಿನವೇ 'ಪುದ್ವಾರ್' ಆಚರಿಸುವುದು

ಅನ್ವರ್ಥವಾಗುತ್ತದೆ. ಈ 'ಪುದ್ವಾರ್' ಊಟದ ಸಿದ್ಧತೆ ವೈಶಿಷ್ಟ್ಯಪೂರ್ಣವಾಗಿ ಇತರ ದಿನದ ಊಟ ತಯಾರಿಕೆಯಿಂದ ಭಿನ್ನವಾಗಿರುತ್ತದೆ"[3] ಎಂಬ ಮಾತನ್ನು ವಿಶೇಷವಾಗಿ ಗಮನಿಸಬೇಕು.

ಪ್ರಾಕೃತಿಕವಾದ ವೈರುಧ್ಯಗಳಿಂದ 'ಆಟಿ' ತಿಂಗಳು ತುಳುವರಿಗೆ ನಿಷೇಧ ತಿಂಗಳು. ಈ ತಿಂಗಳಲ್ಲಿ ಯಾವುದೇ ಹಬ್ಬ ಹರಿದಿನಗಳು, ಸಂಭ್ರಮೋತ್ಸವಗಳು ನಡೆಯುವುದಿಲ್ಲ. 'ಆಟಿ' ತಿಂಗಳ ಹಿಂದಿನ ತಿಂಗಳಾದ 'ಕಾರ್ತೆಲ್' ವೇಳೆಗೆ ಕೃಷಿ ಒಕ್ಕಲುಗಳಿಗೆ ಬೇಸಾಯದ ಕೆಲಸ ಮುಗಿದಿರುತ್ತದೆ. 'ಆಟಿ' ತಿಂಗಳಲ್ಲಿ ಯಾವುದೇ ಕೆಲಸವೂ ಇರುವುದಿಲ್ಲ, ಮತ್ತು ಕೆಲಸ ಮಾಡಲು ಹವಾಮಾನದ ಅಡಚಣೆ ಬೇರೆ. ಆದ್ದರಿಂದ 'ಆಟಿ'ಯ ನಂತರದ ಸೋಣ ತಿಂಗಳು ತುಳುವರಿಗೆ ಬೆಳೆ ಬರುವ ದೃಷ್ಟಿಯಿಂದ ಮತ್ತು ಹಬ್ಬ ಹರಿದಿನಗಳ ಆಚರಣೆಗಳ ದೃಷ್ಟಿಯಿಂದ ಹೊಸ ತಿಂಗಳು. 'ಸೋಣ' ತಿಂಗಳಲ್ಲಿ ಮಳೆ ಕಡಿಮೆಯಾಗುತ್ತದೆ. ಬೆಳೆ ತೆನೆ ಬಿಡುತ್ತದೆ. ಜೀವನದಲ್ಲಿ ಮತ್ತೆ ಉತ್ಸಾಹ ಕುದುರುತ್ತದೆ. 'ಏಣೇಲು' ಹೊಸ ಬೆಳೆಯನ್ನು ಮನೆಗೆ ತರುವ ಸಂಭ್ರಮ ಮತ್ತು ಹೊಸಬೆಳೆಯ ಅನ್ನ ಮಾಡಿ ಹೊಸತೋಟ ಮಾಡುವ ಅನ್ನ ದೇವರ ಆರಾಧನೆಯ ಸಡಗರವಾಗಿ 'ಪುದ್ವಾರ್' ನಡೆಯುತ್ತದೆ. ಅಂದರೆ 'ಆಟಿ' ತಿಂಗಳ ನಿಷೇಧ ಮತ್ತು 'ಸೋಣ' ತಿಂಗಳಿನಿಂದ ಆರಂಭವಾಗುವ ಚಟುವಟಿಕೆಗಳು ಋತು ಸ್ಥಿತ್ಯಂತರವನ್ನು ಸೂಚಿಸುತ್ತವೆ. ಈ ವಿಷಯಕ್ಕೆ ಸಂಬಂಧಿಸಿದಂತೆ ವಿದ್ವಾಂಸರಾದ ಪೂವಪ್ಪ ಕಣಿಯೂರು ಅವರು ಹೀಗೆ ಹೇಳುತ್ತಾರೆ– "ಬದುಕಿನಲ್ಲಿ ಸ್ಥಿತ್ಯಂತರದ ಕಾಲಕ್ಕೆ ಜನಪದರು ಹೆಚ್ಚಿನ ಮಹತ್ವ ಕೊಟ್ಟಿದ್ದಾರೆ. ಅವರ ಬಹುತೇಕ ಆಚರಣೆಗಳು ಇಂತಹ ಸ್ಥಿತ್ಯಂತರದ ಕಾಲದಲ್ಲಿಯೇ ನಡೆಯುತ್ತಾ ಬಂದಿವೆ. ಈ ಹಿನ್ನಲೆಯಲ್ಲಿ ಮನೆ ತುಂಬಿಸುವ ಮತ್ತು ಹೊಸತೂಟ ಆಚರಣೆಯ 'ಕ್ರಿಯಾ ರಹಿತ' ಕಾಲದಿಂದ 'ಕ್ರಿಯಾ ಸಹಿತ' ಕಾಲಕ್ಕೆ ಹೊರಳುವ ಸ್ಥಿತ್ಯಂತರದಲ್ಲಿ ನಡೆಯವುದು ಅರ್ಥಪೂರ್ಣವಾಗಿದೆ.

ಬೆಳೆದ ಸಮೃದ್ಧಿಯನ್ನು ವಾಸ್ತವದಿಂದ 'ಪ್ರತ್ಯೇಕಿಸಲಾದ ಆವರಣ'ದಲ್ಲಿ ಪೂಜಿಸಿ ಮನೆ ತುಂಬಿಸಿಕೊಳ್ಳುವ, ಆ ಮೂಲಕ ಸಂಭ್ರಮಿಸುವ ಆಶಯ ಈ ಆಚರಣೆಯಲ್ಲಿದೆ. ಮನೆ ತುಂಬಿಸುವ ವಿಧಿ ವಿಧಾನದಲ್ಲಿ ತೆನೆ ಹಿಡಿದು ಪೊಲಿಯೇ ಪೊಲಿ–ಪೊಲಿ–ಎನ್ನುವ ಅಂಶ ಪ್ರಧಾನವಾಗುತ್ತದೆ. 'ಪೊಲಿ–ಪೊಲ್ಸು' ಎಂದರೆ ಸಮೃದ್ಧಿಯೆಂದರ್ಥ. ಈ ಆಚರಣೆಯ ಹಿನ್ನಲೆಯಲ್ಲಿರುವ ನಂಬಿಕೆ, ಗಾದೆ, ದೃಷ್ಟಿಕತೆ ಎಲ್ಲವೂ 'ಸಮೃದ್ಧಿ' ವೃದ್ಧಿಗೆ ಪೂರಕವಾಗಿ ನಿಲ್ಲುತ್ತವೆ. ಹೊಸ ಸಮೃದ್ಧಿಯನ್ನು ಸಂಭ್ರಮಿಸಿ ಸ್ವೀಕರಿಸುವ ಅಂಶ 'ಹೊಸತೂಟ'ದ ಪ್ರಮುಖ ಆಶಯ. ಇಲ್ಲಿ ಸಹಕಾರ, ಸಹಬಾಳ್ವೆ, ಭಾವೈಕ್ಯತೆ ಅಂಶಗಳು ಸ್ಪಷ್ಟವಾಗುತ್ತವೆ. 'ಪರಸ್ಪರ ತತ್ವ'ದ

ನೆಲೆಗಳಿಂದಾಗಿ ಇಂತಹ ಆಚರಣೆಗಳು ಒಂದು ಜನವರ್ಗದ ಮನೋಧರ್ಮಕ್ಕೆ – ಸಾಂಸ್ಕೃತಿಕ ಅನನ್ಯತೆಗಳನ್ನು ಸಾದರ ಪಡಿಸುತ್ತವೆ."[9] ಅಂದರೆ ಮನೆ ತುಂಬಿಸಿಕೊಂಡ ಸಂಭ್ರಮಕ್ಕೆ ಸಂಬಂಧಿಸಿದಂತೆ ಮಾಡುವ ಹೊಸಕ್ಕಿಯ ಔತಣ ಕೂಟವಾಗಿ ಈ 'ಪುದ್ವಾರ್' ಆಚರಣೆ ಕಂಡುಬರುತ್ತದೆ.

'ಪಗ್ಗು' ತುಳುವರಿಗೆ ವರ್ಷಾರಂಭದ ತಿಂಗಳು. 'ಪಗ್ಗುಸಿಂಗೊಡೆ'(ಪಗ್ಗು ತಿಂಗಳ ಮೊದಲ ದಿನ)ಯಂದು 'ಬಿಸು' ಆಚರಣೆಯ ಮೂಲಕ ಬೇಸಾಯದ ಚಟುವಟಿಕೆಗೆ ಚಾಲನೆ ದೊರೆಯುತ್ತದೆ. ಹೀಗೆ ಮೊದಲು ತೆಗೆಯುವ ಬೆಳೆಯೇ 'ಏಣೇಲು' ಹೊಸ ಬೆಳೆ. ಆದ್ದರಿಂದ 'ಏಣೆಲು' ಬೆಳೆಗೆ ಹೆಚ್ಚಿನ ಮಹತ್ವ ದೊರೆತಂತೆ ಕಾಣುತ್ತದೆ. ಈ ಹಿನ್ನೆಲೆಯಲ್ಲಿ ಕದಿರು ಪೂಜೆ, ಹೊಸ ಅಕ್ಕಿ ಊಟದಂತಹ ಸಂಭ್ರಮ ಆಚರಣೆಗಳು ನಡೆಯುತ್ತವೆ. ಹೊಸ ವರ್ಷದ ಹೊಸ ಬೆಳೆ ಎಂಬರ್ಥದಲ್ಲಿ ಈ ಆಚರಣೆಗಳು ನಡೆಯುತ್ತವೆ ಎಂಬುದು ಒಂದು ವಿಚಾರ. ಈ ಎರಡು ಆಚರಣೆಗಳನ್ನು ಆಚರಿಸುವ ಹಿನ್ನೆಲೆಯನ್ನು ಇನ್ನೊಂದು ನೆಲೆಯಲ್ಲೂ ಯೋಚಿಸಬಹುದಾಗಿದೆ. ಮಳೆ, ಗಾಳಿ, ಸಿಡಿಲು, ಮಿಂಚು ಮೊದಲಾದ ಪ್ರಾಕೃತಿಕ ವೈಪರೀತ್ಯಗಳ ಋತುವಿನಲ್ಲೇ 'ಏಣೇಲು' ಬೆಳೆ ಬೆಳೆಯಬೇಕಾಗುತ್ತದೆ. ಕಷ್ಟಕಾಲದಲ್ಲಿ ಬೆಳೆದ ಬೆಳೆ ತೆನೆಯೊಡೆದು ಪೈರಾಗಿ ಬೆಳೆದು ಮನೆ ಸೇರುವುದು ಅಷ್ಟು ಸುಲಭವಲ್ಲ. ಹಾಗೂ ಹೀಗೂ ಬೆಳೆ ಚೆನ್ನಾಗಿ ಬೆಳೆದರೂ ಕಟಾವಿಗೆ ಬರುವ ವೇಳೆಗೆ ಮಳೆಯಿಂದಾಗಿ ಕೆಸರಲ್ಲಿ ಮುಳುಗುವ ಅಪಾಯ ಒಂದೆಡೆಯಾದರೆ, ಹಂದಿ ಮೊದಲಾದ ಕಾಡು ಪ್ರಾಣಿಗಳ ಉಪದ್ರವ ಹೆಚ್ಚಾಗಿ, ಬೆಳೆಯನ್ನು ಮನೆ ಸೇರಿಸುವುದು ಬಹಳ ಕಷ್ಟ ಸಾಧ್ಯವಾಗುತ್ತದೆ. ಈ ಹಿನ್ನೆಲೆಯಲ್ಲಿ ಭತ್ತ ತೆನೆ ಕಟ್ಟುವಾಗಲೇ ಅದನ್ನು ಮನೆಗೆ ತಂದು ಅದರ ಅಕ್ಕಿ ತೆಗೆದು ಹೊಸತೂಟ ಮಾಡುವ ಮೂಲಕ ಅನ್ನ ದೇವರನ್ನು ಭಕ್ತಿಯಿಂದ ಪೂಜಿಸುವ ಕ್ರಮವೂ ಇದಾಗಿರಬಾರದೇಕೆ? ಎಂಬ ಅಂಶ ಗಮನಾರ್ಹವಾದುದು. 'ಏಣೇಲು' ಬೆಳೆ ಸಮೃದ್ಧಿ ನಿರಾತಂಕವಾಗಿ ಮನೆ ಸೇರಲೆಂದು ಹೊಲದಲ್ಲಿರುವ ಸಮೃದ್ಧಿಯನ್ನು ಮನೆಗೆ 'ಪೊಲಿಯೇ ಪೊಲಿ ಪೊಲಿ' ಎಂದು ಕರೆದು ತರುವ ಉದ್ದೇಶವೂ ಇದರಲ್ಲಿರುವಂತೆ ಕಾಣುತ್ತದೆ.

'ಪುದ್ವಾರ್' ಆಚರಣೆಯಂದು ಆ ವರ್ಷದ ಹೊಸ ಮದುವಣಿಗರಿದ್ದರೆ 'ಪೊಸಪುದ್ವಾರ್' (ಹೊಸಪುದ್ವಾರ್) ಮತ್ತು ಆ ವರ್ಷ ಮನೆಯಲ್ಲಿ ಮಗು ಜನಿಸಿದ್ದರೆ 'ಬಾಲೆಗ್ ಉಣ್ಬು ಕೊರ್ಪುನ' (ಮಗುವಿಗೆ ಅನ್ನ ಕೊಡುವುದು) ಎಂಬ ಎರಡು ವಿಶೇಷ ವಿಧಿಗಳ ಬಗ್ಗೆ ಪ್ರಸ್ತಾಪಿಸಲಾಗಿದೆ. ಇಲ್ಲಿ ಹೊಸದಾಗಿ ಬಂದ ಹೆಣ್ಣು ಮಗಳು ಮತ್ತು ಹೊಸದಾಗಿ ಜನ್ಮ

ಪಡೆದು ಬಂದ ಮಗು–ಇಬ್ಬರೂ ಆ ಮನೆಗೆ ಹೊಸ ಸದಸ್ಯರು ಎಂಬುದು ಗಮನಾರ್ಹ. ಹೀಗೆ ಹೊಸದಾಗಿ ಸೇರ್ಪಡೆಗೊಂಡ ಸದಸ್ಯರನ್ನು ಹೊಸ ಅಕ್ಕಿ ಊಟ ನೀಡುವ ಮೂಲಕ ವಿಧಿವತ್ತಾಗಿ ಕುಟುಂಬದ ಸದಸ್ಯರನ್ನಾಗಿ ಸ್ವೀಕರಿಸುವ ಕ್ರಮವನ್ನು ಇದರಲ್ಲಿ ಗಮನಿಸಬಹುದು. ಈ ಹಿನ್ನೆಲೆಯಲ್ಲಿ ಈ ಕ್ರಮಗಳು ಮಹತ್ವದ್ದಾಗುತ್ತವೆ ಮತ್ತು 'ಪುದ್ವಾರ್' ಆಚರಣೆಯ ಬಗೆಗಿನ ಭಕ್ತಿ ಗೌರವಗಳನ್ನು ಇಲ್ಲಿ ಕಾಣಬಹುದು.

ಅದೇನಿದ್ದರೂ 'ಏಣೇಲು' ಬೆಳೆಯನ್ನು ಮನೆಗೆ ತರುವುದು ಅಷ್ಟು ಸುಲಭದ ಕೆಲಸವಲ್ಲ ಎಂಬುದರಲ್ಲಿ ಸಂದೇಹವಿಲ್ಲ. ಈ ನೆಲೆಯಲ್ಲಿ 'ಏಣೇಲು' ಬೆಳೆಗೆ ಹೆಚ್ಚಿನ ಗಮನ ಮತ್ತು ಮಹತ್ವ ಸಲ್ಲುತ್ತದೆ. ಆರಂಭದಲ್ಲಿ ಈ ಆಚರಣೆಯನ್ನು 'ಕುರಲ್‌ಪರ್ಬ'ದ ದಿನವೇ ಮಾಡುತ್ತಿದ್ದರು. ನಂತರದ ದಿನಗಳಲ್ಲಿ ಅನುಕೂಲಕ್ಕೆ ಹೊಂದಿಕೊಂಡು 'ಪುದ್ವಾರ'ನ್ನು ಪ್ರತ್ಯೇಕವಾಗಿ ಆಚರಿಸುತ್ತಾ ಬಂದಂತೆ ತೋರುತ್ತದೆ. ಈ ಆಚರಣೆಯಲ್ಲಿ ತುಳುವರ ಕೌಟುಂಬಿಕ, ಸಾಮಾಜಿಕ ಒಗ್ಗಟ್ಟು ಗಮನ ಸೆಳೆಯುತ್ತದೆ.

'ಪುದ್ವಾರ್' ಆಚರಣೆಗೆ ಸಂಬಂಧಿಸಿದಂತೆ ಇರುವ ಕೆಲವು ಗಾದೆಗಳನ್ನು ಗಮನಿಸಬಹುದು. 'ಪುದ್ವಾರ್‌ಡ್ ಕಲ್ಲ್ ತಿಕ್ಕಿ ಲೆಕ್ಕೊ' (ಹೊಸತೂಟದಲ್ಲಿ ಕಲ್ಲು ಸಿಕ್ಕಿದ ಹಾಗೆ) 'ಪುದ್ವಾರ್'ಗೆ ಇರುವ ಮಹತ್ವವನ್ನು ಇಲ್ಲಿ ಅರ್ಥೈಸಬಹುದು. 'ಪುದ್ವಾರ್' ಊಟವೆಂದರೆ ತುಳುವರಿಗೆ ಮೃಷ್ಟಾನ್ನ ಭೋಜನ. ಶುಚಿರುಚಿಯಾದ ಅಡುಗೆ ಮಾಡಿ ಸಂಭ್ರಮದಿಂದ ಊಟ ಮಾಡುವಾಗ ಕಲ್ಲು ಸಿಕ್ಕಿದರೆ ಹೇಗೆ? ಸಂಭ್ರಮಕ್ಕೆ ಅಡ್ಡಿ ಬಂದಂತಾಗುತ್ತದೆ. ಆದ್ದರಿಂದ 'ಪುದ್ವಾರ್' ಯಾವುದೇ ಅಡ್ಡಿಯಾಗದೇ ಆಚರಿತವಾಗಬೇಕೆಂಬ ಅಂಶ ಈ ಗಾದೆಯಿಂದ ವೇದ್ಯವಾಗುತ್ತದೆ. 'ನೀರ್ ಪರ್ಯರ ಬತ್ತಿನಾಯಗ್ 'ಪುದ್ವಾರ್'ದ ಒಣಸ್ ತಿಕ್ಕಿ ಲೆಕ್ಕೊ' (ನೀರು ಕುಡಿಯಲು ಬಂದವನಿಗೆ ಹೊಸತೂಟ ಸಿಕ್ಕಿದ ಹಾಗೆ).ಅನಾಯಾಸವಾಗಿ ಸಂಭ್ರಮದ ರುಚಿಕರವಾದ ಭೋಜನ ದೊರೆಯಿತು ಎಂಬುದು ಮೇಲ್ನೋಟಕ್ಕೆ ಅರ್ಥವಾಗುತ್ತದೆ. ಆದರೆ 'ಪುದ್ವಾರ್' ಊಟ ಸಿಗುವುದೆಂದರೆ ಅದು ಬಹಳ ಪುಣ್ಯದ ಫಲ ಮತ್ತು ನೀರು ಕೇಳಿ ಬಂದವರಿಗೂ 'ಪುದ್ವಾರ್' ಊಟವನ್ನು ಬಡಿಸಿ ಸಂತುಷ್ಟಪಡಿಸಲೇಬೇಕು ಎಂಬುದು ಇದರ ಅರ್ಥ. ಅಂದರೆ ಸಹಬಾಳ್ವೆ, ಸಹಭೋಜನ ಮತ್ತು 'ಪುದ್ವಾರ್' ಊಟದ ಧಾರ್ಮಿಕ ಪಾವಿತ್ರ್ಯತೆಯನ್ನು ಈ ಗಾದೆಯಲ್ಲಿ ಗಮನಿಸಬಹುದು.

'ಪೊಸ ಬಾಲೆಗ್ ಪುದರ್, ಪೊಸ ಬಾರ್‌ಗ್ ಪುದ್ದರ್'(ಹೊಸ ಮಗುವಿಗೆ ಹೆಸರು, ಹೊಸ ಭತ್ತಕ್ಕೆ ಪುದ್ದರ್), 'ಪುದ್ದರ್‌ದಾನಿ ಪೆದ್ದಿ ಬಾಲೆಗ್ ಪುದರೆಂಚಿನಂದ್ ಪೊಪ್ಪೆರೆಡ ಕೇಣು

ಪೆದ್ದೆರ್' (ಪುದ್ದರ್‌ನಂದು ಹೆತ್ತ ಮಗುವಿಗೆ ಹೆಸರೇನೆಂದು ತವರಿನ ಕಡೆಯವರಲ್ಲಿ ಕೇಳುವ ಪೆದ್ದಗಳು) ಎಂಬ ಗಾದೆಗಳೂ ಕಂಡುಬರುತ್ತವೆ.

ಸಾವು ಸಂಭವಿಸಿದ ಮನೆಯಲ್ಲಿ ಆ ವರ್ಷ 'ಪುದ್ವಾರ್' ಊಟ ಮಾಡಬಾರದು. 'ಪುದ್ವಾರ್' ಕರ ಒಡೆಯಬಾರದು. ಆ ಮನೆಯಲ್ಲಿ ಸಾವು ನೋವು ಸಂಭವಿಸುತ್ತದೆ. 'ಪುದ್ವಾರ್' ಊಟದ ದಿನವೂ ಸಾವು ಸಂಭವಿಸಬಾರದು. ಆಕಸ್ಮಿಕವಾಗಿ ಸಾವು ಸಂಭವಿಸಿದರೆ ಆ ಮನೆಯ ಸಮೃದ್ಧಿ ಸಾವಿನ ರೂಪದಲ್ಲಿ ಹೋಗುತ್ತದೆ. 'ಪುದ್ವಾರ್' ದಿನ ಮನೆಯ ಬಾಗಿಲು ಮುಚ್ಚಬಾರದು. 'ಪುದ್ವಾರ್' ಊಟ ಮಾಡಿ ಎಲೆಅಡಿಕೆ ತಿನ್ನಬೇಕು; ಇಲ್ಲದಿದ್ದರೆ ಬಾಯಿಗೆ ನರಿ ನುಗ್ಗುತ್ತದೆಯಂತೆ–ಇವೇ ಮೊದಲಾದ ನಂಬಿಕೆಗಳೂ 'ಪುದ್ವಾರ್' ಆಚರಣೆಗೆ ಸಂಬಂಧಿಸಿದಂತೆ ಪ್ರಚಲಿತದಲ್ಲಿವೆ.

### ೯.೪: 'ಪುದ್ವಾರ್'–ಆಚರಣೆಯ ಒಟ್ಟೂ ಸ್ವರೂಪ

ಒಟ್ಟಿನಲ್ಲಿ ಈ ಆಚರಣೆಯ ಒಟ್ಟೂ ಆಶಯ ಮತ್ತು ಸ್ವರೂಪಗಳನ್ನು ಈ ರೀತಿ ಸಂಗ್ರಹಿಸಬಹುದು.

೧. 'ಏಣೇಲು' ಬೇಸಾಯದ ಹೊಸ ಅಕ್ಕಿಯನ್ನು ಮೊದಲು ಬೇಯಿಸಿ ವಿಧಿವತ್ತಾಗಿ ಊಟಮಾಡುವ ಕ್ರಮವನ್ನು 'ಪುದ್ವಾರ್' ಆಚರಣೆ ಎನ್ನುವರು.

೨. 'ನಿರ್ನಾಲ' ತಿಂಗಳ 'ಸಿಂಗೊಡೆ' (ಮೊದಲದಿನ) ಅಥವಾ ಮೊದಲ ಶುಕ್ರವಾರ ಇಲ್ಲವೆ ತಿಂಗಳಾಂತ್ಯದೊಳಗೆ ಈ ಆಚರಣೆಯನ್ನು ಮಾಡುತ್ತಾರೆ.

೩. ಹೆಚ್ಚಾಗಿ 'ಕುರಲ್‌ಪರ್ಬ'ದ ದಿನವೇ 'ಪುದ್ವಾರ್' ಆಚರಣೆಯನ್ನು ಮಾಡುತ್ತಾರೆ.

೪. 'ಕಾವೇರಿ ಸಂಕ್ರಾಂತಿ'ಯ ಮೊದಲು 'ಪುದ್ವಾರ್' ಆಚರಣೆ ಮಾಡಬೇಕೆಂಬುದು ಜನಪದರ ನಂಬಿಕೆಯಾಗಿದೆ.

೫. 'ಪುದ್ವಾರ್' ಊಟ ತಯಾರಿಗೆ ಮನೆಯ ಹೆಂಗಸರೆಲ್ಲ ಒಟ್ಟಾಗಿ ನೀರು ತರುವ ಕ್ರಮವಿದೆ.

೬. 'ಪುದ್ವಾರ್' ಊಟಕ್ಕೆ ಮೂರು ಇಲ್ಲವೆ ಐದು ಇಲ್ಲವೆ ಏಳು ಇಲ್ಲವೆ ಒಂಬತ್ತು ಬಗೆಯ ವಿಶೇಷ ತರಕಾರಿ ಪದಾರ್ಥಗಳನ್ನು ಮಾಡಲಾಗುತ್ತದೆ.

೭. ಮನೆಯ ಯಜಮಾನ ಮತ್ತು ಅವನ ಹೆಂಡತಿ ಮೊದಲು ಊಟಕ್ಕೆ ಕುಳಿತುಕೊಳ್ಳುವ ಕ್ರಮವಿದೆ.

೮. ಊಟ ಮಾಡುವಾಗ 'ಪುದ್ವಾರ್' ಊಟ ಮಾಡುತ್ತೇವೆ ಎಂದು ಪರಸ್ಪರ ಹೇಳಿಕೊಂಡು ಒಪ್ಪಿಗೆ ಪಡೆದು ಊಟಮಾಡುತ್ತಾರೆ.

೯. ನೆರೆಹೊರೆಯವರನ್ನೆಲ್ಲ ಊಟಕ್ಕೆ ಕರೆಯಲಾಗುತ್ತದೆ.

೧೦. ವಿಶೇಷವಾಗಿ ಮೀಸಲಾಗಿಟ್ಟ ಮಣ್ಣಿನ ಮಡಕೆಗಳನ್ನು 'ಪುದ್ವಾರ್' ಊಟದ ಅಡುಗೆ ತಯಾರಿಸಲು ಬಳಸಲಾಗುತ್ತದೆ.

೧೧. ಊಟಕ್ಕೆ ಮೊದಲು ಪಿತೃಗಳಿಗೆ ಬಡಿಸಲಾಗುತ್ತದೆ.

೧೨. ಈ ಆಚರಣೆಯ ದಿನ ನಾಗ-ದೈವಗಳಿಗೆ 'ಪರ್ವ', 'ತಂಬಿಲ' ನಡೆಸುತ್ತಾರೆ.

೧೩. ಹೊಸ ಅಕ್ಕಿಯ ಅನ್ನವನ್ನು ವಿಧಿವತ್ತಾಗಿ ಅಗ್ನಿಗೆ ಅರ್ಪಿಸಿ ಅದರ ವಿಭೂತಿಯನ್ನು 'ಕಾವೇರಿ ಸಂಕ್ರಾಂತಿ' ಆಚರಣೆಯಲ್ಲಿ ಬಳಸಿಕೊಳ್ಳಲು ತೆಗೆದಿಡುತ್ತಾರೆ.

೧೪. ಆಚರಣೆಯ ದಿನ ಮನೆಮಂದಿ ಎಲ್ಲಿದ್ದರೂ ಮನೆಗೆ ಬರುತ್ತಾರೆ.

೧೫. ಈ ಆಚರಣೆಯ ಅಂಗವಾಗಿ ಕೋಳಿಅಂಕ, ಬೇಟೆ ಇಲ್ಲವೆ ತೆಂಗಿನಕಾಯಿ ಕುಟ್ಟುವ ಕ್ರೀಡೆಗಳಲ್ಲಿ ಜನರು ಪಾಲ್ಗೊಳ್ಳುತ್ತಾರೆ.

೧೬. ಮಧ್ಯಾಹ್ನ 'ಪುದ್ವಾರ್' ಆಚರಿಸಿದರೆ ಆ ರಾತ್ರಿ 'ಅಡ್ಯೆ'(ಅಕ್ಕಿ ಹಿಟ್ಟಿನಿಂದ ಮಾಡುವ ತಿಂಡಿ) ಮಾಡುವ ಕ್ರಮವಿದೆ.

೧೭. ಈ ಆಚರಣೆಗೆ ಸಂಬಂಧಿಸಿದ ನಂಬಿಕೆ, ಗಾದೆಗಳು ಪ್ರಚಲಿತದಲ್ಲಿವೆ.

೧೮. ಆ ವರ್ಷ ಮನೆಯಲ್ಲಿ ಯಾರಿಗಾದರೂ ಹೆಣ್ಣು ತಂದಿದ್ದರೆ(ಮದುವೆ) ಆ ವರ್ಷದ 'ಪುದ್ವಾರ'ನ್ನು 'ಪೊಸಪುದ್ವಾರ್'(ಹೊಸಪುದ್ವಾರ್') ಎಂದು ಕರೆಯಲಾಗುತ್ತದೆ.

೧೯. ಆ ವರ್ಷ ಮನೆಯಲ್ಲಿ ಮಗು ಹುಟ್ಟಿದ್ದರೆ 'ಪುದ್ವಾರ್' ದಿನ 'ಬಾಲೆಗ್ ಉಣ್ಪು ಕೊರ್ಪುನ'(ಮಗುವಿಗೆ ಅನ್ನ ಕೊಡುವುದು) ಎಂಬ ವಿಶೇಷ ಕಾರ್ಯಕ್ರಮವಿರುತ್ತದೆ.

೨೦. ಜನನ ಮರಣಾದಿ ಸೂತಕಗಳು ಬಂದರೆ 'ಪುದ್ವಾರ್' ಆಚರಣೆಯನ್ನು ಮಾಡುವುದಿಲ್ಲ.

---

**ಅಡಿಟಿಪ್ಪಣಿ**

೧. **ಜಾನಪದ ಮಿನದನ:** ೧೯೯೭: ಡಾ.ಪಾಲ್ತಾಡಿ ರಾಮಕೃಷ್ಣ ಆಚಾರ್: ಸುಪ್ರಿಯಾ ಪ್ರಕಾಶನ, ಪುತ್ತೂರು: ಪುಟ-೬೩

೨. **ತುಳು ನಿಘಂಟು:** ಸಂಪುಟ-೫: ೧೯೯೭: ಡಾ.ಯು.ಪಿ.ಉಪಾಧ್ಯಾಯ: ರಾಷ್ಟ್ರಕವಿ ಗೋವಿಂದ ಪೈ ಸಂಶೋಧನಾ ಕೇಂದ್ರ, ಉಡುಪಿ: ಪುಟ ಸಂಖ್ಯೆ-೨೦೬೩

೩. **ಪೂಕರೆ ಮತ್ತು ಇತರ ಜಾನಪದೀಯ ಲೇಖನಗಳು:** ೨೦೦೪: ಪೂವಪ್ಪ ಕಣಿಯೂರು: ರಾಜ್ ಪ್ರಕಾಶನ, ಮೈಸೂರು: ಪುಟ-೭೩

೪. **ಅದೇ:** ಪೂರ್ವೋಕ್ತ: ಪುಟ-೭೭

■■■

# ಅಧ್ಯಾಯ-೧೦

## ತುಳುನಾಡಿನ ವಾರ್ಷಿಕ ಆವರ್ತನದ ಆಚರಣೆ-'ಕಾವೊರಿ ಸಂಕ್ರಾಂತಿ' (ಕಾವೇರಿ ಸಂಕ್ರಮಣ)

೧೦.೧: 'ಕಾವೊರಿ ಸಂಕ್ರಾಂತಿ'-ಅರ್ಥ

೧೦.೨: 'ಕಾವೊರಿ ಸಂಕ್ರಾಂತಿ'-ಆಚರಣೆಯ ವಿಧಾನ

೧೦.೩: 'ಕಾವೊರಿ ಸಂಕ್ರಾಂತಿ' ಆಚರಣೆ-ವಿಶ್ಲೇಷಣೆ

೧೦.೪: 'ಕಾವೊರಿ ಸಂಕ್ರಾಂತಿ'ಗೆ ಸಮಾನವಾದ ಆಚರಣೆಗಳು

೧೦.೫: 'ಕಾವೊರಿ ಸಂಕ್ರಾಂತಿ'-ಆಚರಣೆಯ ಒಟ್ಟೂ ಸ್ವರೂಪ

# ಅಧ್ಯಾಯ-೧೦

## ತುಳುನಾಡಿನ ವಾರ್ಷಿಕ ಆವರ್ತನದ ಆಚರಣೆ-'ಕಾವೊರಿ ಸಂಕ್ರಾಂತಿ' (ಕಾವೇರಿ ಸಂಕ್ರಮಣ)

# ಅಧ್ಯಾಯ-೧೦

# ತುಳುನಾಡಿನ ವಾರ್ಷಿಕ ಆವರ್ತನದ ಆಚರಣೆ 'ಕಾವೊರಿ ಸಂಕ್ರಾಂತಿ'

## (ಕಾವೇರಿ ಸಂಕ್ರಮಣ)

### ೧೦.೧: 'ಕಾವೇರಿ ಸಂಕ್ರಾಂತಿ'-ಅರ್ಥ

ತುಳುವರ ಆರನೆಯ ತಿಂಗಳಾದ 'ನಿರ್ನಾಲ' ತಿಂಗಳ ಕಡೆಯ ದಿನ 'ಕಾವೊರಿ ಸಂಕ್ರಾಂತಿ' ಹಬ್ಬವನ್ನು ಆಚರಿಸಲಾಗುತ್ತದೆ. ಅಂದರೆ ತುಳುವರು ಈ ದಿನವನ್ನು 'ಬೊಂತೆಲ್' ತಿಂಗಳ ಸಂಕ್ರಾಂತಿಯೆಂದು ಗುರುತಿಸುತ್ತಾರೆ. ಸಾಮಾನ್ಯವಾಗಿ ಈ ಹೊತ್ತಿಗೆ 'ಏಣೇಲು' ಕೊಯ್ಲು ಮುಗಿದಿರುತ್ತದೆ. ಮನೆಯಲ್ಲಿ 'ಭತ್ತದತುಪ್ಪೆ', ಅಂಗಳದಲ್ಲಿ 'ಬೈತ ಮೊಂಟಮೆ' (ಬೈ ಹುಲ್ಲಿನ ರಾಶಿ) ಇರುತ್ತದೆ. ಇವುಗಳಿಗೆಲ್ಲ ಆ ದಿನ 'ಕಲ್ಲು-ಮುಳ್ಳು' ಮತ್ತು 'ಬೂದಿಬರೆ' ಹಾಕುವ ಕ್ರಮ ಈ ಆಚರಣೆಯ ಗಮನಾರ್ಹ ಅಂಶವಾಗಿ ಕಂಡುಬರುತ್ತದೆ.

'ಕಾವೊರಿ ಸಂಕ್ರಾಂತಿ' ಎಂಬ ಪದ ಪುಂಜಕ್ಕೆ ತುಲಾ ಸಂಕ್ರಮಣ, ಮತ್ತು ಕಾವೇರಿ ನದಿ ಹುಟ್ಟಿದ ದಿನವೆಂದು ನಂಬಲಾದ ತುಲಾ ಸಂಕ್ರಮಣದ ದಿನದ ಧಾರ್ಮಿಕ ಆಚರಣೆಗಳು; The day of transition of the sun from the sixth to the seventh solar month; The festivals and rituals performed in honour of the river kaaveeri which is considered to have originated on the day of transition of the sun from the sixth to the seventh solar month-ಎಂಬ ಸೀಮಿತ ಅರ್ಥವಷ್ಟೆ ತುಳು ನಿಘಂಟಿನಲ್ಲಿ ಕಂಡುಬರುತ್ತದೆ.[೧]

### ೧೦.೨: 'ಕಾವೇರಿ ಸಂಕ್ರಾಂತಿ'-ಆಚರಣೆಯ ವಿಧಾನ

'ಕಾವೊರಿ ಸಂಕ್ರಾಂತಿ' ಆಚರಣೆಯ ಹಿನ್ನೆಲೆಯಲ್ಲಿ ಮನೆಯನ್ನು ಸೆಗಣಿ ಸಾರಿಸಿ ಶುದ್ಧಗೊಳಿಸುತ್ತಾರೆ. 'ಕಾವೊರಿ ಸಂಕ್ರಾಂತಿ'ಯ ಮೊದಲ ದಿನವೇ ಹೊಸ ಅಕ್ಕಿಗೆ ಉದ್ದು ಹಾಕಿ ಕಡೆದು ಮರುದಿನ ಬೆಳಿಗ್ಗೆಯ ಉಪಾಹಾರಕ್ಕೆ ದೋಸೆಗಾಗಿ ಸಿದ್ಧತೆ ನಡೆಸುತ್ತಾರೆ. ಸಂಕ್ರಾಂತಿಯ ದಿನ ಬೆಳಿಗ್ಗೆ 'ಬಿತ್ತ್‌ದಮುಡಿ'(ಬಿತ್ತನೆ ಬೀಜದ ಮುಡಿ)ಯನ್ನು ಅಟ್ಟಕ್ಕೆ ಹಾಕುವ ಕ್ರಮವಿರುತ್ತದೆ. ಅದಕ್ಕಾಗಿ ಬಿತ್ತನೆ ಬೀಜದ ಮುಡಿ ತಯಾರಿಸುತ್ತಾರೆ. ಅಂತೆಯೇ ಭತ್ತದ ರಾಶಿಗೆ, ಬೈ ಹುಲ್ಲಿನ ರಾಶಿಗೆ 'ಕಲ್ಲು-ಮುಳ್ಳು' ಮತ್ತು 'ಬೂದಿಬರೆ'ಯನ್ನು ಸಂಕ್ರಾಂತಿಯ ಹಿಂದಿನ ದಿನ ಸಂಜೆಯೇ

ಹಾಕಿಡುತ್ತಾರೆ. ಈ ಕೆಲಸವನ್ನು ಸಾಮಾನ್ಯವಾಗಿ ಮನೆಯ 'ಯಜಮಾನ್ತಿ' (ಹಿರಿಯ ಹೆಂಗಸು) ನೆರವೇರಿಸುತ್ತಾರೆ. 'ಬೊಳ್ಳುಕಲ್ಲು' (ಬಿಳಿಕಲ್ಲು) ಮತ್ತು 'ಚೂರಿಮುಳ್ಳು' (ಒಂದು ಜಾತಿಯ ಮುಳ್ಳು ಗಿಡ) ಮತ್ತು 'ಪುದ್ವಾರ್' ದಿನ ಅನ್ನವನ್ನು ಅಗ್ನಿಗೆ ಕೊಟ್ಟಿದ್ದರ ಬೂದಿಯನ್ನು ಈ ಆಚರಣೆಯ ವೇಳೆ ಬಳಸುತ್ತಾರೆ.

ಸಂಕ್ರಾಂತಿ ದಿನ ಮನೆಯ ಹೆಂಗಸರು ಬೇಗನೆ ಎದ್ದು ದೋಸೆ ಹೊಯ್ಯುತ್ತಾರೆ. ಮೊದಲು 'ಕುಲೆ' (ಪಿತೃ)ಗಳಿಗೆ ಬಡಿಸುತ್ತಾರೆ. ಮನೆಯ ಯಜಮಾನ 'ಬಿತ್ತ್‌ದಮುಡಿ' (ಬಿತ್ತನೆ ಬೀಜದ ಮುಡಿ)ಯನ್ನು ಅಟ್ಟಕ್ಕೆ ಹಾಕುತ್ತಾರೆ. ಹೀಗೆ 'ಬಿತ್ತ್‌ದಮುಡಿ'ಯನ್ನು ಅಟ್ಟಕ್ಕೆ ಹಾಕಿದವರಿಗೆ ಮೊದಲು ದೋಸೆಯನ್ನು ಕೊಡುತ್ತಾರೆ. ನಂತರ ಎಲ್ಲರೂ ದೋಸೆಯನ್ನು ವಿಶೇಷ ತಿನಿಸಾಗಿ ತಿನ್ನುತ್ತಾರೆ. ಉಳಿದಂತೆ ಆ ದಿನ ಕೃಷಿಕರಿಗೆ ರಜಾ ದಿನವಾಗಿರುತ್ತದೆ. ಭೂತ–ನಾಗಗಳಿಗೆ 'ಪರ್ವ' 'ತಂಬಿಲ' ಮೊದಲಾದ ಸೇವೆಗಳನ್ನು ನಡೆಸುತ್ತಾರೆ. ಮಧ್ಯಾಹ್ನ ಎಂದಿನಂತೆ ಸಾಮಾನ್ಯ ಅಡುಗೆ ಮಾಡಿ ಊಟ ಮಾಡುತ್ತಾರೆ. ರಾತ್ರಿ ಮಾತ್ರ ಹೊಸಅಕ್ಕಿಯ ರೊಟ್ಟಿ ಮಾಡಿ ಮೀನು ಇಲ್ಲವೆ ಮಾಂಸದ ಪದಾರ್ಥ ಮಾಡುತ್ತಾರೆ. 'ಕುಲೆ' (ಪಿತೃ)ಗಳಿಗೆ ಬಡಿಸುತ್ತಾರೆ. ನಂತರ ಸಹಭೋಜನ ಮಾಡುತ್ತಾರೆ. ಹೊರಗಿರುವ ಕುಟುಂಬದ ಸದಸ್ಯರು ಈ ದಿನ ಮನೆಗೆ ಬರುತ್ತಾರೆ. ಈ ಆಚರಣೆಯಲ್ಲಿ ಪಾಲ್ಗೊಳ್ಳುತ್ತಾರೆ. ಬೇಟೆಯಾಡುವುದು ಇಲ್ಲವೆ ತೆಂಗಿನಕಾಯಿ ಕುಟ್ಟುವಂತಹ ಕ್ರೀಡೆಗಳಲ್ಲಿ ವಿಶೇಷವಾಗಿ ಸಂಭ್ರಮದಿಂದ ಪಾಲ್ಗೊಳ್ಳುತ್ತಾರೆ. 'ಸಂಕ್ರಾಂತಿದ ಕಟ್ಟ' ಎಂದು ವಿಶೇಷವಾಗಿ ಕೋಳಿ ಅಂಕ ನಡೆಸುತ್ತಾರೆ. ಹುಟ್ಟು ಇಲ್ಲವೆ ಸಾವು ಮುಂತಾದ ಸೂತಕಗಳು ಬಂದರೆ ಈ ಆಚರಣೆಯನ್ನು ಮಾಡುವುದಿಲ್ಲ. ('ಕಾವೂರಿ ಸಂಕ್ರಾಂತಿ' ಆಚರಣೆಗೆ ಸಂಬಂಧಿಸಿದಂತೆ ಅನುಬಂಧ ಪುಟ– Xi ರಲ್ಲಿನ ಚಿತ್ರ–೧.೭.೧ ಮತ್ತು ೧.೭.೨ ಇವುಗಳನ್ನು ಗಮನಿಸಬಹುದು.)

### ೧೦.೩: 'ಕಾವೇರಿ ಸಂಕ್ರಾಂತಿ' ಆಚರಣೆ–ವಿಶ್ಲೇಷಣೆ

'ನಿರ್ನಾಲ' ತಿಂಗಳ ಕೊನೆಯ ದಿನ ಅಂದರೆ 'ಬೊಂತೆಲ್' ಸಂಕ್ರಮಣದಂದು ಬರುವ 'ಕಾವೇರಿ ಸಂಕ್ರಾಂತಿ' ವೇಳೆಗೆ ಏಣೇಲು ಬೆಳೆ ಕಟಾವಾಗಿರುತ್ತದೆ. ಇಲ್ಲವೇ ಕಟಾವಿಗೆ ಬಂದಿರುತ್ತದೆ. ಕೃಷಿಕರು 'ಸುಗ್ಗಿ' ಬೆಳೆ ಬೆಳೆಯುವ ಸಿದ್ಧತೆಯಲ್ಲಿ ಇರುತ್ತಾರೆ. ಕೃಷಿ ಹಿನ್ನೆಲೆಯ ಆಚರಣೆ ಇದಾಗಿದ್ದು, 'ಏಣೇಲು' ಬೆಳೆಯ ಸಂರಕ್ಷಣೆ ಈ ಆಚರಣೆಯ ಹಿಂದಿರುವುದು ಕಂಡುಬರುತ್ತದೆ. ತುಳುನಾಡನ್ನು ಹೊರತುಪಡಿಸಿ ಕರ್ನಾಟಕದಾದ್ಯಂತ ಕಾವೇರಿ ಸಂಕ್ರಾತಿಯನ್ನು

ಕಾವೇರಿ ಸಂಕ್ರಮಣವೆಂದು ಆಚರಿಸುತ್ತಾರೆ. ತುಳುವೇತರರಿಗೆ ಕಾವೇರಿ ಸಂಕ್ರಮಣವೆಂಬುದು ಕೊಡಗಿನ ಜೀವನದಿ ಕಾವೇರಿಯ ಉಗಮ ದಿನಕ್ಕೆ ಸಂಬಂಧಿಸಿದ ವಿಶಿಷ್ಟ ಆಚರಣೆಯಾಗಿದೆ. ಆದರೆ ತುಳುವರ 'ಕಾವೇರಿ ಸಂಕ್ರಾಂತಿ' ಆಚರಣೆಯ ನಂಬಿಕೆಯೇ ಬೇರೆ. ಭತ್ತ, ಬೈ ಹುಲ್ಲು ರಾಶಿಗೆ 'ಕಲ್ಲು-ಮುಳ್ಳು-ವಿಭೂತಿ' ಇಡುವ ಆಚರಣೆಯಿಂದಲೇ 'ಕಾವೊರಿ ಸಂಕ್ರಾಂತಿ' ಆಚರಣೆ ಕೃಷಿ ಆಚರಣೆ ಎಂಬುದು ಸ್ಪಷ್ಟವಾಗುತ್ತದೆ.

'ಕಾವೊರಿ' ಎಂದರೆ ತುಳುವರ ನಂಬಿಕೆ ಪ್ರಕಾರ 'ಬಲಿ ಚಕ್ರವರ್ತಿ'ಯ ತಾಯಿಯಂತೆ. 'ಕಾವೊರಿ ಸಂಕ್ರಾಂತಿ' ದಿನ ಆಕೆ ತುಳುನಾಡಿಗೆ ಬರುತ್ತಾಳೆ. ಬರುವಾಗ ಭತ್ತ, ಬೈಹುಲ್ಲು ಇತ್ಯಾದಿ ಬೇಸಾಯದಿಂದ ಬಂದ ಬೆಳೆಯ ರಾಶಿಗೆಲ್ಲ ಮೆಟ್ಟಿಕೊಂಡು ಹೋಗಬಾರದು ಎಂಬ ನೆಲೆಯಲ್ಲಿ 'ಕಲ್ಲು-ಮುಳ್ಳು' ಮತ್ತು 'ವಿಭೂತಿ'ಯ 'ಬರೆ' ಹಾಕುವ ಕ್ರಮ ಬಂದಿದೆ ಎಂಬುದು ನಂಬಿಕೆ. ಎರಡನೆಯದಾಗಿ "ಸಂಕ್ರಮಣದ ರಾತ್ರಿ ಉರವ ಬಂದು ಭತ್ತದ ರಾಶಿಯನ್ನು ಜಳ್ಳುಗೊಳಿಸುತ್ತಾನೆ ಇಲ್ಲವೇ ಕಡಿಮೆಗೊಳಿಸುತ್ತಾನೆ ಎಂಬ ಪ್ರತೀತಿ ಇದೆ. ಉರವ ಎಂದರೆ ಉರಗ. ತುಳುವರು ನಾಗಾರಾಧಕರು. ನಾಗ ಆ ದಿನ ಬರುತ್ತಾನೆ ಎಂಬ ನಂಬಿಕೆ. ಅದಕ್ಕಾಗಿ ಭತ್ತದ ರಾಶಿಗೆ, ಪೈರಿನ ರಾಶಿಗೆ, ಬೈಹುಲ್ಲಿನ ರಾಶಿಗೂ ಕೂಡಾ ಸಣ್ಣ ಸಣ್ಣ ಬಿಳಿಯ ಕಲ್ಲು, ಚೂರಿ ಮುಳ್ಳನ್ನು ಇಟ್ಟು ಬಿಡುತ್ತಾರೆ."[3] ಎಂಬ ನಂಬಿಕೆಯೂ ಇದೆ. ಮೂರನೆಯದಾಗಿ ಕೊಡಗಿನ ಕಾವೇರಿಗೆ ತೀರ್ಥಸ್ನಾನಕ್ಕೆಂದು ಹೋದ 'ಬಿಲ್ಲವ'ನೊಬ್ಬ 'ಮೂರ್ತೆ' (ಕಳ್ಳು ತೆಗೆಯಲು)ಗೆ ತಡವಾಯಿತೆಂದು ಕಾವೇರಿಯಿಂದ ಎದ್ದು ಬಿದ್ದು ಹೊಲ, ಬೆಳೆ ಎನ್ನದೆ ಓಡೋಡಿ ಬಂದನಂತೆ. ಆಗ ಹೊಲದಲ್ಲಿದ್ದ ಭತ್ತದ ಬೆಳೆ ನಾಶವಾಯಿತಂತೆ. ಹಾಗಾಗಿ ಭತ್ತವನ್ನು ರಕ್ಷಿಸುವ ಸಂಕೇತವಾಗಿ 'ಕಾವೇರಿ ಸಂಕ್ರಾಂತಿ'ಯಂದು ಬೆಳೆಗೆ 'ಕಲ್ಲು-ಮುಳ್ಳು' ಇಡುವ ಕ್ರಮ ಅನುಷ್ಠಾನದಲ್ಲಿ ಬಂದಿದೆ ಎಂಬುದೂ ತಿಳಿಯುತ್ತದೆ.

ತುಳುವರ ಈ ಮೂರು ಐತಿಹ್ಯಗಳಲ್ಲೂ ಆಚರಣೆಯ ಉದ್ದೇಶವಿರುವುದು 'ಏಣೇಲು' ಬೆಳೆಯ ಸಂರಕ್ಷಣೆ. ಮಳೆಗಾಲದಲ್ಲಿ ಕಷ್ಟಪಟ್ಟು ಬೆಳೆದ ಬೆಳೆ 'ಕಾವೊರಿ ಸಂಕ್ರಮಣ'ದ ವೇಳೆ ಸಾಮಾನ್ಯವಾಗಿ ಮನೆಗೆ ಬಂದಿರುತ್ತದೆ. ಇಂತಹ ಬೆಳೆಯನ್ನು ಜೋಪಾನವಾಗಿ ಕಾಯ್ದುಕೊಳ್ಳುವುದು ರೈತನ ಕಾಳಜಿಯಾಗಿ ಕಂಡುಬರುತ್ತದೆ. ಸಂಕ್ರಾಂತಿಯಂದು ಬರುತ್ತಾರೆ ಎಂದು ನಂಬುವ 'ಕಾವೊರಿಯಮ್ಮ' ಇರಬಹುದು, 'ಬಿಲ್ಲವ'ನಿರಬಹುದು ಇಲ್ಲವೆ 'ನಾಗರ'ವಿರಬಹುದು. ಇದರಿಂದ ಬೆಳೆ ನಷ್ಟವಾಗುತ್ತದೆ ಎಂಬ ನಂಬಿಕೆಯೇ ಈ ಆಚರಣೆಯ ಹಿಂದಿರುವ ಉದ್ದೇಶವಾಗಿ ಕಂಡುಬರುತ್ತದೆ. ಆದಾಗ್ಯೂ ಈ ಮೂರು ಐತಿಹ್ಯಗಳಲ್ಲಿ ಉರಗ

(ನಾಗ)ನ ವಿಷಯ ಗಮನಾರ್ಹವಾದುದು. ಈ ನಾಗಗಳು ಭತ್ತದ ರಾಶಿಯನ್ನು 'ಜಳ್ಳು'ಗೊಳಿಸುವುದು ಇಲ್ಲವೆ ಕಡಿಮೆಗೊಳಿಸುವ ವಿಚಾರವನ್ನು ನಂಬಬಹುದಾಗಿದೆ. ಹಾಗಾಗಿ 'ಕಲ್ಲು-ಮುಳ್ಳು' ಇಡುವ ಪದ್ಧತಿ ಬಂದಿರಬೇಕು. ಕಲ್ಲು ಕೂಡ ಬಿಳಿಯ ಕಲ್ಲು. ಬಳಿಯ ಕಲ್ಲಿಗೆ ವಿಷವನ್ನು ಹೀರುವ ಗುಣವಿರುವುದನ್ನು ಜಾನಪದರು ಕಂಡು ಕೊಂಡಿದ್ದಾರೆ. ಹಾಗಾಗಿ ಬಿಳಿಯ ಕಲ್ಲು ವಿಷ ನಿವಾರಣೆಯ ಸಂಕೇತವಾಗಿಯೂ ನಿಲ್ಲುತ್ತದೆ. ಇನ್ನು ಮುಳ್ಳು ಅಂದರೆ ಎಲ್ಲ ಮುಳ್ಳುಗಳಾಗುವುದಿಲ್ಲ. 'ಚೂರಿಮುಳ್ಳ'ನ್ನೇ ಬಳಸುತ್ತಾರೆ. 'ಚೂರಿಮುಳ್ಳು' ಕೂಡ ಹಾವುಗಳಿಗೆ ವಿರೋಧ. ಹಾಗೆಯೇ 'ವಿಭೂತಿ' ಕೂಡ ಬಹಳ ಖಾರ. ಹಾಗಾಗಿ ವಿಭೂತಿಯಿಂದಲೂ ಹಾವುಗಳು ದೂರವಿರುತ್ತವೆ. ಈ 'ವಿಭೂತಿ' ಮಾತ್ರ 'ಪುದ್ವಾರ್' ಊಟದ ದಿನ ಅನ್ನವನ್ನು 'ಅಗ್ಗಿಷ್ಟ'ಕ್ಕೆ ಕೊಟ್ಟಿದ್ದರ ಬೂದಿಯಾಗಿರುತ್ತದೆ. ಅದನ್ನು ಜೋಪಾನವಾಗಿ ತೆಗೆದಿಟ್ಟುಕೊಂಡು 'ಕಾವೊರಿ ಸಂಕ್ರಮಣ'ದಂದು ಈ ರೀತಿ ಭತ್ತದ ರಾಶಿಗೆ 'ಕಲ್ಲು-ಮುಳ್ಳು' ಇಡುವಾಗ ಮೂರು ನಾಮದಂತೆ (ಬರೆ) ಹಾಕುತ್ತಾರೆ. ಅಂದರೆ 'ಪುದ್ವಾರ್' ದಿನ ತಯಾರಿಸಿದ ಹೊಸಅಕ್ಕಿಯ 'ವಿಭೂತಿ'ಗೆ ವಿಶಿಷ್ಟ ಪಾವಿತ್ರ್ಯತೆಯಿದೆ ಎಂಬುದು ಜನಪದರ ನಂಬಿಕೆ. ಹೊಸಅಕ್ಕಿಯ ಉತ್ಪನ್ನವನ್ನೇ ಹೊಸಬೆಳೆಯನ್ನು ರಕ್ಷಿಸಿಕೊಳ್ಳಲು ಬಳಸಿಕೊಳ್ಳುವ ವಿಧಾನ ಗಮನಾರ್ಹ. ಒಂದು ವೇಳೆ ಕಾವೇರಿ ಸಂಕ್ರಾಂತಿಯ ದಿನಕ್ಕೆ ಕೊಯ್ಲು ಆಗಿರದಿದ್ದರೆ ಕೆಲವರು ಭತ್ತದ ಗದ್ದೆಗೇ ಕಲ್ಲು-ಮುಳ್ಳು ಇಡುತ್ತಾರೆ.

'ಕಾವೊರಿ ಸಂಕ್ರಾಂತಿ'ಯಂದು ಬೆಳಿಗ್ಗೆ 'ಬಿತ್ತ್‌ದಮುಡಿ'ಯನ್ನು (ಬಿತ್ತನೆ ಬೀಜ) ಅಟ್ಟಕ್ಕೆ ಹಾಕುವ ಕ್ರಮದ ಬಗ್ಗೆ ಹೇಳಿದೆ. ಈ ಕುರಿತು ಡಾ.ವಾಮನ ನಂದಾವರ ಅವರು ಹೀಗೆ ಹೇಳುತ್ತಾರೆ-"ಒಣಗಿಸಿ ಮುಡಿ ಕಟ್ಟಿ ಇಟ್ಟ ಬೀಜದ (ಭತ್ತದ) ಮುಡಿಯನ್ನು ಅಂದು ಅಟ್ಟದಲ್ಲಿ ಇಡುತ್ತಾರೆ. ಮುಂದಿನ ವರ್ಷಕ್ಕಾಗಿ ಹೀಗೆ ಬೀಜ ಸಂಗ್ರಹಿಸಿಡುವುದೆ 'ಬಿತ್ತ್ ಅಟ್ಟೊಗು ಪಾಡುನಿ' ಅಥವಾ 'ಕುರುಂಟು ಅಟ್ಟೊಗು ಪಾಡುನಿ' (ಕುರುಂಟು ಅಟ್ಟಕ್ಕೆ ಹಾಕುವುದು) ಹಿಂದಿನ ದಿನ ಮುಡಿ ಕಟ್ಟಿ ಇಡುತ್ತಾರೆ.

ಮರುದಿನ ಬೆಳಗ್ಗೆ ಸೂರ್ಯೋದಯಕ್ಕೆ ಮೊದಲ (ಪುಲ್ಯೊಕ್ಕೊಲ) ಜಾವದಲ್ಲಿ ಎದ್ದು ಮನೆಯ ಯಜಮಾನ ಹಾಗೂ ಉಳಿದ ಗಂಡಸರು ಇಲ್ಲವಾದರೆ ಹೆಂಗಸರು ಕೂಡಿ ಮುಡಿಯನ್ನು ಅಟ್ಟಕ್ಕೇರಿಸುತ್ತಾರೆ. ಎಲ್ಲ ಮುಡಿಗಳನ್ನು ಅಂದು ಅಟ್ಟಕ್ಕಿಡಲು ಸಾಧ್ಯವಾಗದೆ ಹೋಗಬಹುದು. ಆಗ ಸಾಂಕೇತಿಕವಾಗಿ ಒಂದು ಮುಡಿಯನ್ನು ಮಾತ್ರ ಹಾಕುತ್ತಾರೆ. ಆ ದಿನ ಬೀಜಗಳನ್ನು ಸಂಗ್ರಹಿಸಿ ತೆಗೆದಿರಿಸಲು ಪ್ರಶಸ್ತವಾದ ದಿನ. ಹೆಚ್ಚಾಗಿ ರೋಹಿಣಿ, ಮೃಗಶಿರಾ

ನಕ್ಷತ್ರಗಳು ದೊರೆಯವುದುಂಟು. ಇವು ಸರ್ಪಸರ್ಪಿಣಿ ನಕ್ಷತ್ರಗಳು. ರೋಹಿಣಿಯ ಕೊನೆ (ಸರ್ಪಿಣಿಯ ಬಾಲ) ಮೃಗಶಿರೆಯ ಆರಂಭ (ಸರ್ಪದ ತಲೆ) ಈ ನಡುವಿನ ಕಾಲಭಾಗ ಸುಭದ್ರ ತಳಹದಿಯ ಕಾಲ. ಸರ್ಪಸರ್ಪಿಣಿ ಕಾವಲಿರುವುದರಿಂದ ಇಲಿ ಹೆಗ್ಗಣ (ಎಲಿ ಪೆರ್ಗುಡೆ) ಮುಟ್ಟವು, ಬಾಯಿ ಹಾಕವು ಎಂಬ ತಿಳುವಳಿಕೆ ತುಳು ಜನರದು.

ಬೀಜ ಅಟ್ಟಕ್ಕೆ ಹಾಕಿದ ಬಳಿಕ ಎಲ್ಲರೂ 'ಮಣ್ಣಿ' ತಿನ್ನುತ್ತಾರೆ. ಕಾವೇರಿ ಸಂಕ್ರಮಣಕ್ಕೆ ಮಣ್ಣಿ ಅವಶ್ಯ ಮಾಡಬೇಕು. ಆ ದಿನ ಗದ್ದೆ ಉಳುಮೆಗೆ ವಿರಾಮವಾದ್ದರಿಂದ ಬೈ ಹುಲ್ಲಿನಿಂದ ಹಗ್ಗ ಬಿಡುವ, ಮುಡಿ ಕಟ್ಟುವ ಕೆಲಸಗಳಲ್ಲಿ ರೈತರು ನಿರತರಾಗಿರುತ್ತಾರೆ. ತುಲಾ ಸಂಕ್ರಮಣಕ್ಕೆ ತಲ ಕಾವೇರಿಯಲ್ಲಿ ನೀರುಕ್ಕಿ ಬರುವುದರಿಂದ ಬೆಲೆಸಲೆಯೂ ಹಾಗೆಯೇ ಉಕ್ಕಿ ಬರಲಿ, ಸಮೃದ್ಧವಾಗಲಿ ಎಂಬ ಆಶಯದಿಂದ ಅಂದು ಬೀಜ ಸಂಗ್ರಹ ಕಾರ್ಯ ನಡೆಯುತ್ತಿದೆಯೆನ್ನಬಹುದು"[೩] ಎಂಬ ಮಾತಿನಲ್ಲಿ ಈ ಅಚರಣೆ ಬೇಸಾಯದ ಬಿತ್ತನೆ ಬೀಜ ಮತ್ತು ಫಸಲನ್ನು ಸುರಕ್ಷಿತವಾಗಿಡುವ ಹಿನ್ನೆಲೆಯಲ್ಲಿ ಹುಟ್ಟಿಕೊಂಡಿರಬಹುದಾದ ಬಗ್ಗೆ ಸುಳಿವು ವ್ಯಕ್ತವಾಗುತ್ತದೆ.

'ಕಾವೇರಿ ಸಂಕ್ರಮಣ'ದ ದಿನ ಬೆಳಿಗ್ಗೆ ಸಾಮಾನ್ಯವಾಗಿ ತುಳುನಾಡಿನಲ್ಲಿ ದೋಸೆ ಮಾಡುತ್ತಾರೆ. 'ಮಣ್ಣಿ'ಯನ್ನೂ ಮಾಡುವವರಿದ್ದಾರೆ. ಆದರೆ ಹೆಚ್ಚಾಗಿ 'ಮಣ್ಣಿ' 'ಕುರಲ್‌ಪರ್ಬ' ಮತ್ತು 'ಪುದ್ವಾರ್' ದಿನಗಳಲ್ಲಿ ಅವಶ್ಯವಾಗಿ ಮಾಡುವುದು ಕಂಡುಬರುತ್ತದೆ. ('ಮಣ್ಣಿ' ಎಂದರೆ ಅನ್ನದ ನೀರಿನಿಂದ (ತೆಲಿ) ಮಾಡುವ ತಿಂಡಿ)

ಡಾ.ಇಂದಿರಾ ಹೆಗ್ಗಡೆಯವರು "ಕಾವೇರಿ ಸಂಕ್ರಮಣ ಕಾಲಕ್ಕೆ ಮನೆ ತುಂಬಾ ಭತ್ತ ಶೇಖರವಾಗುತ್ತದೆ. ಸಂಕ್ರಾತಿಯ ದಿವಸ ಈ ಭತ್ತದ ರಾಶಿಯನ್ನು ಕಬ್ಬಿಣ ಹಾಗೂ ಕಾಸರಕನ ಮುಳ್ಳನ್ನು ಮೂಲದವರು ಅಥವಾ ಇತರರು ಚುಚ್ಚುತ್ತಾರೆ. ಈ ರೀತಿ ಮಾಡಲಿಲ್ಲವಾದರೆ ಸಂಗ್ರಹವಾದ ಭತ್ತವೆಲ್ಲ ತಲಕಾವೇರಿಗೆ ಹೋಗಿ ಸೇರುತ್ತದೆ ಎಂದು ನಂಬಲಾಗುತ್ತದೆ" ಎನ್ನುತ್ತಾರೆ.[೪]

ಅವರು ಮುಂದುವರಿಸಿ "ಆ ದಿವಸ ಬೇಯಿಸಿದ ಭತ್ತ ಅಕ್ಕಿಯಾಗದೆ ಉಳಿದಿರಬಾರದು. ರಾತ್ರಿ ಅಕ್ಕಿ ರುಬ್ಬಿ ಕಾಯಿ, ಹಾಲು, ಬೆಲ್ಲ ಹಾಕಿ ಕುದಿಸಿ ಅಗಲ ಮೊರಗಳಲ್ಲಿ ಬಾಳೆಯ ಎಲೆ ಹಾಕಿ ಕುದಿಸಿದ ಓಟ್ಟನ್ನು ಸುರುವುತ್ತಾರೆ. ಇದು ರುಚಿಯಾದ ಹಲ್ವ ಆಗುತ್ತದೆ. ಇದನ್ನು 'ಮನ್ನಿ' ಎಂದು ಕರೆಯುತ್ತಾರೆ. ಸಂಕ್ರಾಂತಿಯ ಬೆಳಿಗ್ಗೆ ದೈವಗಳಿಗೆ ವಿಶೇಷ ಪೂಜೆ ಇರುತ್ತದೆ. ದೈವಾರಾಧನೆ ಎಲ್ಲಾ ಸಂಕ್ರಾಂತಿಗಳಿಗೂ ಇದೆ" ಎಂಬುದಾಗಿ ಹೇಳುತ್ತಾರೆ.[೫] ಇಲ್ಲಿನ ಮಾಹಿತಿಯ

ಪ್ರಕಾರ ಭತ್ತದ ರಾಶಿಗೆ ಕಲ್ಲು ಮತ್ತು 'ಚೂರಿಮುಳ್ಳಿ'ನ ಬದಲು ಕಬ್ಬಿಣ ಮತ್ತು 'ಕಾಸರಕನ ಮುಳ್ಳು' ಇಡುವ ವಿಚಾರ ತಿಳಿಯುತ್ತದೆ. ಅಂತೆಯೇ ಈ ರೀತಿ ಮಾಡದಿದ್ದರೆ ಭತ್ತವೆಲ್ಲ ತಲಕಾವೇರಿಗೆ ಹೋಗಿ ಸೇರುತ್ತದೆ ಎಂಬ ನಂಬಿಕೆಯೂ ವ್ಯಕ್ತವಾಗಿದೆ. ಆದರೆ ಎಲ್ಲ ರೀತಿಯ ಆಚರಣೆ ಮತ್ತು ನಂಬಿಕೆಗಳ ಆಶಯ ಮಾತ್ರ ಒಂದೇ ಆಗಿದೆ. ಅಂದರೆ ಭತ್ತವನ್ನು ಉಳಿಸಿಕೊಳ್ಳುವ ಮುಂಜಾಗ್ರತಾ ಕ್ರಮವಾಗಿದೆ.

"ಕಾವೇರಿ ಸಂಕ್ರಮಣದ ದಿನ ಗದ್ದೆಯಲ್ಲಾಗಲೀ, ಅಂಗಳದಲ್ಲಾಗಲೀ ಕೊಯ್ದ ಪೈರು ಇಡಬಾರದು. ಕೊಯ್ದಾದುದನ್ನು ಹೊಡೆದು ರಾಶಿ ಹಾಕಿ ಅದರ ಮೇಲೆ ಚೂರಿ ಮುಳ್ಳು ಹಾಕಿಡುವ ಕ್ರಮವಿದೆ. ಯಾಕೆಂದರೆ ಕಾವೇರಿ ಸಂಕ್ರಮಣದೊಳಗೆ ಶ್ರದ್ಧೆಯಿಂದ ನಿಗಾವಿಹಿಸಿ ಭತ್ತದ ಕೃಷಿಯನ್ನು ಮಾಡುವವರಿಗೆ ಎಲ್ಲಾ ಕೆಲಸಗಳು ಮುಗಿದಿರುತ್ತವೆ. ಈ ಸಂದರ್ಭದಲ್ಲಿ ಕಾವೇರಿಯಲ್ಲಿ ಭತ್ತದ ಕಣಜ ತುಂಬಿರುತ್ತದೆ. ಒಂದು ವೇಳೆ ತುಂಬಿರದೇ ಇದ್ದರೆ ಆಗ ದೇವರು ಕೊಡಗಿನ ಕೊರಗನನ್ನು ಕಳುಹಿಸಿ ಎಲ್ಲಿಯಾದರೂ ಅಂಗಳ ಅಥವಾ ಗದ್ದೆಯಲ್ಲಿ ಹೊಡೆಯದೆ ಬಿಟ್ಟ ಪೈರು ಇದ್ದರೆ ತಂದು ಕಣಜವನ್ನು ತುಂಬಿಸಲು ಕಳಿಸುತ್ತಾರೆ. ಅದಕ್ಕೋಸ್ಕರ ಕಾವೇರಿ ಸಂಕ್ರಮಣದ ಮುನ್ನ ದಿನ ಸಂಜೆಯೊಳಗೆ ಭತ್ತ ಕೊಯ್ಯುವ ಮತ್ತು ಹೊಡೆಯುವ ಕೆಲಸವನ್ನು ಒಂದು ಹಂತಕ್ಕೆ ಮುಟ್ಟಿಸುತ್ತಾರೆ" ಎಂಬ ಇನ್ನೊಂದು ನಂಬಿಕೆಯೂ ಕಂಡುಬರುತ್ತದೆ.[೬] 'ತುಳು ಸಂಸ್ಕೃತಿದ ಪೊಲಬು'[೭] ಎಂಬ ತುಳು ಕೃತಿಯಲ್ಲಿಯೂ 'ಕಾವೇರಿ ಸಂಕ್ರಾಂತಿ'ಯ ಬಗ್ಗೆ ಇದೇ ರೀತಿಯ ಮಾಹಿತಿಯಿರುವುದನ್ನು ಗಮನಿಸಬಹುದು.

ಇದೇ ನಂಬಿಕೆಯ ಬಗ್ಗೆ ಬನ್ನಂಜೆ ಬಾಬು ಅಮೀನ್ ಅವರೂ ಪ್ರಸ್ತಾಪಿಸುತ್ತಾ ಈ ದಿನ ಮನೆಮನೆಗಳಲ್ಲಿ ರಾಶಿರಾಶಿಯಾಗಿರುವ ಭತ್ತವು ಕಾವೇರಿಗೆ ಹೋಗುವುದೆಂಬ ಅನಾದಿ ಕಾಲದ ನಂಬಿಕೆಯ ಕಾರಣಕ್ಕಾಗಿಯೇ ಆ ದಿನ ಭತ್ತದ ರಾಶಿಗಾಗಲಿ, ಪೈರಿನ ರಾಶಿಗಾಗಲಿ ಕೈ ಹಾಕುವುದಿಲ್ಲ. ಹಾರೆ, ಗುದ್ದಲಿ, ಕತ್ತಿಗಳಿಂದ ಭೂಮಿಯನ್ನು ಅಗೆಯುವ ಕೆಲಸ ಮಾಡುವುದಿಲ್ಲ. ಉಳುಮೆ ಮಾಡುವುದೂ ಸಲ್ಲದು. ಬೇಸಾಯಕ್ಕೆ ಪೂರ್ತಿ ಬಿಡುವಾದ್ದರಿಂದ ಊರ ಆರಾಧನಾ ಸ್ಥಳಗಳಿಗೆ ಜನ ಹೋದರೆ ಕೆಲವರು ಕಾವೇರಿ ನದಿಯ ಉಗಮ ಸ್ಥಳ 'ತಲಕಾವೇರಿ'ಗೆ ಹೋಗುತ್ತಾರೆ ಎಂದು ಹೇಳುತ್ತಾರೆ.[೮]

ಇಷ್ಟಾಗಿಯೂ ತುಲಾ ಸಂಕ್ರಮಣಕ್ಕೂ ಕಾವೇರಿಗೂ ಏನು ಸಂಬಂಧ? ಮತ್ತು 'ಕಾವೇರಿ ಸಂಕ್ರಮಣ'ಕ್ಕೂ ತುಳು ನಾಡಿಗೂ ಏನು ಸಂಬಂಧ? ಎಂಬ ಪ್ರಶ್ನೆಗಳು ಉದ್ಭವಿಸುತ್ತವೆ. ವಿದ್ವಾಂಸರೋರ್ವರ ಅಭಿಪ್ರಾಯದ ಪ್ರಕಾರ ಸೂರ್ಯನು ತುಲಾ ರಾಶಿಯನ್ನು ಪ್ರವೇಶಿಸುವ

ತುಲಾ ಸಂಕ್ರಮಣದ ಸುಮುಹೂರ್ತದಲ್ಲಿ ಕೊಡಗಿನ ತಲಕಾವೇರಿಯ ಕುಂಡದಲ್ಲಿ ಕಾವೇರಿ ಉದ್ಭವಿಸುತ್ತಾಳೆ ಎಂಬ ಪ್ರತೀತಿ ಇದೆ. ಈ ಸಂದರ್ಭದಲ್ಲಿ ದೂರದ ಊರುಗಳಿಂದ ಸಾವಿರಾರು ಭಕ್ತರು ಈ ಸನ್ನಿವೇಶವನ್ನು ವೀಕ್ಷಿಸಲು ತಲಕಾವೇರಿಗೆ ಆಗಮಿಸುತ್ತಾರೆ. ತೀರ್ಥಸ್ನಾನ ಮಾಡಿ ಪುನೀತರಾಗುತ್ತಾರೆ. ಹಾಗಾಗಿ ತಲಕಾವೇರಿಯಲ್ಲಿ ಆ ದಿನ ದೊಡ್ಡ ಜಾತ್ರೆ ನಡೆಯುತ್ತದೆ.[*]

ಹಾಗಾಗಿ ಕೊಡಗಿನಲ್ಲಿ 'ಕಾವೇರಿ ಸಂಕ್ರಾಂತಿ' ಆಚರಣೆಗೆ ಸ್ಪಷ್ಟಾರ್ಥ ಕಂಡು ಬರುತ್ತದೆ. ಆದರೆ ತುಳುನಾಡಿನಲ್ಲಿ ಈ ಆಚರಣೆ ಕೃಷಿ ಸಂಬಂಧವಾಗಿ ಅದೇ ಹೆಸರಿನಲ್ಲಿ ಆಚರಣೆಯಲ್ಲಿ ಬರಲು ಕಾರಣವೇನು? ಎಂಬ ಪ್ರಶ್ನೆ ಸಹಜವಾಗಿಯೇ ಏಳುತ್ತದೆ. ಬಹುಷ: ತುಲಾ ಸಂಕ್ರಮಣಕ್ಕೆ ತುಳುನಾಡಿನಲ್ಲೂ ಕೊಡವನಾಡಿನಲ್ಲೂ ಮೊದಲಿನಿಂದಲೂ ಮಹತ್ವವಿದ್ದಿರಬೇಕು. ಕೊಡಗಿನಲ್ಲಿ ತಲಕಾವೇರಿಯಲ್ಲಿ ಆ ದಿನ ಕಾವೇರಿ ಉದ್ಭವ. ಆದ್ದರಿಂದ ಅವರು 'ಕಾವೇರಿ ಸಂಕ್ರಮಣ'ವನ್ನು ಆಚರಿಸತೊಡಗಿರುವುದು ಸ್ಪಷ್ಟವಾಗಿಯೇ ಇದೆ. ಇತ್ತ ತುಳು ನಾಡಿನಲ್ಲಿ ಆ ದಿನ 'ಬಲಿ ಚಕ್ರವರ್ತಿ'ಯ ತಾಯಿ ಬರುತ್ತಾಳೆ ಎಂಬ ನಂಬಿಕೆ. ಆ ತಾಯಿಯ ಹೆಸರು 'ಕಾವೊರಿ' (ಕಾವೇರಿ) ಎಂಬುದು ತುಳುನಾಡಿನವರ ನಂಬಿಕೆಯಾಗಿರುವುದರಿಂದ 'ಕಾವೇರಿ ಸಂಕ್ರಮಣ' ಆಚರಣೆಯ ಹೆಸರಿಗೆ ಅರ್ಥ ಬರುತ್ತದೆ. ಆದಾಗ್ಯೂ ಈ ಆಚರಣೆಗೆ ಸಂಬಂಧಿಸಿದ ಉಳಿದೆಲ್ಲ ಐತಿಹ್ಯಗಳಲ್ಲಿ ಕಾವೇರಿ ನದಿಯ ವಿಚಾರ ಬರುತ್ತದೆ. ಆದರೆ ತುಳುನಾಡಿಗೂ ಕಾವೇರಿ ನದಿಗೂ ಸಂಬಂಧ ಕಂಡುಬರುವುದಿಲ್ಲ. ಈ ಹಿನ್ನಲೆಯಲ್ಲಿ ಯೋಚಿಸುವಾಗ ಬಹುಷ: ಕೊಡಗು ಮತ್ತು ತುಳುನಾಡು ಪ್ರಾದೇಶಿಕವಾಗಿ ಹತ್ತಿರ ಹತ್ತಿರದಲ್ಲಿರುವುದರಿಂದ ಪರಸ್ಪರ ಸಾಂಸ್ಕೃತಿಕ ಪ್ರಭಾವಕ್ಕೊಳಗಾಗಿ ಕೊಡು ಕೊಳ್ಳುವಿಕೆಗಳಾಗಿರುವ ಸಾಧ್ಯತೆಗಳಿವೆ. ಈ ಹಿನ್ನೆಲೆಯಲ್ಲಿ ತುಳುವರು ತುಲಾ ಸಂಕ್ರಮಣದ ವಿಶೇಷ ದಿನದಂದು ಆಚರಿಸುವ ಆಚರಣೆಗೆ ಕೊಡಗಿನವರ ಕಾವೇರಿ ಹೆಸರಿನ ಸಂಕ್ರಮಣದ ಪ್ರಭಾವದಿಂದ ಆ ಹೆಸರೇ ಬಂದಿರಲೂಬಹುದು. ಆದರೆ ಉಳಿದೆಲ್ಲ ಐತಿಹ್ಯಗಳಿಗಿಂತ ಮುಖ್ಯವಾಗಿ ಆ ದಿನದ ಆಚರಣೆಯ ಭಾಗವನ್ನು ಗಮನಿಸಿದರೆ ನಾಗಗಳಿಗೆ ಸಂಬಂಧಿಸಿದ ಐತಿಹ್ಯವೇ ಹೆಚ್ಚು ಪ್ರಶಸ್ತವಾಗಿರುವಂತಿದೆ. ಆ ದಿನದ ಆಚರಣೆಗೆ 'ಕಾವೇರಿ ಸಂಕ್ರಮಣ' ಹೆಸರು ಬಂದಿರುವುದು ಬಹುತೇಕ ಕೊಡಗಿನ ಆಚರಣೆಯ ಹೆಸರಿನ ಪ್ರಭಾವದಿಂದಲೇ ಎಂಬುದನ್ನು ಈ ಕುರಿತು ಸ್ಪಷ್ಟವಾದ ಉತ್ತರ ದೊರೆಯುವವರೆಗೆ ಅನ್ವಯಿಸಬೇಕಾಗುತ್ತದೆ. ಪುರಾಣಗಳಲ್ಲೂ 'ಬಲಿ'ಯ ತಾಯಿಯ ಹೆಸರು 'ಕಾವೇರಿ' ಇಲ್ಲವೆ 'ಕಾವೊರಿ' ಎಂಬ ಬಗ್ಗೆ ಎಲ್ಲೂ ಉಲ್ಲೇಖಗಳಿಲ್ಲದ್ದರಿಂದ ಇದೂ ಜನಪದರ ನಂಬಿಕೆಯ

ವಿಷಯವಾಗಿರಬಹುದು. ಆದಾಗ್ಯೂ ಆ ದಿನ ಬಲಿಯ ತಾಯಿ ಭೂಮಿಗೆ ಬರುವ ಐತಿಹ್ಯ ವಿಚಾರಾರ್ಹವಾಗಿ ಕಂಡುಬರುತ್ತದೆ.

ವಿದ್ವಾಂಸರ ಪ್ರಕಾರ, 'ಕಾವೇರಿ ಸಂಕ್ರಾಂತಿ'ಯ ದಿನ ಒಂದು ಕುಣಿತ ನಡೆಯುತ್ತದೆ. ವೇಷದವರು ಸನ್ಯಾಸಿಯ ವೇಷ ಧರಿಸಿ ಬಗಲಲ್ಲಿ ಜೋಳಿಗೆ ಹಾಕಿಕೊಂಡು "ಜೋಗಿ ಬಂದಾ, ಕಾವೇರಿ ಜಾತ್ರೆಗೆ ಹೋಗುವ ಜೋಗಿ ಬಂದಾ" ಎನ್ನುತ್ತಾ ಮನೆ ಮನೆಗೆ ಹೋಗುತ್ತಾರಂತೆ. ಮಾತ್ರವಲ್ಲ, ಮಳೆಗಾಲದಲ್ಲಿ ನಿಂತು ಹೋದ ಭೂತದ ಸೇವೆಗಳು ಅಂದು ಪ್ರಾರಂಭವಾಗುತ್ತವಂತೆ. ಸಣ್ಣ ಸಣ್ಣ ಕಾಡು ಭೂತಗಳಿಗೆ ಆ ದಿನ ರಾತ್ರಿ ಎಡೆ ಬಡಿಸಲಾಗುತ್ತದೆ.[೧೦] ಇಲ್ಲಿ ಜೋಗಿಯ ವಿಚಾರ ಹೊಸತು ಮತ್ತು ಇಲ್ಲಿಯೂ ಕಾವೇರಿಗೆ ಹೋಗುವ ವಿಷಯ ಪ್ರಸ್ತಾಪವಾಗಿದೆ. ಒಟ್ಟಿನಲ್ಲಿ ಈ ಆಚರಣೆಯೂ ತುಳುನಾಡಿಗೆ ಸಂಬಂಧಿಸಿದಂತೆ ಒಂದು ಗಡುವು ಆಗಿ ಕಂಡು ಬರುತ್ತದೆ. ಏಣೇಲು ಬೆಳೆಯ ಕೊಯ್ಲು, ಕುರಲ್ ಕಟ್ಟುವುದು ಮತ್ತು ಪುದ್ವಾರ್ ಆಚರಣೆ ಮೊದಲಾದವುಗಳನ್ನು ಈ 'ಕಾವೇರಿ ಸಂಕ್ರಾಂತಿ' ಆಚರಣೆಯೊಳಗೆ ಸಮರ್ಪಕವಾಗಿ ಮುಗಿಸಬೇಕಾಗುತ್ತದೆ. ಬಿತ್ತನೆ ಬೀಜವನ್ನು ಮತ್ತು ಉಳಿದ ಬೆಳೆಯನ್ನೂ ಪ್ರತ್ಯೇಕ ಪ್ರತ್ಯೇಕವಾಗಿ ವಿಂಗಡಿಸಿ 'ಮುಡಿ'ಕಟ್ಟಿ ಜೋಪಾನವಾಗಿ ಅಡುಗೆಮನೆಯ ಅಟ್ಟದಲ್ಲಿಟ್ಟು ಹೊಗೆಯ ಕಾವಿಗೆ ಸುರಕ್ಷಿತವಾಗಿ ಕಾಯ್ದುಕೊಳ್ಳುವ ವಿಚಾರಗಳು ಈ ಆಚರಣೆಯ ಹಿಂದಿವೆ. ಕೃಷಿ ಚಟುವಟಿಕೆಯನ್ನು ಮುಂದುವರಿಸಿಕೊಂಡು ಹೋಗುವ ಆಶಯವಿದೆ. 'ಕಂಡ ಇತ್ತ್‌ಂಡ ಯಾವಂದ್, ಬಿತ್ತ್‌ಲಾ ಬೋಡು ಸಾಗೊಳಿಗ್' (ಗದ್ದೆ ಇದ್ದರೆ ಸಾಲದು, ಬಿತ್ತನೆ ಬೀಜವೂ ಬೇಕು ಸಾಗುವಳಿಗೆ) ಎಂಬ ಗಾದೆ ನುಡಿಯೂ 'ಬಿತ್ತ್‌ದ ಮುಡಿ'ಯನ್ನು ಅಟ್ಟಕ್ಕೆ ಹಾಕುವ ಆಶಯವನ್ನೇ ವ್ಯಕ್ತಪಡಿಸುತ್ತದೆ. ಅಂತೆಯೇ 'ಕಾಟ್ ಕೋರಿಗ್ ಕಾವೇರಿ ಸಂಕ್ರಾಂದಿಗೆ'(ಕಾಡು ಕೋಳಿಗೆ ಕಾವೇರಿ ಸಂಕ್ರಾಂತಿಯಂತೆ) ಎಂಬ ಗಾದೆಯೂ ಬಳಕೆಯಲ್ಲಿದ್ದು ಹೇಳಿಕೆ ಕೇಳಿಕೆ ಇಲ್ಲದ ಅಲ್ಪರ ಆಚಾರ ಎಂಬ ಅರ್ಥ ಇದರಲ್ಲಿದ್ದು, 'ಕಾವೇರಿ ಸಂಕ್ರಾಂತಿ' ಆಚರಣೆಯ ಪಾವಿತ್ರ್ಯವನ್ನು ಇದು ತಿಳಿಸುತ್ತದೆ.

## ೧೦.೪: 'ಕಾವೇರಿ ಸಂಕ್ರಾಂತಿ'ಗೆ ಸಮಾನವಾದ ಆಚರಣೆಗಳು

ಫಸಲು ನಷ್ಟವಾಗಬಾರದೆಂಬ ಆಶಯವಿರುವ ಕೆಲವು ಆಚರಣೆಗಳು ಕರ್ನಾಟಕದ ಇತರೆಡೆಗಳಲ್ಲಿ ಬೇರೆ ಬೇರೆ ಸಂದರ್ಭಗಳಲ್ಲಿ ಬೇರೆ ಬೇರೆ ರೀತಿಯಲ್ಲಿ ನಡೆಯುವುದು ತಿಳಿದು ಬರುತ್ತದೆ. ಉದಾಹರಣೆಗೆ 'ಅಜ್ಜಿ ಕಳಿಸುವುದು'[೧೧] ಎಂಬ ವ್ಯವಸಾಯಕ್ಕೆ ಸಂಬಂಧಿಸಿದ

ಆಚರಣೆ ಶಿವಮೊಗ್ಗ ಜಿಲ್ಲೆಯ ಕಡೆ ರೂಢಿಯಲ್ಲಿದೆ ಎಂದು ಹೇಳಲಾಗುತ್ತದೆ. ಇದನ್ನು ಭತ್ತದ ತೆನೆಗಳು ಒಡೆಯಲು ಆರಂಭವಾದಾಗ ಭತ್ತ ಚಟ್ಪಾಗ (ಜಳ್ಳಾಗ) ಬಾರದೆಂದು ಆಚರಿಸಲಾಗುತ್ತದೆ. ಅಂತೆಯೇ ಶಿವಮೊಗ್ಗ ಜಿಲ್ಲೆಯ ಶಿಕಾರಿಪುರ ತಾಲೂಕಿನ ಶೆಟ್ಟಿಬಣಜಿಗರು ಹಾಗೂ ಇತರ ಕೆಲವು ಜನಾಂಗಗಳವರು ಭತ್ತ ಕೊಯ್ಲಾಗಿ ಬಣವೆ ಹಾಕಿದ ಮೇಲೆ ಕಣ ಮಾಡುವ ಮೊದಲು 'ಕೋಳಿ ಮುರಿಯುವ ಹಬ್ಬ'[೧೨]ವನ್ನು ಆಚರಿಸುತ್ತಾರೆ ಎಂದು ಹೇಳಲಾಗಿದೆ. ಹೀಗೆ ಮಾಡುವುದರಿಂದ ಕಾಳು ಹೆಚ್ಚು ದೊರೆಯುವುದೆಂಬ ನಂಬಿಕೆ ಅವರದಾಗಿದೆ. ಕೊಡವ ಗೌಡರು ಬೆಳೆದ ಧಾನ್ಯವನ್ನು ಹುಳುಗಳಿಂದ ರಕ್ಷಿಸಿಕೊಳ್ಳಲು ಹುಳುಗಳ ದೇವತೆಯಾದ ಗೊರವನಿಗೆ ನೈವೇದ್ಯ ಸಲ್ಲಿಸುವ ಪದ್ಧತಿಯಿದ್ದು ಅದನ್ನು 'ಗೊರವನಿಗೆ ಇಡುವುದು'[೧೩] ಎಂದು ಆಚರಿಸುತ್ತಾರೆ ಎಂದು ಹೇಳಲಾಗುತ್ತದೆ. ಇವೆಲ್ಲ ಬೆಳೆದ ಫಸಲನ್ನು ರಕ್ಷಿಸಿಕೊಳ್ಳಲು ಜನಪದರು ಮಾಡುವ ನಂಬಿಕೆ ಆಚರಣೆಗಳಾಗಿವೆ.

### ೧೦.೫: 'ಕಾವೇರಿ ಸಂಕ್ರಾಂತಿ'–ಆಚರಣೆಯ ಒಟ್ಟೂ ಸ್ವರೂಪ

ಈ ಹಿನ್ನೆಲೆಯಲ್ಲಿ 'ಕಾವೇರಿ ಸಂಕ್ರಾಂತಿ' ಆಚರಣೆಯ ಮುಖ್ಯಾಂಶಗಳನ್ನು ಈ ರೀತಿ ಸಂಗ್ರಹಿಸಿ ಹೇಳಬಹುದು.

೧. 'ನಿರ್ನಾಲ' ತಿಂಗಳ ಸಂಕ್ರಮಣ ದಿನವನ್ನು 'ಕಾವೇರಿ ಸಂಕ್ರಮಣ'ವೆಂದು ಆಚರಿಸಲಾಗುತ್ತದೆ.

೨. ಮನೆಯ 'ಅಟ್ಟ'ದಲ್ಲಿ 'ಬಿತ್ತ್‌ದ ಮುಡಿ'(ಬಿತ್ತನೆ ಬೀಜದ ಮುಡಿ)ಕಟ್ಟಿ ಹಾಕುವ ಕ್ರಮವಿದೆ.

೩. 'ಏಣೇಲು' ಬೆಳೆಯ ಭತ್ತದ ರಾಶಿಗೆ, ಬೈಹುಲ್ಲು ರಾಶಿಗೆ 'ಕಲ್ಲು–ಮುಳ್ಳು' ಮತ್ತು 'ಬೂದಿಬರೆ' ಇಡುವ ಪದ್ಧತಿಯಿದೆ.

೪. ಭೂತ–ನಾಗಗಳಿಗೆ ಈ ದಿನ 'ಪರ್ವ' 'ತಂಬಿಲ' 'ಅಗೆಲು' ಹಾಕುತ್ತಾರೆ.

೫. 'ಕುಲೆ'(ಪಿತೃ)ಗಳಿಗೆ ಬಡಿಸುವ ಕ್ರಮವಿದೆ.

೬. ಎಲ್ಲರೂ ಈ ದಿನ ಮನೆಯಲ್ಲಿರುತ್ತಾರೆ.

೭. ಬೇಟೆಯಾಡುವುದು, ತೆಂಗಿನಕಾಯಿ ಕುಟ್ಟುವಂತಹ ಕ್ರೀಡೆಗಳನ್ನು ನಡೆಸುತ್ತಾರೆ. ಮುಖ್ಯವಾಗಿ 'ಸಂಕ್ರಾಂತಿ ಕಟ್ಟ'ವೆಂದು ವಿಶೇಷ ಕೋಳಿ ಅಂಕ ನಡೆಯುತ್ತದೆ.

೮. ಈ ದಿನ ಬೆಳಿಗ್ಗೆ ಉದ್ದು ಹಾಕಿದ ದೋಸೆ ಮತ್ತು ರಾತ್ರಿ ಹೊಸ ಅಕ್ಕಿಯ ರೊಟ್ಟಿ ಹಾಗು ಕೋಳಿ ಇಲ್ಲವೆ ಮೀನು ಮಾಂಸದ ವಿಶೇಷ ಅಡುಗೆ ಮಾಡುತ್ತಾರೆ.

೯. 'ಕಾವೇರಿ ಸಂಕ್ರಾಂತಿ'ಯ ದಿನ ಶಾಸ್ತ್ರಕ್ಕಾದರೂ ಸರಿಯೆ, ಒಂದು ಮುಡಿ ಭತ್ತವನ್ನಾದರೂ ಅಟ್ಟಕ್ಕೆ ಹಾಕಬೇಕು ಮತ್ತು 'ಕಾವೇರಿ ಸಂಕ್ರಾಂತಿ' ಮೊದಲು ಹೊಸ ಅಕ್ಕಿಯ ರೊಟ್ಟಿ ಮಾಡಬಾರದೆಂಬ ಬಲವಾದ ನಂಬಿಕೆಗಳು ತುಳುನಾಡಿನಲ್ಲಿವೆ.

೧೦. 'ಕಾವೇರಿ ಸಂಕ್ರಾಂತಿ'ಯನ್ನು ಭತ್ತ ಬೇಸಾಯದ ಹಿನ್ನೆಲೆಯಲ್ಲಿ ಆಚರಿಸಲಾಗುತ್ತದೆಯಾದರೂ, ಈ ಹೆಸರು ಮಾತ್ರ ಕೊಡಗಿನ 'ಕಾವೇರಿ' ಮೂಲದಿಂದಲೇ ಬಂದಿರಬೇಕು.

೧೧. ಈ ಆಚರಣೆಯ ಬಗ್ಗೆ ಬೇರೆಬೇರೆ ಐತಿಹ್ಯಗಳೂ ಗಾದೆಗಳೂ ದೊರೆಯುತ್ತವೆ.

೧೨. ಇಲ್ಲಿ 'ಬಿತ್ತ್‌ದ ಮುಡಿ'(ಬಿತ್ತನೆ ಬೀಜದ ಮುಡಿ) ಅಟ್ಟಕ್ಕೆ ಹಾಕುವ ವಿಧಿಯಲ್ಲಿ ಭತ್ತದ ಕೃಷಿ ಸಂಸ್ಕೃತಿಯನ್ನು ಮುಂದುವರಿಸಿಕೊಂಡು ಹೋಗಬೇಕೆನ್ನುವ ಪವಿತ್ರ ಆಶಯವಿದೆ.

೧೩. ಸೂತಕಗಳು ಬಂದರೆ ಈ ಆಚರಣೆಯನ್ನು ಮಾಡುವುದಿಲ್ಲ.

---

**ಅಡಿಟಿಪ್ಪಣಿ**

೧. **ತುಳು ನಿಘಂಟು:** ಸಂಪುಟ–೧: ೧೯೯೭: ಡಾ.ಯು.ಪಿ.ಉಪಾಧ್ಯಾಯ: ರಾಷ್ಟ್ರಕವಿ ಗೋವಿಂದ ಪೈ ಸಂಶೋಧನಾ ಕೇಂದ್ರ, ಉಡುಪಿ: ಪುಟ ಸಂಖ್ಯೆ–೭೭೭, ೭೭೮

೨. **ಜಾನಪದ ಮಿನದನ:** ೧೯೯೭: ಡಾ.ಪಾಲ್ತಾಡಿ ರಾಮಕೃಷ್ಣ ಆಚಾರ್: ಸುಪ್ರಿಯಾ ಪ್ರಕಾಶನ: ಪುತ್ತೂರು: ಪುಟ–೬೮

೩. **ಸಿಂಗದನ:** ೧೯೮೭: ವಾಮನ ನಂದಾವರ: ಹೇಮಾಂಶು ಪ್ರಕಾಶನ, ಕಾಟಿಪಳ್ಳ: ಪುಟ–೫೬, ೫೭

೪. **ಬಂಟರು: ಒಂದು ಸಮಾಜೋ ಸಾಂಸ್ಕೃತಿಕ ಅಧ್ಯಯನ:** ೨೦೦೪: ಇಂದಿರಾ ಹೆಗ್ಗಡೆ: ಕನ್ನಡ ಪುಸ್ತಕ ಪ್ರಾಧಿಕಾರ ಬೆಂಗಳೂರು: ಪುಟ–೪೮೦

೫. **ಅದೇ:** ಪೂರ್ವೋಕ್ತ: ಪುಟ–೪೮೦

೬. **ಜಾತ್ರೆ ಮತ್ತು ಇತರ ಸಂಶೋಧನಾತ್ಮಕ ಪ್ರಬಂಧಗಳು:** ೧೯೯೦: (ಸಂ.)ಚಂದ್ರಶೇಖರ ದಾಮ್ಲೆ: ಲೇಖನ: ರೈತ ಪ್ರಕೃತಿಯ ಕೈಗೂಸು: ಲೇಖಕ : ಸಂಧ್ಯಾ ಎ. ರಾಣಿ: ಸಮಾಜ ಶಾಸ್ತ್ರ ಸಂಘ, ನೆಹರು ಮೆಮೋರಿಯಲ್ ಕಾಲೇಜು, ಸುಳ್ಯ ೫೭೪೨೩೯: ಪುಟ–೫೩

೭. **ಕನ್ನಡಾನುವಾದ: ತುಳು ಸಂಸ್ಕೃತಿದ ಪೊಲಬು:** ೨೦೦೮: ಡಾ.ಪಾಲ್ತಾಡಿ ಆಚಾರ್: ಕರ್ನಾಟಕ ತುಳು ಸಾಹಿತ್ಯ ಅಕಾಡೆಮಿ: ಪುಟ–೪೯

೮. **ತುಳು ಜಾನಪದ ಆಚರಣೆಗಳು:** ೨೦೦೩: ಬನ್ನಂಜೆ ಬಾಬು ಅಮೀನ್: ಕೆಮ್ಮಲಜೆ ಪ್ರಕಾಶನ, ಉಡುಪಿ: ಪುಟ–೧೩೩

೯. **ಜಾನಪದ ಮಿನದನ:** ೧೯೯೭: ಪಾಲ್ತಾಡಿ ರಾಮಕೃಷ್ಣ ಆಚಾರ್: ಪೂರ್ವೋಕ್ತ: ಪುಟ–೬೮

೧೦. **ಅದೇ:** ಪೂರ್ವೋಕ್ತ: ಪುಟ–೬೮

೧೧. **ಕನ್ನಡ ಜಾನಪದ ವಿಶ್ವಕೋಶ:** ಸಂಪುಟ–೧: ೧೯೮೫: ಚಂದ್ರಶೇಖರ ಕಂಬಾರ: ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು: ಪುಟ–೩೭

೧೨. **ಅದೇ:** ಪೂರ್ವೋಕ್ತ: ಪುಟ–೫೭೮

೧೩. **ಅದೇ:** ಪೂರ್ವೋಕ್ತ: ಪುಟ–೬೮೪

■■■

## ಅಧ್ಯಾಯ-೧೧

# ತುಳುನಾಡಿನ ವಾರ್ಷಿಕ ಆವರ್ತನದ ಆಚರಣೆ-'ಪರ್ಬ'
## (ದೀಪಾವಳಿ)

# ಅಧ್ಯಾಯ-೧೧

## ತುಳುನಾಡಿನ ವಾರ್ಷಿಕ ಆವರ್ತನದ ಆಚರಣೆ-'ಪರ್ಬ'
## (ದೀಪಾವಳಿ)

೧೧.೧: ಪರ್ಬ'-ಅರ್ಥ

೧೧.೨; ಪರ್ಬ'-ಆಚರಣೆಯ ವಿಧಾನ

೧೧.೩: 'ಪರ್ಬ' ಆಚರಣೆ-ವಿಶ್ಲೇಷಣೆ

೧೧.೩.೧:'ಪರ್ಬ' ಮತ್ತು 'ದೀಪಾವಳಿ' ಸಂಬಂಧ

೧.೩.೧.೧: ನರಕ ಚತುರ್ದಶಿ

೧.೩.೧.೨: ಲಕ್ಷ್ಮೀಪೂಜೆ

೧.೩.೧.೩: ಗೋಪೂಜೆ/ಬಲಿಪಾಡ್ಯಮಿ

೧೧.೪.: 'ಬಜಿಲ್ ಪಾಡುನ'

೧೧.೫: 'ಜೋಕುಲೆ ಪುಣ್ಣಮೆ'

೧೧.೬: 'ಪರ್ಬ'-ಆಚರಣೆಯ ಒಟ್ಟೂ ಸ್ವರೂಪ

# ಅಧ್ಯಾಯ-೧೧

# ತುಳುನಾಡಿನ ವಾರ್ಷಿಕ ಆವರ್ತನದ ಆಚರಣೆ 'ಪರ್ಬ'

# (ದೀಪಾವಳಿ)

## ೧೧.೧: 'ಪರ್ಬ'-ಅರ್ಥ

ತುಳುವರು ದೀಪಾವಳಿಯನ್ನು 'ಪರ್ಬ' ಎಂದೇ ಕರೆಯುತ್ತಾರೆ. 'ಬೊಂತೆಲ್' ತಿಂಗಳಲ್ಲಿ ಬರುವ ಅಮಾವಾಸ್ಯೆಯ ಹಿಂದಿನ ದಿನ (ಕಾರ್ತಿಕ ಮಾಸದ ಚತುರ್ದಶಿ), ಅಮಾವಾಸ್ಯೆಯ ದಿನ ಮತ್ತು ಅಮಾವಾಸ್ಯೆಯ ಮರುದಿನ (ಪಾಡ್ಯ)ದಂದು -ಹೀಗೆ ಮೂರು ದಿನ 'ಪರ್ಬ'ವನ್ನು ಆಚರಿಸುತ್ತಾರೆ. ತುಳುವರ ವಾರ್ಷಿಕ ಆವರ್ತನದ ಆಚರಣೆಗಳಲ್ಲಿ 'ಪರ್ಬ'ಕ್ಕಿರುವ ಸಂಭ್ರಮ ಉಳಿದ ಆಚರಣೆಗಳಿಗಿಲ್ಲವೆನ್ನಬಹುದು. 'ಪರ್ಬ' ಆಚರಣೆ ಉಳಿದೆಲ್ಲಾ ಆಚರಣೆಗಳಿಗೂ ಒಡೆಯನಿದ್ದಂತೆ.

ತುಳು ನಿಘಂಟಿನಲ್ಲಿ 'ಪರ್ಬ' ಎಂಬುದಕ್ಕೆ ಪರ್ಬೊ, ಹಬ್ಬ, ವಿಶೇಷ ದಿನ, ದೀಪಾವಳಿ ಹಬ್ಬ, ಕೊಡಿಪರ್ಬ, ಬಲಿಪರ್ಬ, ಮಲ್ಲಪರ್ಬ; A festival; festivity; feast. Deepavali festival-ಎಂಬ ಅರ್ಥಗಳನ್ನು ನೀಡಲಾಗಿದೆ.[೧] .

## ೧೧.೨: 'ಪರ್ಬ'-ಆಚರಣೆಯ ವಿಧಾನ

'ಕಾವೇರಿ ಸಂಕ್ರಾಂತಿ' ಆಚರಣೆಯ ದಿನದಿಂದಲೇ 'ಪರ್ಬ' ಆಚರಣೆಯ ಸಂಭ್ರಮ ಪ್ರಾರಂಭವಾಗುತ್ತದೆ. 'ಬೊಂತೆಲ್' ತಿಂಗಳ ಅಮಾವಾಸ್ಯೆಯ ಮೊದಲ ದಿನ 'ಪರ್ಬ'ದ ಆರಂಭದ ದಿನ. ಆ ದಿನವನ್ನು 'ಮೀಪಿಪರ್ಬ' (ಮೀಯುವ ಹಬ್ಬ)ವೆಂದು ಆಚರಿಸುತ್ತಾರೆ. 'ಮೀಪಿಪರ್ಬ'ದ ಮೊದಲ ದಿನ ರಾತ್ರಿ ಸ್ನಾನದ ನೀರಿನ ಪಾತ್ರೆಯನ್ನು ತೊಳೆದು ಶುದ್ಧಗೊಳಿಸಿ ಅದರಲ್ಲಿ ನೀರು ತುಂಬಿಸಿ, ಮರುದಿನ ಬೆಳಿಗ್ಗೆ 'ಮೀಪಿಪರ್ಬ'ಕ್ಕೆ ತಯಾರಿ ಮಾಡಲಾಗುತ್ತದೆ. ನೀರಿನ ಪಾತ್ರೆಗೆ 'ಸೇಡಿ' (ಜೇಡಿ) ಮಣ್ಣಿನಿಂದ ಚಿತ್ತಾರ ಬಿಡಿಸಿ ಅದರ ಕೊರಳಿಗೆ ನೀರು ಸೌತೆಯ (ಮುಳ್ಳುಸೌತೆ) ಬಳ್ಳಿಯನ್ನು ಕಟ್ಟುತ್ತಾರೆ. 'ಮೀಪಿಪರ್ಬ'ದ ದಿನ ಬೆಳಿಗ್ಗೆ ಎಲ್ಲರೂ ಶರೀರಕ್ಕೆ ಎಣ್ಣೆ ಹಚ್ಚಿ ನಂತರ ಬಿಸಿನೀರಿನಲ್ಲಿ ಸ್ನಾನ ಮಾಡುತ್ತಾರೆ. ಹೆಂಗಸರು ಮನೆ ಅಂಗಳವನ್ನೆಲ್ಲ ಸೆಗಣಿಯಿಂದ ಸಾರಿಸುತ್ತಾರೆ. 'ಪರ್ಬ'ಕ್ಕೆ ಬೇಕಾಗುವ ಸಾಮಾನುಗಳನ್ನು ತರಿಸಿಕೊಳ್ಳುತ್ತಾರೆ. ಅಂತೆಯೇ ಮೊದಲ ದಿನದಿಂದಲೇ ಉದ್ದು ಹಾಕಿದ ದೋಸೆಯನ್ನು

ಮಾಡುತ್ತಾರೆ. ಮನೆ ಮಂದಿಯೆಲ್ಲ ಬೇಗನೆ ಎದ್ದು ಬಿಸಿ ಬಿಸಿ ದೋಸೆ ತಿಂದು ಮತ್ತೆ ಮಲಗುವುದೂ ಉಂಟು. ಹಬ್ಬದ ದಿನಗಳಲ್ಲಿ ಕೃಷಿ ಕೆಲಸಗಳಿಗೆ ಬಿಡುವಾಗಿರುತ್ತದೆ.

ಎರಡನೆಯ ದಿನ 'ದೇವೆರೆಪರ್ಬ' (ದೇವರ ಹಬ್ಬ). ಇದು ಅಮಾವಾಸ್ಯೆಯ ದಿನ ಬರುತ್ತದೆ. ಈ ದಿನ ತುಳುವರಿಗೆ ಕೊನೆಯ ದಿನದ 'ಕೊಡಿಪರ್ಬ'ದ (ತುದಿಹಬ್ಬ) ಸಿದ್ಧತೆಯ ದಿನವಾಗಿರುತ್ತದೆ. 'ಕೊಡಿಪರ್ಬ'ದ ದಿನ 'ಪರ್ಬ'ದ ಮಹತ್ವದ ಆಚರಣೆಗಳಿರುವುದರಿಂದ ಅದರ ಸಿದ್ಧತೆಗಳನ್ನು 'ದೇವೆರೆಪರ್ಬ'ದ ದಿನ (ಅಮಾವಾಸ್ಯೆಯ ದಿನ) ನಡೆಸುತ್ತಾರೆ. ಕೆಲವರು 'ದೇವೆರೆ ಪರ್ಬ'ದ ದಿನವೇ 'ಬಿಲಕ್ಕಿಮರ' (ಬಲೀಂದ್ರಮರ) ಹಾಕುತ್ತಾರೆ. ಉಳಿದಂತೆ ಯಾವುದೇ ಆಚರಣೆಗಳು ಆ ದಿನ ಇರುವುದಿಲ್ಲ.

ಮೂರನೆಯ ದಿನ 'ಕೊಡಿಪರ್ಬ' (ತುದಿಹಬ್ಬ). ಇದು ಪಾಡ್ಯದ ದಿನ ಬರುತ್ತದೆ. ತುಳುವರು 'ಕೊಡಿಪರ್ಬ'ವನ್ನು 'ಪಾಡ್ಯಬಳಸುನ' (ಪಾಡ್ಯ ಬಡಿಸುವುದು) ಇಲ್ಲವೆ 'ಬಲಿಪಾಡ್ಯಮಿ' ಎಂದು ಕರೆಯುತ್ತಾರೆ. ಈ ದಿನ 'ಪರ್ಬ'ದ ಅತ್ಯಂತ ಮಹತ್ವದ ದಿನವಾಗಿರುತ್ತದೆ. ಮನೆಯ ಯಜಮಾನ ಬೆಳಿಗ್ಗೆ ಬೇಗನೆ ಎದ್ದು ಗುಡ್ಡಕ್ಕೆ ಇಲ್ಲವೇ ಮಲೆಗೋ, ಕಾಡಿಗೋ ಹೋಗಿ ೬-೭ ಅಡಿ ಎತ್ತರದ ಸಣ್ಣ 'ಪಾಲೆಮರ'(ಹಾಲೆಮರ)ವೊಂದನ್ನು ಕಡಿದುಕೊಂಡು ಬರುತ್ತಾರೆ. ಆ ಮರದ ತುದಿಯಲ್ಲಿ ಮೂರು ನಾಲ್ಕು ಕವಲುಗಳಿರುವುದನ್ನೇ ಆರಿಸುತ್ತಾರೆ. ಮನೆಯ ಅಂಗಳದಲ್ಲಿರುವ ತುಳಸಿ ಕಟ್ಟೆಯ ಬಳಿಯಲ್ಲಿ ಸಬಳದಿಂದ ಒಂದು ಅಡಿ ಆಳದ ಗುಂಡಿ ತೋಡುತ್ತಾರೆ. ಅದಕ್ಕೆ ಹಾಲು, ನೀರು, ಗಂಧ, ಬೆಳ್ತಿಗೆ ಅಕ್ಕಿ ಹಾಕಿ ಧೂಪ ಆರತಿ ಮಾಡಿ ನಮಸ್ಕರಿಸಿದ ತರುವಾಯ ತಂದಂತಹ 'ಪಾಲೆಮರ'(ಹಾಲೆಮರ)ವನ್ನು ವಿಧಿವತ್ತಾಗಿ ನೆಡುತ್ತಾರೆ. ಈ ವಿಧಿಗೆ 'ಮರಪಾಡುನ' (ಮರ ಹಾಕುವುದು) ಎಂದು ಕರೆಯುತ್ತಾರೆ; ಮತ್ತು ಇದನ್ನೇ 'ಬಿಲಕ್ಕಿಮರ' (ಬಲೀಂದ್ರಮರ) ಎನ್ನಲಾಗುತ್ತದೆ. ಅದರ ಬುಡದಲ್ಲಿ ನೀರಿನಲ್ಲಿ ತೊಳೆದು ಶುದ್ಧಗೊಳಿಸಿದ ಮರದ ಮಣೆಯೊಂದನ್ನು ಇಟ್ಟು ಅದರ ಮೇಲೆ 'ಕೊಡಿ' ಬಾಳೆಎಲೆಯಲ್ಲಿ ಬೆಳ್ತಿಗೆ ಅಕ್ಕಿ, ತೆಂಗಿನಕಾಯಿ, ವೀಳ್ಯ, ಅಡಿಕೆ ಮತ್ತು ಫಲವಸ್ತುಗಳನ್ನು ಇಡುತ್ತಾರೆ. ಪಕ್ಕದಲ್ಲಿ ದನದ ಹಾಲನ್ನು ಇಡುತ್ತಾರೆ. ಒಂದು ದೀಪವನ್ನು ಉರಿಸಿಡುತ್ತಾರೆ.

'ಮರಪಾಡುನ' (ಮರಹಾಕುವುದು) ಆದ ಮೇಲೆ ಗಂಡಸರು ಹಟ್ಟಿಯಲ್ಲಿರುವ ದನಕರು ಎತ್ತು ಎಮ್ಮೆ ಕೋಣಗಳನ್ನು ತೋಡಿಗೋ, ನದಿಗೋ, ಹಳ್ಳಕ್ಕೋ ಕೊಂಡು ಹೋಗಿ ತೊಳೆದು ಅವುಗಳ ಹಣೆಗೆ ಗಂಧ, ಕುಂಕುಮ ಹಾಕಿ ಮೇಯಲು ಗುಡ್ಡೆಗೆ ಬಿಡುತ್ತಾರೆ ಇಲ್ಲವೆ ಕಟ್ಟಿ

ಹಾಕುತ್ತಾರೆ. ನಂತರ ಮಕ್ಕಳು ಮತ್ತು ಹೆಂಗಸರು, ಗಂಡಸರೆಲ್ಲ ಸಂಜೆ 'ಬಿಲಕ್ಕಿ ಮರ' (ಬಲೀಂದ್ರಮರ)ವನ್ನು ಅಲಂಕರಿಸಲು ವಿವಿಧ ಜಾತಿಯ ಹೂವುಗಳ ಸಂಗ್ರಹಕ್ಕೆ ಹೋಗುತ್ತಾರೆ. ಪಾದೆಹೂವು, ಕೇಪುಳಹೂವು, ಗೌರಿಹೂವು, ತುಳಸಿ, ಕವಳಿಗೆಹೂವು, ದಾಸವಾಳ, ರಥಹೂವು, ಮೆಣಸುಹೂವು–ಹೀಗೆ ಅನೇಕ ಜಾತಿಯ ಹೂವುಗಳನ್ನು ಸಂಗ್ರಹಿಸಿಕೊಂಡು ಬರುತ್ತಾರೆ. ಮಧ್ಯಾಹ್ನ ತರಕಾರಿ ಊಟ ಮಾಡಿ ನಂತರ 'ಪೊಲಿಬಲ್ಲ್' (ಬಾಳೆಯ ಹಗ್ಗ) ನಿಂದ ಹೂವುಗಳನ್ನು ಮಾಲೆ ಮಾಡುತ್ತಾರೆ. ಸಂಜೆಗೆ 'ಪರ್ಬ' ಆಚರಿಸಲು ಎಲ್ಲ ರೀತಿಯ ಸಿದ್ಧತೆ ನಡೆಸುತ್ತಾರೆ. 'ಬಿಲಕ್ಕಿಮರ'(ಬಲೀಂದ್ರಮರ)ದ ತುದಿಗೆ ಅಡ್ಡಲಾಗಿ ಒಂದು ಕೋಲು ಕಟ್ಟಿ ಅದರ ಆಧಾರದಲ್ಲಿ ಮಾಲೆ ಮಾಡಿದ ಹೂವುಗಳನ್ನು ಹಾಕಿ ಅಲಂಕರಿಸುತ್ತಾರೆ. ಮನೆಯ ಯಜಮಾನ 'ಬಿಲಕ್ಕಿಮರ'(ಬಲೀಂದ್ರಮರ)ದ ಬುಡದಲ್ಲಿ 'ಅಗೆಲು' (ಎಡೆ) ಬಡಿಸಲು ಬಾಳೆ ಎಲೆ ಮತ್ತು ಇತರ ಸಾಹಿತ್ಯಗಳನ್ನು ಕಲೆ ಹಾಕುತ್ತಾನೆ. 'ಕೊಲ್ತಿರಿ'(ದೊಂದಿ), 'ನಿಣೆ' (ಬತ್ತಿ) ಮೊದಲಾದವುಗಳನ್ನು ತಯಾರಿಸಿ ಒಂದು 'ತಡ್ಪೆ' (ಗೆರಸೆ/ಮೊರ)ಯಲ್ಲಿಯೋ, 'ಕೈಕುರುವೆ'(ಸಣ್ಣ ಬುಟ್ಟಿ) ಯಲ್ಲಿಯೋ ಇಡುತ್ತಾರೆ. ಮತ್ತೊಂದೆಡೆ 'ಬಿಲಕ್ಕಿಮರ'(ಬಲೀಂದ್ರಮರ)ದ ಸಮೀಪದಲ್ಲಿ ನಿಗ(ನೊಗ), ನಾಯೆರ್(ನೇಗಿಲು), ಸೇರು(ಅಕ್ಕಿ, ಭತ್ತ ಮೊದಲಾದವುಗಳನ್ನು ಅಳೆಯುವ ಸಾಧನ), 'ಕಳಸೆ', ಕತ್ತಿ, 'ಪರ್ದತ್ತಿ'(ಪೈರು ಕೊಯ್ಯುವ ಹಲ್ಲುಗಳಿರುವ ಕತ್ತಿ), 'ಕೊಟ್ಟು'(ಹಾರೆ) ಪಿಕ್ಕಾಸು, ಸಬಳ, 'ಇಸ್‌ಮುಳ್ಳು'(ಹಟ್ಟಿಗೊಬ್ಬರ ತೆಗೆಯುವ ಪಿಕ್ಕಾಸು ಮಾದರಿಯ ಸಾಧನ) 'ಮೊಟ್ಟಿಪಲಾಯಿ'(ಗದ್ದೆ ಉತ್ತಾದ ಬಳಿಕ ಎತ್ತು–ಕೋಣಗಳ ಮೂಲಕ ಸಮತಟ್ಟು ಮಾಡುವ ಹಲಗೆಯ ಸಾಧನ)– ಇವೇ ಮೊದಲಾದ ಕೃಷಿ ಉಪಕರಣಗಳನ್ನು ತೊಳೆದು ಜೋಡಿಸಿಡುತ್ತಾರೆ. ಅವುಗಳ ಮೇಲೆ ಹೂವುಗಳಿರುವ 'ನರೆತಬೂರ್', 'ಕುರುಡ್‌ದಬೂರ್', 'ಇಲ್ಲ್‌ಬಲ್ಲ್'(ಒಂದೊಂದು ಜಾತಿಯ ಬಿಳಲುಗಳು) ಜಾತಿಯ ಬಿಳಲುಗಳನ್ನು ಇಡುತ್ತಾರೆ. ನಂತರ ಅವುಗಳಿಗೆ ಅಕ್ಕಿ ಹಿಟ್ಟಿನ ನೀರನ್ನು ಚಿಮುಕಿಸುತ್ತಾರೆ.

ಅತ್ತ ಮನೆಯೊಳಗೆ ಹೆಂಗಸರು 'ಬಿಲಕ್ಕಿಮರ'(ಬಲೀಂದ್ರಮರ)ದ ಬುಡದಲ್ಲಿ, ಗದ್ದೆಯಲ್ಲಿ, ಕೃಷಿ ಉಪಕರಣಗಳ ಬಳಿಯಲ್ಲಿ, ಗೊಬ್ಬರದ ರಾಶಿಯ ಬಳಿಯಲ್ಲಿ ಬಡಿಸಲು ಮತ್ತು ಗೋವುಗಳಿಗೆ ತಿನ್ನಿಸಲು ಹಾಗೂ ಪರ್ಬದ ರಾತ್ರಿಯ ವಿಶೇಷ ಊಟಕ್ಕಾಗಿ ಅವಲಕ್ಕಿ, ನೀರುದೋಸೆ, ಪದಾರ್ಥಗಳನ್ನು ತಯಾರಿಸುತ್ತಾರೆ.

ಎಲ್ಲ ಸಿದ್ಧತೆಗಳು ಆದ ಬಳಿಕ ರಾತ್ರಿ ಸುಮಾರು ೮.೦೦ ಗಂಟೆಯ ಹೊತ್ತಿಗೆ ಮನೆಯ ಯಜಮಾನ ಸ್ನಾನ ಮಾಡಿಕೊಂಡು ಬಂದು ಮಡಿ ಬಟ್ಟೆ ಉಟ್ಟು ಮರದ ಬುಡದಲ್ಲಿ

'ಅಗೆಲ್'(ಎಡೆ)ಹಾಕುವ ಕ್ರಮವನ್ನು ಮಾಡುತ್ತಾನೆ. 'ಬಿಲಕ್ಕಿಮರ'(ಬಲೀಂದ್ರಮರ)ದ ಬುಡದಲ್ಲಿ ಇಟ್ಟಿರುವ ಮಣೆಯ ಮೇಲೆ ಒಂದು ತುದಿ ಬಾಳೆಎಲೆ ಇಟ್ಟು ಅದರಲ್ಲಿ ಸ್ವಲ್ಪ ಬೆಳ್ತಿಗೆ ಅಕ್ಕಿ ಒಂದು ತೆಂಗಿನಕಾಯಿ, ೫ ವೀಳ್ಯ, ಒಂದು ಅಡಿಕೆ ಹೀಗೆ ಸುತ್ಯೆ (ಸ್ವಸ್ತಿಕ) ಇಡುತ್ತಾರೆ. ಮರದ ತುದಿಯಲ್ಲೂ ದೀಪ ಇಟ್ಟಿರುತ್ತಾರೆ. ಸ್ವಸ್ತಿಕದ ಬದಿಯಲ್ಲೂ ದೀಪ ಉರಿಸುತ್ತಾರೆ. ನಂತರ ೩ ಇಲ್ಲವೆ ೫ ತುದಿ ಬಾಳೆ ಎಲೆಗಳನ್ನು ಸಾಲಾಗಿ ಹಾಕಿ 'ಅಗೆಲ್‌ಬಡಿಸುವ' ಕ್ರಮ ಮಾಡುತ್ತಾರೆ. ಆ ಎಲೆಗಳಲ್ಲಿ ಅವಲಕ್ಕಿ, ಬೆಲ್ಲ, ಬಾಳೆಹಣ್ಣು, ದೋಸೆ ಹಾಕುತ್ತಾರೆ. ಒಂದು ತೆಂಗಿನಕಾಯಿ ಒಡೆದು ಇಡುತ್ತಾರೆ. ಮತ್ತೊಂದು 'ಬೊಂಡ'(ಎಳನೀರು) ತೂತು ಮಾಡಿ ಇಡುತ್ತಾರೆ. ಹಾಗೆಯೇ 'ಬಿಲಕ್ಕಿ ಮರ' (ಬಲೀಂದ್ರಮರ)ದ ತುದಿಯಲ್ಲಿರುವ ಮೂರೋ ನಾಲ್ಕೋ ಕವಲುಗಳಲ್ಲಿ 'ಕೊಲ್ತಿರಿ' (ದೊಂದಿ) ಕುತ್ತಿ ಇರಿಸುತ್ತಾರೆ. ಒಂದು ಚೆಂಬು ನೀರು ಇರುತ್ತದೆ. ಊದು ಬತ್ತಿ ಉರಿಸುತ್ತಾರೆ. ತೆಂಗಿನ ಸಿಪ್ಪೆಯಲ್ಲಿ ಕೆಂಡ ಸಿದ್ಧವಿರುತ್ತದೆ. ಹಾಕಿದ ಎಡೆಗಳ ಮುಂದೆ ಒಂದು ತುದಿ ಬಾಳೆಎಲೆಯಲ್ಲಿ ಸ್ವಲ್ಪ ಅಕ್ಕಿ ಮತ್ತು ಹೂವು ಮತ್ತು ಶ್ರೀಗಂಧ ಇಟ್ಟಿರುತ್ತಾರೆ. ಎಲ್ಲ ಸಿದ್ಧತೆ ಮಾಡಿಕೊಂಡು ಮನೆಮಂದಿಯನ್ನೆಲ್ಲ ಯಜಮಾನ ಕರೆಯುತ್ತಾನೆ. ಆಗಲೇ ಸ್ನಾನಾದಿಗಳನ್ನು ಮುಗಿಸಿ ಮಡಿಬಟ್ಟೆ ಉಟ್ಟುಕೊಂಡಿರುವ ಮನೆಮಂದಿಯೆಲ್ಲ ಅಲ್ಲಿಗೆ ಬರುತ್ತಾರೆ. ಎಲ್ಲರಿಗೂ ಯಜಮಾನ ಸ್ವಲ್ಪ ಸ್ವಲ್ಪ ಅಕ್ಕಿ ಕಾಳು(ಅಕ್ಷತೆ) ನೀಡುತ್ತಾನೆ. ಅವುಗಳನ್ನು ಎರಡೂ ಕೈಗಳಿಂದ ಮಂದಿ ಭಕ್ತಿಯಿಂದ ತೆಗೆದುಕೊಂಡು ಹಿಡಿದು ನಿಲ್ಲುತ್ತಾರೆ. ಯಜಮಾನ ಎಡೆಗಳಿಗೆ ನೀರು ಚಿಮುಕಿಸಿ ಆರತಿ ಧೂಪ ಎತ್ತುತ್ತಾನೆ; ಪ್ರಾರ್ಥನೆ ಮಾಡುತ್ತಾನೆ. ಕೆಲವರು ಬಲಿಯೇಂದ್ರನ ಕಥೆಯನ್ನು ಹೇಳುತ್ತಾರೆ. ಪಾಡ್ದನವನ್ನೂ ಹಾಡುತ್ತಾರೆ.

ಕೊನೆಗೆ "ಆ ಜಾಲ ಪೊಲಿ ಕೊಂಡಲಾ, ಈ ಜಾಲ ಪೊಲಿ ಕೊಂಡಲಾ, ಕೂ ಬಲಾ ಬಲಿಯೇಂದ್ರ, ಕೂ ಬಲಾ ಬಲಿಯೇಂದ್ರ, ಕೂ ಬಲಾ ಬಲಿಯೇಂದ್ರ'(ಆ ಅಂಗಳದ ಸಮೃದ್ಧಿಯನ್ನು ತಾ, ಈ ಅಂಗಳದ ಸಮೃದ್ಧಿಯನ್ನು ತಾ, ಬಲಿಯೇಂದ್ರ ಬಾ), "ಆಟಿತ ಪುಣ್ಣಮೆ ಅಯನೊಂತ ಸಂಕ್ರಾಂತಿ ದೀಪಾವಳಿ ಕೊಡಿಪರ್ಬೊ ಎನ್ನ ರಾಜ್ಯೊಂತ ಬಲಿ ಕೊಂಡೋತ್ ನಿನ್ನ ರಾಜ್ಯೊಂತ ಪೊಲಿಕೊಂಡ ಕೂ ಬಲಿಯೇಂದ್ರ"(ಆಟಿಯ ಹುಣ್ಣಿಮೆ ಅಯನದ ಸಂಕ್ರಮಣ ದೀಪಾವಳಿಯ ಕೊಡಿಹಬ್ಬ ನನ್ನ ರಾಜ್ಯದಿಂದ ಬಲಿ ಕೊಂಡುಹೋಗಿ ನಿನ್ನ ರಾಜ್ಯದಿಂದ ಸಂಪತ್ತನ್ನು ತಾ ಕೂ ಬಲಿಯೇಂದ್ರ) ಎಂದು ಹೀಗೆ ಬೇರೆಬೇರೆ ರೀತಿಯಲ್ಲಿ ಮೂರು ಬಾರಿ ಎಲ್ಲರೂ ಜೋರಾಗಿ ಕೂಗಿ ಕರೆಯುತ್ತಾರೆ. ಕರೆಯುವಾಗ ಪೂರ್ವ ದಿಕ್ಕಿಗೆ ಬಾಸಿಗೆ ಮುಖ ಮಾಡಿ ಕರೆಯುತ್ತಾರೆ. ಹೀಗೆ ಕರೆದಾದ ಮೇಲೆ ಒಬ್ಬೊಬ್ಬರಾಗಿ ಎಡೆಗಳ

ಮುಂದಿರುವ ಅಕ್ಕಿ ಕಾಳು, ಹೂವುಗಳಿರುವ ತುದಿ ಎಲೆಗೆ ತಮ್ಮ ಕೈಯಲ್ಲಿದ್ದ ಅಕ್ಕಿ ಕಾಳುಗಳನ್ನು(ಅಕ್ಷತೆ) ಹಾಕಿ ನಮಸ್ಕರಿಸುತ್ತಾರೆ. ಎಲ್ಲರೂ ತೇದ ಗಂಧವನ್ನು ಹಣೆಗೆ ಇಟ್ಟುಕೊಳ್ಳುತ್ತಾರೆ. ಎಲ್ಲರೂ ನಮಸ್ಕರಿಸಿದ ಮೇಲೆ ಯಜಮಾನ ನಮಸ್ಕರಿಸುತ್ತಾನೆ. ಸ್ವಲ್ಪ ಹೊತ್ತು ಅಲ್ಲಿಯೇ ಎಲ್ಲರೂ ಹಿಂದಕ್ಕೆ ಮುಖ ಮಾಡುತ್ತಾರೆ. ನಂತರ ಯಥಾ ಸ್ಥಿತಿಗೆ ಬಂದು ಮತ್ತೊಮ್ಮೆ ನಮಸ್ಕಾರ ಮಾಡಿ ಹೀಗೆ ಮೊದಲು ಬಲಿ ಕಂಬದ ಬುಡದಲ್ಲಿ 'ಬಲಿಪೂಜೆ' ನಡೆಯುತ್ತದೆ. ಕೋವಿ ಇರುವವರು ಆ ವೇಳೆಗೆ ಮದ್ದು ಗುಂಡು ಸಿಡಿಸುತ್ತಾರೆ.

ನಂತರ 'ತಡ್ಪೆ' (ಗೆರಸೆ) ಯೊಂದರಲ್ಲಿ ಅವಲಕ್ಕಿ, ಬಾಳೆಹಣ್ಣು, ದೋಸೆ, ಕುಂಕುಮ, ಗಂಧ, ಹೂವು ಇತ್ಯಾದಿಗಳನ್ನು ಹಿಡಿದುಕೊಂಡು 'ನಿಗನಾಯೆರ್'(ನೊಗ ನೇಗಿಲು)ಗಳನ್ನು ಇಟ್ಟಿರುವ ಜಾಗಕ್ಕೆ ಯಜಮಾನ ಇತರರ ಸಹಾಯದೊಂದಿಗೆ ಹೋಗುತ್ತಾನೆ. ಅಲ್ಲಿಯೂ 'ಬಿಲಕ್ಕಿ ಮರ'(ಬಲೀಂದ್ರಮರ)ದ ಬುಡದಲ್ಲಿ ಮಾಡಿದಂತೆ ಅಗೆಲು ಬಡಿಸಿ 'ಕೊಲ್ತಿರಿ' (ದೊಂದಿ), ದೀಪ ಧೂಪ ಎತ್ತುತ್ತಾರೆ. ಪ್ರಾರ್ಥನೆ ಮಾಡುತ್ತಾರೆ. ಭಕ್ತಿಯಿಂದ ನಮಸ್ಕರಿಸುತ್ತಾರೆ. ನಂತರ ಗೋಪೂಜೆಗೆಂದು ಹಟ್ಟಿ ಬಳಿಗೆ ಹೋಗುತ್ತಾರೆ. ಹಟ್ಟಿಯ 'ಬೈಪಣೆ'ಯ (ಹುಲ್ಲು, ನೀರು ಹಾಕುವ ಸ್ಥಳ) ಕೆಳಗೆ ನಿಂತು ದನಕರು ಜಾನುವಾರುಗಳಿಗೆ 'ತಡ್ಪೆ' (ಗೆರಸೆ)ಯಲ್ಲಿರುವ ಅಗೆಲು ಸಹಿತ ದೀಪ ಧೂಪ ಎತ್ತುತ್ತಾರೆ. ಹೀಗೆ ಮಾಡುವಾಗ 'ಕಲ್ಲಡಿತ್ತ ನೀರ್ ಪರೊನೊಡು, ಮುಳ್ಳಡಿತ್ತ ಪಂತಿ ಮೇಪೊನೊಡು, ಆತ್ ವರ್ಷ ಬಾಳ್ ಮಗ ಬಾಳ್; ಪಂಚಪಾಂಡವೆರೆ ಕೈಕಂಜಿ, ಕಿದೆ ದಿಂಜಾ ಬಾಳೊಡು, ಕುಲೊ ದಿಂಜಾ ಮೇಪೊಡು, ಕೊಂಬುದೆಡೆ ನೆರೆಪೊಡು ಬಾಳ್ ಮಗ ಬಾಳ್; ಕೊಂಬುಡು ಅಲಂಬು ಕೊಡಿತ್‌ನೇಟ, ಕಣ್ಣ್‌ಡ್ ನರತೆ ಬನ್ನೇಟ ಈ ಬದುಕೊಡು ವಜ್ರ'( ಕಲ್ಲಡಿಯ ನೀರು ಕುಡಿಯಬೇಕು, ಮುಳ್ಳಡಿಯ ಹುಲ್ಲು ಮೇಯಬೇಕು, ಅಷ್ಟು ವರ್ಷ ಬಾಳು ಮಗ ಬಾಳು; ಪಂಚಪಾಂಡವರ ದನಕರು, ಹಟ್ಟಿತುಂಬ ಬದುಕಬೇಕು, ಕುಲತುಂಬ ಮೇಯಬೇಕು, ಕೊಂಬಿನೆಡೆ ತುಂಬಿಕೊಳ್ಳಬೇಕು, ಬಾಳು ಮಗ ಬಾಳು; ಕೊಂಬಿನಲ್ಲಿ ಅಣಬೆ ಹುಟ್ಟುವವರೆಗೆ, ಕಣ್ಣಿನಲ್ಲಿ ಪೊರೆ ಬರುವವರೆಗೆ ಬದುಕಬೇಕು ವಜ್ರ) ಎಂದು ಹೇಳಿ ಅವುಗಳನ್ನು ಒಂದೊಂದಾಗಿ ಕರೆಯುವ ಕ್ರಮವಿದೆ. ಅವುಗಳಿಗೆಲ್ಲ ಬಾಳೆಹಣ್ಣು, ಅವಲಕ್ಕಿ, ದೋಸೆಯನ್ನು ತಿನ್ನಿಸುತ್ತಾರೆ. ಅವುಗಳ ಹಣೆಗೆ ಕುಂಕುಮ ಬೊಟ್ಟು ಇಡುತ್ತಾರೆ. ಹೂವು ಮಾಲೆ ಹಾಕುವುದೂ ಇದೆ. ಈ ರೀತಿ ಗೋಪೂಜೆ ಮಾಡುವುದನ್ನು ತುಳುವರು 'ಎರ್ಲೆಗ್ ಒಡರ್ ತೋಜಾಪುನ' (ದನಕರುಗಳಿಗೆ ದೀಪ ತೋರಿಸುವುದು) ಎಂದು ಕರೆಯುತ್ತಾರೆ. ಹಿಂದಿನ ವರ್ಷದ ಪರ್ಬದ ಬಳಿಕ ಆ ವರ್ಷದ ಪರ್ಬದ ನಡುವೆ ಹುಟ್ಟಿದ

ಕರುಗಳು ಮನೆಯಲ್ಲಿದ್ದರೆ ಅವುಗಳಿಗೆ 'ಪರ್ಬ'ದ ಆ ಸಂದರ್ಭದಲ್ಲಿ ಹೆಸರಿಡುವ ಕ್ರಮವಿದೆ. ಹೀಗೆ ಗೋಪೂಜೆ ಆದ ನಂತರ 'ತಡ್ಪೆ'ಯಲ್ಲಿ ಎಲ್ಲ ಸಾಮಾಗ್ರಿಗಳನ್ನು ಹಿಡಿದುಕೊಂಡು ಗೊಬ್ಬರದ ರಾಶಿಯಲ್ಲಿಗೆ ಹೋಗುತ್ತಾರೆ. ಅಲ್ಲಿಯೂ 'ಕೊಲ್ತಿರಿ'(ದೊಂದಿ) ಬೆಳಗಿಸಿ ಎಡೆ ಹಾಕಿ ಧೂಪ ಆರತಿ ಎತ್ತಲಾಗುತ್ತದೆ. ಪ್ರಾರ್ಥನೆ ಮಾಡಿ ನಮಸ್ಕರಿಸುತ್ತಾರೆ. ಆ ಮೇಲೆ ಗದ್ದೆಗೆ ಹೋಗುತ್ತಾರೆ. ಗದ್ದೆಯಲ್ಲಿಯೂ ಎಡೆ ಹಾಕಿ, 'ಕೊಲ್ತಿರಿ'(ದೊಂದಿ)ಕುತ್ತಿ, ಧೂಪ ದೀಪ ಎತ್ತಿ ಪ್ರಾರ್ಥನೆ ಮಾಡಿ ನಮಸ್ಕರಿಸುತ್ತಾರೆ. ಕೆಲವರು ಗದ್ದೆಯಲ್ಲಿ ಈ ಕ್ರಮ ಮಾಡುವಾಗ ಬಲಿಯನ್ನು ಕರೆಯುತ್ತಾರೆ. ಹೀಗೆ ಆಚರಿಸಿದ ಬಳಿಕ ಮನೆಗೆ ಹಿಂತಿರುಗಿ ಉಳಿದಿರುವ ಅವಲಕ್ಕಿ, ದೋಸೆ, ಅರಳು, ಬಾಳೆಹಣ್ಣು ಇತ್ಯಾದಿ ಎಲ್ಲ ವಸ್ತುಗಳನ್ನು ತಡ್ಪೆ ಸಹಿತ ಮನೆಯೊಳಗಿರುವ ಭತ್ತದ ರಾಶಿಯಲ್ಲಿಡುತ್ತಾರೆ.

ಇದಾದ ಬಳಿಕ ಮನೆಯೊಳಗೆ 'ಕುಲೆ'(ಪಿತೃ)ಗಳಿಗೆ ಬಡಿಸುತ್ತಾರೆ. ನಂತರ ಸಹಭೋಜನ ಮಾಡುತ್ತಾರೆ. ಅವಲಕ್ಕಿ, ದೋಸೆ, ಬಾಳೆಹಣ್ಣು ಮತ್ತು ದೋಸೆ ತಿನ್ನಲು 'ಪಂರ್ದ ರಸಾಯನ' (ಬಾಳೆ ಹಣ್ಣಿನ ರಸಾಯನ), 'ಬೆಲ್ಲತಾರಾಯಿ' (ಬೆಲ್ಲ ತೆಂಗಿನ ಕಾಯಿ) ಇತ್ಯಾದಿ ಸಿಹಿ ಮಾಡುತ್ತಾರೆ. ಇಲ್ಲವೆ 'ಬೆಲ್ಲದ ಪೇರ್' (ಬೆಲ್ಲದ ಹಾಲು) ಮಾಡುತ್ತಾರೆ. ಇದಲ್ಲದೆ ತರಕಾರಿ ಪದಾರ್ಥ ಇಲ್ಲವೆ ಮೀನು, ಕೋಳಿ ಪದಾರ್ಥಗಳನ್ನು ಮಾಡುತ್ತಾರೆ. ವಿಶೇಷವಾಗಿ 'ಪರ್ಬ'ಕ್ಕೆ ಹೊಸ ಅಕ್ಕಿಯ ಅವಲಕ್ಕಿ, ಹೊಸ ಬೆಳ್ತಿಗೆ ಅಕ್ಕಿಯ 'ನೀರುದೋಸೆ', ಬೆಲ್ಲ-ತೆಂಗಿನಕಾಯಿ ಬೇಕೇಬೇಕು. ಇಲ್ಲಿಗೆ 'ಪರ್ಬ' ಆಚರಣೆಯ ಮುಖ್ಯ ಭಾಗ ಮುಗಿಯುತ್ತದೆ.

ತುಳುವರ 'ಪರ್ಬ'ದ ಇನ್ನೊಂದು ವಿಶೇಷವೆಂದರೆ ತುಳುವರ ಕುಟುಂಬದಲ್ಲಿ ಆ ವರ್ಷ ಯಾರಾದರೂ ಮರಣ ಹೊಂದಿದ್ದರೆ ಅವರಿಗೆ 'ಬಜಿಲ್ ಪಾಡುನ' (ಅವಲಕ್ಕಿ ಹಾಕುವುದು) ಎಂಬ ಕ್ರಮವಿದೆ. ಸತ್ತ ವ್ಯಕ್ತಿ ಹೆಂಗಸಾಗಿದ್ದರೆ ಅವರಿಗೆ ಅಮಾವಾಸ್ಯೆ ದಿನ, ಗಂಡಸಾಗಿದ್ದರೆ ಅವರಿಗೆ ಪಾಡ್ಯದ ದಿನ ಬೆಳಕು ಮೂಡುವುದೊರಳಗೆ ಈ 'ಬಜಿಲ್ ಪಾಡುನ' ಕ್ರಮವನ್ನು ಮಾಡುತ್ತಾರೆ. ಮನೆಯ ಒಳಗೆ ದೈವಗಳ ಮಣೆಮಂಚ ಇರುವ ಕೋಣೆಯಲ್ಲಿ ಈ ಆಚರಣೆಯನ್ನು ಮಾಡುತ್ತಾರೆ. ಅದು ಸತ್ತವರಿಗೆ ಒಂದು ವರ್ಷದವರೆಗೆ ಮಾಡುವ ಕೊನೆಯ ಸಂಸ್ಕಾರ ಕ್ರಿಯೆಯಾಗಿರುತ್ತದೆ. ದೋಸೆ/ಪುಂಡಿ ಮತ್ತು ಮೀನು-ಹುರುಳಿ, ಕೋಳಿ ಪದಾರ್ಥ ಮಾಡಿ ಎರಡು ಎಲೆ ಹಾಕಿ 'ಅಗೆಲ್' ಬಡಿಸುತ್ತಾರೆ. ಪಕ್ಕದಲ್ಲಿ ಮತ್ತೆ ಮೂರು ಎಲಗಳನ್ನು ಸೇರಿಸಿ ಅವಲಕ್ಕಿ ಬಡಿಸುತ್ತಾರೆ. ಅದರ ಸುತ್ತ ಸುಲಿದ ಬಾಳೆ ಹಣ್ಣುಗಳನ್ನು ಇಡುತ್ತಾರೆ. ಅಂದರೆ ಹೆಸರೇ ಸೂಚಿಸುವಂತೆ ಈ ಕ್ರಿಯೆಗೆ ವಿಶೇಷವಾಗಿ ಅವಲಕ್ಕಿಯನ್ನು ಉಪಯೋಗಿಸುತ್ತಾರೆ.

ನೆಂಟರಿಷ್ಟರು, ನೆರೆಹೊರೆಯ ಜನ ಈ ಆಚರಣೆಗೆ ಬರುತ್ತಾರೆ. ಹೀಗೆ ಆ ದಿನ ಮಧ್ಯಾಹ್ನದವರೆಗೆ ಸಾಮಾನ್ಯವಾಗಿ ಅವಲಕ್ಕಿ ಹಾಕಲು ಜನ ಬರುತ್ತಿರುತ್ತಾರೆ. ಬರುವವರು ಸ್ವಲ್ಪ ಅವಲಕ್ಕಿ, ಬೆಲ್ಲ, ಬಾಳೆಹಣ್ಣು ತರುತ್ತಾರೆ. ಕೆಲವರು ತೆಂಗಿನಕಾಯಿ, ಬೊಂಡ ಇತ್ಯಾದಿ ತರುವುದೂ ಇದೆ. ತಂದಂತಹ ವಸ್ತುಗಳನ್ನು ಅದಾಗಲೇ ಸತ್ತವರಿಗೆ ಬಡಿಸಿದ ರಾಶಿಯ ಮೇಲೆ ಬಡಿಸಿ ನಮಸ್ಕರಿಸುವ ಕ್ರಮವಿದೆ. ಅವಲಕ್ಕಿ ಬಡಿಸಿ ಅದರ ಬುಡದಲ್ಲಿ ಬಾಳೆಹಣ್ಣೊಂದನ್ನು ಸುಲಿದಿಡುತ್ತಾರೆ. ನಂತರ ಬಂದವರಿಗೆ ತಿನ್ನಲು ಅವಲಕ್ಕಿ ಮತ್ತು ಮೀನು ಕೋಳಿ ಪದಾರ್ಥ ಊಟ ಬಡಿಸುತ್ತಾರೆ. ಅವರು ಹೋಗುವಾಗ ಅವರು ಅವಲಕ್ಕಿ ತಂದ ಚೀಲದಲ್ಲಿ ಸ್ವಲ್ಪ ಅವಲಕ್ಕಿ ಹಾಕಿ ಹಿಂತಿರುಗಿಸುವ ಕ್ರಮವಿದೆ.

'ಪರ್ಬ' ಆಚರಣೆಯ ಮೂರನೆಯ ದಿನ ಅಂದರೆ 'ಪಾಡ್ಯ ಬಳಸುನ' (ಪಾಡ್ಯ ಬಡಿಸುವುದು) ದಿನದ ಮರುದಿನ 'ಪರ್ಬ'ದ ಕರಿ (ಹಬ್ಬದ ಮರುದಿನ) ಆಚರಿಸುತ್ತಾರೆ. ಆ ದಿನವೂ ಬೆಳಿಗ್ಗೆ ಉದ್ದು ಹಾಕಿದ ದೋಸೆ ಹೆಚ್ಚು ಮಾಡುತ್ತಾರೆ. ಆ ದಿನ 'ಪರ್ಬೊದ ಮರ್ಯಾದೆ' ಕೇಳಿಕೊಂಡು ಮನೆಗೆ ಬಡ ಜನ ಬರುತ್ತಾರೆ. ದೋಸೆ, ಪದಾರ್ಥ, ಅವಲಕ್ಕಿ, ಬಾಳೆಹಣ್ಣು ಇತ್ಯಾದಿ ಕೊಡುವ ಕ್ರಮವಿದೆ. ಇದಕ್ಕಾಗಿ 'ಪರ್ಬದ ಕರಿ' ಎಂದು ಕರೆಯುತ್ತಾರೆ. ಪರ್ಬದ ದಿನ ಹಾಕಿದ 'ಬಿಲಕ್ಕಿಮರ' (ಬಲೀಂದ್ರಮರ)ವನ್ನು ಮುಂದೆ 'ಜೋಕುಲೆ ಪುಣ್ಣಮೆ' (ಮಕ್ಕಳ ಹುಣ್ಣಿಮೆ)ಯ ಆಚರಣೆಯವರೆಗೆ ಇಟ್ಟುಕೊಳ್ಳುತ್ತಾರೆ. ಅದಕ್ಕೆ ಆ ಹದಿನೈದು ದಿನವೂ ರಾತ್ರಿ ಮನೆಯ ಯಜಮಾನ ದೀಪ ಇಟ್ಟು ನಮಸ್ಕರಿಸುತ್ತಾನೆ. ಕುಟುಂಬದ ಸದಸ್ಯರು ಎಲ್ಲಿದ್ದರೂ ಈ ದಿನ ಮನೆಗೆ ಬರುತ್ತಾರೆ. ಈ ಆಚರಣೆಯಲ್ಲಿ ಭಕ್ತಿ ಸಂಭ್ರಮಗಳಿಂದ ಪಾಲ್ಗೊಳ್ಳುತ್ತಾರೆ. ಮೂರು ನಾಲ್ಕು ದಿನ ಪುರುಸೊತ್ತು ಇರುವುದರಿಂದ ಬೇಟೆಯಾಡುವುದು, ಶಕ್ತಿಕಲ್ಲು ಎತ್ತುವುದು, ಸರಿಮುಗುಲಿ ಆಟ ಇಲ್ಲವೆ ತೆಂಗಿನಕಾಯಿ ಕುಟ್ಟುವಂತಹ ಕ್ರೀಡೆಯನ್ನು ಮನೋರಂಜನೆಗಾಗಿ ಆಡುತ್ತಾರೆ. ಕೋಳಿಅಂಕವನ್ನು 'ಪರ್ಬೊದಕಟ್ಟ' (ದೀಪಾವಳಿ ಹಬ್ಬದ ಕಟ್ಟ)ಎಂದು ವಿಶೇಷವಾಗಿ ನಡೆಸುತ್ತಾರೆ. ಹುಟ್ಟು ಸಾವುಗಳ ಸೂತಕಗಳು ಬಂದರೆ 'ಪರ್ಬ'ವನ್ನು ಆ ದಿನ ಆಚರಿಸದೆ ಮುಂದೆ ಬರುವ 'ಜೋಕುಲೆ ಪುಣ್ಣಮೆ' (ಮಕ್ಕಳ ಹುಣ್ಣಿಮೆ)ಯಂದು ಆಚರಿಸುವ ಕ್ರಮವಿದೆ. ಹೀಗೆ 'ಪರ್ಬ'ವನ್ನು ತುಳುವರು ವಿಶೇಷವಾಗಿ ಸಂಭ್ರಮದಿಂದ ಆಚರಿಸುತ್ತಾರೆ. ('ಪರ್ಬ' ಆಚರಣೆಗೆ ಸಂಬಂಧಿಸಿದಂತೆ ಅನುಬಂಧ ಪುಟ– xii ರಲ್ಲಿನ ಚಿತ್ರ– ೧.೮.೧ ರಿಂದ ೧.೮.೧೭ ಇವುಗಳನ್ನು ಗಮನಿಸಬಹುದು.)

### ೧೧.೩: 'ಪರ್ಬ' ಆಚರಣೆ–ವಿಶ್ಲೇಷಣೆ

#### ೧೧.೩.೧: 'ಪರ್ಬ' ಮತ್ತು 'ದೀಪಾವಳಿ' ಸಂಬಂಧ

ಭಾರತದಾದ್ಯಂತ ದೀಪಾವಳಿ ಆಚರಿಸುವಾಗ ತುಳುವರು 'ಪರ್ಬ' ಆಚರಿಸುತ್ತಾರೆ. ತುಳುವರಿಗೆ 'ಪರ್ಬ'ವೇ ದೀಪಾವಳಿ. ಅಂದರೆ ಬರಿದೆ 'ಪರ್ಬ' ಎಂದು ಕರೆಯುವ ಆಚರಣೆಯಿದ್ದರೆ ಅದು ದೀಪಾವಳಿ ಮಾತ್ರವೆನ್ನಬಹುದು. 'ಬಿಸುಪರ್ಬ', 'ಕುರಲ್‌ಪರ್ಬ' (ಕದಿರು ಹಬ್ಬ) ಮತ್ತು 'ಜೊಕುಲೆಪರ್ಬ' ಎಂಬ 'ಪರ್ಬ'ಗಳಿವೆಯಾದರೂ ಅವುಗಳನ್ನು ಕೇವಲ 'ಪರ್ಬ' ಎಂದು ತುಳುವರು ಕರೆಯುವುದಿಲ್ಲ. 'ಪರ್ಬ' ಎಂದು ವಿಶೇಷ ಅರ್ಥದಲ್ಲಿ ಕರೆಯವುದು ದೀಪಾವಳಿಯೊಂದನ್ನೇ. ಅಂದರೆ ದೀಪಾವಳಿಯೂ, 'ಪರ್ಬ'ವೂ ಒಂದೇ ಅಲ್ಲ. ಇವುಗಳು ಏಕಕಾಲಕ್ಕೆ ಆಚರಣೆಯಾಗುವುದರಿಂದ ಮೇಲು ನೋಟಕ್ಕೆ ಒಂದೇ ಎಂದು ಕಂಡು ಬರುತ್ತವೆ. ಆದರೆ ಈ ಎರಡೂ ಆಚರಣೆಗಳ ಹಿನ್ನೆಲೆಯನ್ನು ಶೋಧಿಸುವಾಗ ಅವುಗಳು ಭಿನ್ನ ನೆಲೆಗಳಲ್ಲಿ ಭಿನ್ನ ಉದ್ದೇಶಗಳೊಂದಿಗೆ ಆಚರಿಸಲ್ಪಡುವುದು ತಿಳಿಯುತ್ತದೆ. ದೀಪಾವಳಿ ವೈದಿಕ ಹಿನ್ನೆಲೆಯ ಆಚರಣೆಯಾದರೆ 'ಪರ್ಬ'ದ ಪರಿಕಲ್ಪನೆ ನಿಂತಿರುವುದು ಜಾನಪದದ ನೆಲೆಯಲ್ಲಿ ಎಂಬುದು ಗಮನಾರ್ಹ ಸಂಗತಿ. ದೀಪಾವಳಿ ಮತ್ತು 'ಪರ್ಬ' ಏಕಕಾಲಕ್ಕೆ ಮತ್ತು ಎರಡೂ ಆಚರಣೆಗಳಲ್ಲಿ 'ಬಲೀಂದ್ರ' ಕಥೆಯಲ್ಲಿ ಸಾಮ್ಯತೆಯಿದೆ ಎಂದ ಮಾತ್ರಕ್ಕೆ ಅವುಗಳನ್ನು ಒಂದೇ ಆಚರಣೆ ಎಂದು ಹೇಳಲಾಗದು. ದೀಪಾವಳಿಗೆ ಸಂಬಂಧಿಸಿದಂತೆ ಪುರಾಣ ಕಥೆಯಿರುವಂತೆ 'ಪರ್ಬ'ಕ್ಕೆ ಸಂಬಂಧಿಸಿದ ಜಾನಪದ ಕಥೆ ಸಿಗುತ್ತದೆ. ಪುರಾಣಗಳಲ್ಲಿ ಬರುವ ಕಥೆಗಿಂತ ಭಿನ್ನವಾಗಿ ಜಾನಪದದ ಕಥೆ ಹೆಣೆದುಕೊಂಡಿದೆ. ತುಳುನಾಡಿನಲ್ಲಿ 'ಪರ್ಬ'ದ ಮಹತ್ವವನ್ನು, 'ಬಲಿಯೇಂದ್ರ'ನ ಕಥೆಯ ಹಿನ್ನೆಲೆಯಲ್ಲಿ ಅರ್ಥೈಸಬಹುದಾಗಿದೆ. ದೀಪಾವಳಿಯ ಕಥೆಯಲ್ಲಿ ಬರುವ 'ಬಲಿ' ದುಷ್ಟ ರಾಕ್ಷಸನಾದರೆ(ವೀರೋಚನನ ಮಗ) ಪರ್ಬದ ಕಥೆಯಲ್ಲಿ ಬರುವ 'ಬಲಿ' ತುಳುವರಿಗೆ ಧರ್ಮಿಷ್ಟ ರಾಜ. ತುಳು ಸೀಮೆಗಳಲ್ಲಿ ಪ್ರಚಲಿತವಿರುವ ಕಥೆ, ಪಾಡ್ದನಗಳು 'ಬಲಿ'ಯನ್ನು ಭೂಮಿಪುತ್ರ ಬಲಿಯೇಂದ್ರ, ಸಿರಿ ಬಲಿಯೇಂದ್ರ, ಭೂಮಿಕರ್ತವ ಬಲಿಯೇಂದ್ರನೆಂದೇ ಕರೆದಿವೆ. ಆತನ ಆಡಳಿತ ವ್ಯಾಪ್ತಿಯಲ್ಲಿ ವರ್ಷದಲ್ಲಿ ಮೂರು ಉತ್ಸವ, ಆರು ಪರ್ವ, ಹೋಮ, ನೇಮ,ದಾನ–ಧರ್ಮ ನಡೆಯುತ್ತಿತ್ತಂತೆ. ಇದು ಧರ್ಮಾತ್ಮ ಅರಸನೊಬ್ಬನ ಪ್ರಜಾಹಿತ ಆಡಳಿತದ ಪರಿಯನ್ನು ವರ್ಣಿಸುತ್ತದೆ.

ದೀಪಾವಳಿ ಮತ್ತು 'ಪರ್ಬ' ಮೇಲ್ನೋಟಕ್ಕೆ ಸಮಾನವಾಗಿ ಕಂಡು ಬಂದರೂ ಅವುಗಳ ನಡುವೆ ಅನೇಕ ಭಿನ್ನತೆಯ ಅಂಶಗಳು ಗೋಚರಿಸುತ್ತವೆ. ಆದುದರಿಂದ ಕೇವಲ ಪೌರಾಣಿಕ

ಕಥೆಯನ್ನು ಆಧರಿಸಿದ ದೀಪಾವಳಿಯು ತುಳುವರ 'ಪರ್ಬ'ವನ್ನು ಪ್ರತಿನಿಧಿಸುವುದಿಲ್ಲ. ದೀಪಾವಳಿ ಮತ್ತು 'ಪರ್ಬ' ಎರಡನ್ನು ಹತ್ತಿರದಲ್ಲಿಟ್ಟುಕೊಂಡು ಶ್ರೀಧರ ಟಿ.ಎನ್. ಎಂಬವರು ಜಾನಪದೀಯ ನೆಲೆಗಟ್ಟಿನಲ್ಲಿ ಅಧ್ಯಯನ ಮಾಡಿದ್ದಾರೆ.[೧] ಶ್ರೀಧರ್ ಅವರು ಕ್ಷೇತ್ರ ಕಾರ್ಯದ ಮೂಲಕ ಸಂಗ್ರಹಿಸಿದ ಮಾಹಿತಿ ಆಧಾರದಲ್ಲಿ ತಮ್ಮ ಅಧ್ಯಯನ ಪ್ರಬಂಧವನ್ನು ರಚಿಸಿದ್ದಾರೆ.

ದಿ.ನಂದೊಳಿಕೆ ಶೀನಪ್ಪ ಹೆಗ್ಗಡೆಯವರು ತಮ್ಮ 'ತುಳುವಾಲ ಬಲಿಯೇಂದ್ರ'[೨] ಎಂಬ ಗ್ರಂಥದಲ್ಲಿ 'ಪರ್ಬ'ದ ಬಗ್ಗೆ ಅದರ ಆಚರಣೆಯ ತಾತ್ವಿಕ ಭಾಗದ ಬಲೀಂದ್ರನ ಹಾಡನ್ನು ಸಂಗ್ರಹಿಸಿ ನೀಡಿದ್ದಾರೆ.

ದೀಪಾವಳಿ ಆಚರಣೆ ಕಾರ್ತಿಕ ಮಾಸದ ಕೃಷ್ಣ ಪಕ್ಷದ ಚತುರ್ದಶಿ ದಿನ, ಅಮಾವಾಸ್ಯೆ ದಿನ ಮತ್ತು ಶುಕ್ಲ ಪಕ್ಷದ ಪಾಡ್ಯದ ದಿನ–ಹೀಗೆ ಮೂರು ದಿನ ನಡೆಯುತ್ತದೆ. ಆದರೆ ಆಚರಣೆಯ ಹಿನ್ನೆಲೆ ಪೂರ್ಣ ಪೌರಾಣಿಕ ಕಥೆಗಳನ್ನಾಧರಿಸಿರುವುದಾಗಿದೆ. ಮೊದಲ ದಿನ ನರಕ ಚತುರ್ದಶಿ ಎರಡನೆಯ ದಿನ ಧನಲಕ್ಷ್ಮೀ ಪೂಜೆ ಮತ್ತು ಮೂರನೇ ದಿನ ಬಲಿಪಾಡ್ಯಮಿ ಗೋಪೂಜೆ ನಡೆಯುತ್ತದೆ.

ಆದರೆ ಕನ್ನಡ ಜಾನಪದ ವಿಶ್ವಕೋಶದಲ್ಲಿ–"ಭಾರತದ ರಾಷ್ಟ್ರೀಯ ಹಬ್ಬಗಳಲ್ಲಿ ಒಂದು. ಆಶ್ವಯುಜ ಬಹುಳ ದ್ವಾದಶಿಯಿಂದ ಎಂಟುದಿನಗಳವರೆಗೆ ಅಂದರೆ ದ್ವಾದಶಿ, ಧನತ್ರಯೋದಶಿ, ನರಕಚತುರ್ದಶಿ, ಅಮಾವಾಸ್ಯೆ, ಬಲಿಪಾಡ್ಯಮಿ, ಭಾವನ ಬಿದಿಗೆ, ಅಕ್ಕನ ತದಿಗೆ, ಅಮ್ಮನ ಚೌತಿ– ಈ ದಿನಗಳನ್ನು ದೀಪಾವಳಿಯ ಪರ್ವದಿನಗಳೆಂದು ಕರೆಯುತ್ತಾರೆ. ಬಲಿಪಾಡ್ಯಮಿಯ ದಿನ ಬಲಿಚಕ್ರವರ್ತಿಯು ಭೂಲೋಕಕ್ಕೆ ಬಂದು ದೀಪಗಳ ಬೆಳಕನ್ನು ಕಂಡು ಆನಂದಪಡುತ್ತಾನೆಂಬ ನಂಬಿಕೆ ಇದೆ"[೪] ಎಂಬುದಾಗಿ ಹೇಳಿರುವುದನ್ನು ವಿಶೇಷವಾಗಿ ಗಮನಿಸಬೇಕು.

ಅಂತೆಯೇ ರಾಮನು ತನ್ನ ತಂದೆಯ ಮಾತಿನಂತೆ ಹದಿನಾಲ್ಕು ವರ್ಷ ವನವಾಸ ಮುಗಿಸಿಕೊಂಡು ರಾವಣನನ್ನು ಕೊಂದು ಸೀತೆಯೊಂದಿಗೆ ಅಯೋಧ್ಯೆಗೆ ಹಿಂದಿರುಗಿದಾಗ ರಾಮರಾಜ್ಯದಲ್ಲಿ ಸಂತೋಷದಿಂದ ಬೆಳಕಿನ ಹಬ್ಬವನ್ನು ಆಚರಿಸಿದರಂತೆ. ಅದೇ ಈ ದೀಪಾವಳಿ ಎಂದೂ ಹೇಳಲಾಗುತ್ತದೆ.[೫]

ಇನ್ನೊಂದು ಕಡೆ 'ದೀಪಾ' ಎಂಬ ರಾಜಕುಮಾರಿಯ ಸತ್ಯ ಮತ್ತು ಭಕ್ತಿಯಿಂದಾಗಿ ದೀಪಾವಳಿಯನ್ನು ಆಚರಿಸಲಾಗುತ್ತಿದೆ ಎಂದು ಹೇಳಲಾಗಿದ್ದು, ಆ ಕಥೆ ಹೀಗಿದೆ–"ರಾಜ ಒಂದು ದಿನ ತನ್ನ ಇಬ್ಬರು ಮಕ್ಕಳೊಂದಿಗೆ ಕುಳಿತಿರುವಾಗ ತನ್ನ ರಾಜ್ಯ ವೈಭವದಿಂದ ಕೂಡಿರುವುದಕ್ಕೆ ಕಾರಣವೇನು ಎಂದು ಕೇಳಿದನು. ಅದಕ್ಕೆ ನಿನ್ನ ದಕ್ಷ ಆಡಳಿತವೇ ಕಾರಣ ಎಂದು ಆತನ

ದೊಡ್ಡ ಮಗಳು ಉತ್ತರಿಸಿದಳು. ರಾಜ್ಯ ವೈಭವದಿಂದಿರುವುದಕ್ಕೆ ಲಕ್ಷ್ಮಿಯ ಕೃಪೆಯೇ ಕಾರಣ ಎಂದೂ ಮತ್ತೊಬ್ಬ ಮಗಳು ದೀಪಾ ಉತ್ತರಿಸಿದಳು. ಮಗಳು ನನಗೆ ಅವಮಾನ ಮಾಡಿದಳೆಂದು ಭಾವಿಸಿ ತಂದೆ ಆಕೆಯನ್ನು ಕಾಡಿಗೆ ಅಟ್ಟಿದನು. ಮರುಮಾತನಾಡದ ದೀಪಾ ಕಾಡಿಗೆ ಹೋಗಿ ಲಕ್ಷ್ಮಿಯನ್ನು ಕುರಿತು ತಪಸ್ಸು ಮಾಡಿದಳು. ಇತ್ತ ರಾಜನ ಆಡಳಿತದಲ್ಲಿ ಅವ್ಯವಸ್ಥೆಯುಂಟಾಯಿತು. ಮಳೆಯಿಲ್ಲದೆ ರಾಜ್ಯಕ್ಕೆ ಬರಗಾಲ ಬಂದಿತು. ಆಗ ಕಾಡಿನಲ್ಲಿ ದೀಪಾಳಿಗೆ ಲಕ್ಷ್ಮಿಯು ಪ್ರತ್ಯಕ್ಷಳಾಗಿ ದುರ್ಭಿಕ್ಷದಿಂದ ಕಂಗಾಲಾಗಿರುವ ರಾಜ್ಯಕ್ಕೆ ಮತ್ತೆ ಹೋಗಿ ಸುಭಿಕ್ಷವನ್ನುಂಟುಮಾಡು ಎಂದು ಹೇಳಿ ಕಳುಹಿಸಿದಳು. ಅದರಂತೆ ದೀಪಾ ರಾಜ್ಯಕ್ಕೆ ಬಂದಳು. ಆಕೆ ರಾಜ್ಯಕ್ಕೆ ಕಾಲಿಟ್ಟ ಕೂಡಲೇ ಮಳೆ ರಭಸವಾಗಿ ಬಂತು. ಇದರಿಂದ ಸಂತೋಷಗೊಂಡ ದೀಪಾ ಲಕ್ಷ್ಮೀ ದೇವಾಲಯಕ್ಕೆ ಹೋಗಿ ದೀಪ ಬೆಳಗಿಸಿ ಲಕ್ಷ್ಮಿಯನ್ನು ಕೊಂಡಾಡಿದಳು. ಈ ದೀಪಾ ದೀಪವನ್ನು ಬೆಳಗಿಸಿದ ದಿನವೇ ದೀಪಾವಳಿ ಆಯಿತೆಂಬ ಕಥೆ ಉತ್ತರಭಾರತದಲ್ಲಿ ಪ್ರಚಲಿತದಲ್ಲಿದೆ"[೬] ಎಂದು ಹೇಳಲಾಗುತ್ತದೆ.

**೧೧.೩.೧.೧: ನರಕ ಚತುರ್ದಶಿ**

ಭೂಲೋಕದ ಅಸುರ ದೊರೆ ನರಕಾಸುರ ಸ್ವರ್ಗಲೋಕವನ್ನು ಬಯಸಿ ಇಂದ್ರಲೋಕಕ್ಕೆ ಧಾಳಿ ನಡೆಸುತ್ತಾನೆ. ಆಗ ಶಿಷ್ಟ ಪರಿಪಾಲನೆಗಾಗಿ ಶ್ರೀಕೃಷ್ಣ ದುಷ್ಟ ನರಕಾಸುರನನ್ನು ಸಂಹರಿಸುತ್ತಾನೆ. ಅನಂತರ ಆ ಹತ್ಯೆಯ ಪಾಪವನ್ನು ಕಳೆದುಕೊಳ್ಳಲು ರುಕ್ಮಿಣಿಯಿಂದ ಶರೀರಕ್ಕೆ ಎಣ್ಣೆ ಹಚ್ಚಿಸಿಕೊಂಡು ಸ್ನಾನ ಮಾಡುತ್ತಾನೆ. ಈ ಹಿನ್ನೆಲೆಯಲ್ಲಿ ನರಕ ಚತುರ್ದಶಿ ಆಚರಣೆ ನಡೆಯುತ್ತದೆ. ದುಷ್ಟರಾಜನಿಂದ ಬಿಡುಗಡೆ ಪಡೆದ ಶಿಷ್ಟ ಜನರು ಸಂತೋಷಾರ್ಥವಾಗಿ ಶ್ರೀಕೃಷ್ಣನನ್ನು ಅನುಕರಿಸಿ ಎಣ್ಣೆ ಹಚ್ಚಿ ಸ್ನಾನ ಮಾಡುವ ಕ್ರಿಯೆಯೇ ನರಕಚತುರ್ದಶಿಯ ಮೀಯುವ ಹಬ್ಬ ಎಂಬುದು ಒಂದು ಕಲ್ಪನೆಯಾಗಿದೆ.

ಇನ್ನೊಂದು ಮೂಲದ ಪ್ರಕಾರ–"ಭೂದೇವಿಯ ಮಗನಾದ ನರಕಾಸುರ ಎಲ್ಲ ದೇವತೆಗಳನ್ನು ಎದುರಿಸಿ ಯಕ್ಷ, ಕಿನ್ನರ, ವಿದ್ಯಾಧರ, ಮೊದಲಾದ ಹದಿನಾರು ಸಾವಿರ ಮಂದಿ ಸ್ತ್ರೀಯರನ್ನು ಸೆರೆಯಲ್ಲಿಟ್ಟು ಕಿರುಕುಳ ಕೊಡತೊಡಗಿದಾಗ ಕೃಷ್ಣನು ನರಕಾಸುರನನ್ನು ಕೊಂದು ಎಲ್ಲರನ್ನು ಪಾರುಮಾಡಿದನು. ತನ್ನ ಮಗನ ಸಾವನ್ನು ತಿಳಿದ ಭೂದೇವಿಯ ಅವತಾರವಾದ ಸತ್ಯಭಾಮೆ ತನ್ನ ಮಗ ಸತ್ತ ಈ ಚತುರ್ದಶಿಯ ದಿನ ತನ್ನ ಮಗನ ಹೆಸರಿನಲ್ಲಿ ಸ್ನಾನ ಪೂಜಾದಿಗಳಿಂದ ಬೆಳಕಿನ ಹಬ್ಬವನ್ನು ಆಚರಿಸುವಂತೆ ಕೃಷ್ಣನನ್ನು ಪ್ರಾರ್ಥಿಸಿದಾಗ ಆತ ನಿನ್ನಿಷ್ಟ ದಂತಾಗಲಿ ಎಂದು ವರಪಿತ್ತನಂತೆ. ಅಂದಿನಿಂದ ಆ ದಿನವನ್ನು ನರಕ ಚತುರ್ದಶಿ ಎಂದು

ನಾಮಕರಣಮಾಡಿ . ಹಬ್ಬವನ್ನು ಆಚರಿಸಲಾಗುತ್ತದೆಂದು ಪುರಾಣದಲ್ಲಿ ಕಥೆಯಿದೆ. ನರಕ ಚತುರ್ದಶಿಯಂದು ಹನುಮಂತ ಹುಟ್ಟುವನೆಂದು ಕೆಲವರು ಭಾವಿಸಿ ಹನುಮಜ್ಜಯಂತಿಯನ್ನು ಆಚರಿಸುವುದುಂಟು. ನರಕಚತುರ್ದಶಿಯ ದಿನದಿಂದ ಒಂದು ತಿಂಗಳು ಆಕಾಶ ದೀಪವನ್ನು ಹಚ್ಚಿದರೆ ಪಿತೃಗಳು ಸಂತುಷ್ಟರಾಗುವವರೆಂಬ ನಂಬಿಕೆಯೂ ಇದೆ"[೭] ಎಂದು ಹೇಳಲಾಗುತ್ತದೆ. ಹೀಗೆ ನರಕ ಚತುರ್ದಶಿ ಆಚರಣೆಗೆ ಸಂಬಂಧಿಸಿದಂತೆ ಪುರಾಣದಲ್ಲಿ ಭಿನ್ನ ಭಿನ್ನವಾದ ಕಥೆಗಳು ಸಿಗುತ್ತವೆ. ಆದರೆ ತುಳುನಾಡಿನ 'ಪರ್ಬ' ಆಚರಣೆಯಲ್ಲಿ ನರಕ ಚತುರ್ದಶಿಗೆ ಪ್ರಾಶಸ್ತ್ಯವಿಲ್ಲ. ಯಾಕೆಂದರೆ ತುಳುವರ 'ಪರ್ಬ' ಪುರಾಣ ಕಥೆಗಳನ್ನು ಆಧರಿಸಿರುವ ಆಚರಣೆಯಲ್ಲ.

**೧೧.೩.೧.೨: ಲಕ್ಷ್ಮೀಪೂಜೆ**

ವೈದಿಕರು ದೀಪಾವಳಿಯನ್ನು ಅಮಾವಾಸ್ಯೆಯಂದು ಆಚರಿಸುತ್ತಾರೆ. ಅಂದರೆ ಧನಲಕ್ಷ್ಮೀ ಪೂಜೆಯನ್ನು ಆಚರಿಸುತ್ತಾರೆ. ಜೊತೆಗೆ ಗೋವರ್ಧನ ಪೂಜೆ, ಬನಶಂಕರಿಯ ಪೂಜೆ, ವರ ಗೌರಿಪೂಜೆಯನ್ನು ಮಾಡುತ್ತಾರಂತೆ. ಅಮಾವಾಸ್ಯೆ ಕತ್ತಲಲ್ಲಿ ಎಲ್ಲೆಲ್ಲಿಯೂ ದೀಪಗಳು ಕಾಣಿಸುತ್ತಿರುತ್ತವೆ. ಇದನ್ನು ಲಕ್ಷ್ಮೀ ಪೂಜೆ ಎನ್ನುತ್ತಾರೆ. "ದೀಪಾವಳಿಯ ದಿನದಂದು ಭೂಮಿ ತುಲಾರಾಶಿಗೆ ಪ್ರವೇಶಿಸುತ್ತದಂತೆ. ಅದಕ್ಕಾಗಿ ವ್ಯಾಪಾರಸ್ಥರು ಆ ದಿನ ತಮ್ಮ ಲೆಕ್ಕದ ಪುಸ್ತಕ ಮತ್ತು ತೂಕದ ಸಾಮಾನುಗಳನ್ನು ಪೂಜಿಸುತ್ತಾರೆ. ಜೊತೆಗೆ ಯಾವುದಾದರೂ ಒಂದು ಹೊಸ ವಸ್ತುವನ್ನು ಆ ದಿನ ಕೊಂಡು ತರುವುದುಂಟು. ಆ ರೀತಿ ಕೊಂಡು ತರುವುದರಿಂದ ಒಳ್ಳೆಯದಾಗುತ್ತದೆಂಬ ನಂಬಿಕೆಯಿದೆ. ವೈದ್ಯರು ದೀಪಾವಳಿಯಂದು ಧನ್ವಂತರಿ ಜಯಂತಿಯನ್ನು ಆಚರಿಸುವುದುಂಟು. ಮತ್ತೆ ಕೆಲವರು ಉಜ್ಜಯಿನಿಯ ವಿಕ್ರಮಾದಿತ್ಯ ಸಿಂಹಾಸನವೇರಿದ ದಿನವೇ ದೀಪಾವಳಿ ಎನ್ನುತ್ತಾರೆ. ಅಂದಿನಿಂದಲೇ ವಿಕ್ರಮ ಶಕೆ ಆರಂಭ. ಆದ್ದರಿಂದಲೇ ದೀಪಾವಳಿ ಬೆಳಕಿನ ಹಬ್ಬವಾಗಿರುವುದು ಎಂದು ಹೇಳುವುದುಂಟು"[೮] ಅಮಾವಾಸ್ಯೆಯ ಆಚರಣೆಯ ಭಾಗವೂ ಪೌರಾಣಿಕ ಕಥಾನಕವನ್ನು ಆಧರಿಸಿರುವುದರಿಂದ ಅದಕ್ಕೂ 'ಪರ್ಬ' ಆಚರಣೆಗೂ ಸಂಬಂಧವಿಲ್ಲ.

**೧೧.೩.೧.೩: ಗೋಪೂಜೆ/ಬಲಿಪಾಡ್ಯಮಿ**

'ಪರ್ಬ' ಆಚರಣೆಯಲ್ಲಿ ಬಲಿಪಾಡ್ಯಮಿ ಮತ್ತು ಗೋಪೂಜೆಗಳೇ ಪ್ರಧಾನ ಭಾಗಗಳಾಗಿವೆ. ಬಲಿಪಾಡ್ಯಮಿ ಎಂದರೆ 'ಬಲೀಂದ್ರ'ನನ್ನು ಪೂಜಿಸುವ ದಿನವಾಗಿರುತ್ತದೆ. ವೈದಿಕರೂ 'ಬಲಿಪಾಡ್ಯಮಿ'ಯನ್ನು ಪಾಡ್ಯದಂದು ಆಚರಿಸುತ್ತಾರೆ. ಅಂದೇ ಗೋಪೂಜೆಯನ್ನೂ ಮಾಡುತ್ತಾರೆ. ಆದರೆ ಅವರ ಆಚರಣೆಯ ಹಿನ್ನೆಲೆ ಭಿನ್ನವಾಗಿದೆ. ಅವರ ಪ್ರಕಾರ 'ಬಲೀಂದ್ರ'

ಪಾತಾಳ ಲೋಕದ ಅರಸ ಸ್ವರ್ಗದ ಅಧಿಕಾರ ಬಯಸಿ ಅಲ್ಲಿಗೆ ಧಾಳಿ ನಡೆಸಿ ಸ್ವರ್ಗವನ್ನು ವಶಪಡಿಸಿಕೊಂಡಿದ್ದ. ಆಗ ವಿಷ್ಣು ಬ್ರಾಹ್ಮಣನಾಗಿ ವಾಮನಾವತಾರ ತಾಳಿ ಬಂದು ಒಂದು ಹೆಜ್ಜೆಯಿಂದ ಭೂಮಿಯನ್ನು ವಶಪಡಿಸುತ್ತಾನೆ. ಇನ್ನೊಂದು ಹೆಜ್ಜೆಯಿಂದ ಸ್ವರ್ಗವನ್ನು ಪಡೆಯುತ್ತಾನೆ. ಮೂರನೆ ಹೆಜ್ಜೆಯಿಂದ ಬಲೀಂದ್ರನನ್ನು ಪಾತಾಳಕ್ಕೆ ತಳ್ಳುತ್ತಾನೆ. ಇದು ವೈದಿಕರ ಪುರಾಣ ಕಥೆಯ ಸಾರ.

ಇಷ್ಟಾಗಿಯೂ ವೈದಿಕರು ದೀಪಾವಳಿಯಲ್ಲಿ 'ಬಲೀಂದ್ರಪೂಜೆ' ಮಾಡುತ್ತಾರಲ್ಲ ಎಂಬ ಪ್ರಶ್ನೆ ಹುಟ್ಟುವುದು ಸಹಜ. ಇದಕ್ಕೆ ಉತ್ತರವಾಗಿ ವಿದ್ವಾಂಸರ ಅಭಿಪ್ರಾಯಗಳನ್ನೂ ಸೇರಿಸಿಕೊಂಡು ಹೇಳುವುದಾದರೆ-ದೀಪಾವಳಿಯಲ್ಲಿ 'ಬಲೀಂದ್ರ' ಪೂಜೆಗೆ ಬಹಳವಾದ ಮಹತ್ವವೇನು ಕಂಡು ಬರುವುದಿಲ್ಲ. ಅಲ್ಲಿ 'ಮರಪಾಡುನ' (ಮರಹಾಕುವುದು) ಆಚರಣೆಯಾಗಲಿ, 'ಪರ್ಬ'ದಲ್ಲಿ ಆಚರಿಸುವ ಇತರ ಆಚರಣೆಗಳಾಗಲಿ ಕಂಡು ಬರುವುದಿಲ್ಲ. ಬದಲಾಗಿ ಮನೆ ತುಂಬಾ ದೀಪ ಬೆಳಗಿಸುತ್ತಾರೆ. 'ಬಲೀಂದ್ರ'ನನ್ನು ಪಾತಾಳಕ್ಕೆ ತಳ್ಳಿದ ಚಾಣಾಕ್ಷ ವಿಷ್ಣುವನ್ನು ಸ್ತುತಿಸಿ, 'ಬಲೀಂದ್ರ'ನ ಪೂಜೆಯ ಹೆಸರಲ್ಲಿ ಭೂಮಿಯ ಒಡೆತನವನ್ನು ಕಳೆದುಕೊಂಡ ತುಳುವರನ್ನು ಮೆಚ್ಚಿಸುವ ಪ್ರಯತ್ನವಾಗಿದೆಯಷ್ಟೆ. ಇದರಲ್ಲಿ 'ಬಲೀಂದ್ರ' ಭೂಮಿಯನ್ನು ದಾನ ಮಾಡಿದ್ದು ಬ್ರಾಹ್ಮಣನಿಗಿಂತಲೂ ಮುಖ್ಯವಾಗಿ ಅದು ವಿಷ್ಣುವಿಗೆ ಸೇರಿದೆ ಎಂಬುದನ್ನು ನಂಬಿಸುವ ಪ್ರಯತ್ನವಿದೆ. ಬಲಿದಾನ ಕೊಟ್ಟದ್ದು ಅಲೌಕಿಕನಾದ ವಿಷ್ಣುವಿಗೆ ಎಂಬ ವೈಭವೀಕರಣ, ಸ್ತುತಿ ಇದೆಲ್ಲ ತನ್ನ ಪ್ರತಿಭಟನಾಕಾರರನ್ನು ಮೆಚ್ಚಿಸುವ ಪ್ರಯತ್ನವಷ್ಟೆ ಎಂದರೂ ತಪ್ಪಾಗದು. ಅಂದರೆ 'ಬಲಿ' ಚಕ್ರವರ್ತಿಯಿಂದ ಆಡಳಿತ ಕಸಿದುಕೊಂಡರೂ ತುಳುನಾಡಿನ ಜನತೆಯ ಜೊತೆಗೆ ಅನ್ಯೋನ್ಯವಾಗಿ ಬಾಳಬೇಕಾದ ಅನಿವಾರ್ಯತೆ ವೈದಿಕರಿಗಿತ್ತು ಎಂಬುದು ಅರ್ಥವಾಗುತ್ತದೆ. ಮತ್ತು ಅಂತಹ ಸಹಾನುಭೂತಿ ವೈದಿಕರದಾಗಿದೆ ಎಂಬುದೂ 'ಪರ್ಬ'ದ ಕಥೆಯಿಂದ ವೇದ್ಯವಾಗುತ್ತದೆ.

ಈ ಹಿನ್ನೆಲೆಯಲ್ಲಿ 'ಬಲೀಂದ್ರ'ನಿಂದ ಭೂಮಿಯನ್ನು ದಾನವಾಗಿ ಕಸಿದುಕೊಂಡ ವಾಮನಮೂರ್ತಿ ಬ್ರಾಹ್ಮಣ ಅನಂತರ 'ಬಲೀಂದ್ರ'ನಿಗೆ ಹೇಳುವ ಮಾತನ್ನು ವಿಶೇಷವಾಗಿ ಗಮನಿಸಬೇಕು-"ನಿನ್ನ ರಾಜ್ಯ ಎಂಕಲೆಗಾಂಡ್. ಈ ಆಂಡ ಏಳು ಕಡಲಾಪೆ ದಿಕ್ಕ್‌ಗ್ ಪೋಲ' (ನಿನ್ನ ರಾಜ್ಯ ನಮಗಾಯಿತು. ನೀನು ಇನ್ನು ಏಳು ಸಮುದ್ರದ ಆಚೆಗೆ ಹೋಗು) ಆಗ ಬಲೀಂದ್ರ: 'ಎನ್ನ ಊರುನು ಬುಡ್ದು ಪೋವೆರೆ ಎಂಕ್ ಮನಸ್ಸ್ ಇಜ್ಜಪ್ಪಾ ಮಾನಿಕುಲೆ. ಎನ್ನ ನರ ಬದುಕುಲೆನ್ ಬುಡ್ಡು ಪೋವೆರೆ ಮನಸ್ಸಿಜ್ಜಿ' (ಬ್ರಾಹ್ಮಣನೆ, ನನಗೆ ನನ್ನ ಊರು ಬಿಟ್ಟು

ಹೋಗಲು ಮನಸ್ಸಿಲ್ಲ ; ನನ್ನ ಜನರನ್ನು ಬಿಟ್ಟು ಹೋಗಲು ಮನಸ್ಸಿಲ್ಲ) ಎಂದು ಹೇಳುತ್ತಾನೆ. ಆಗ ಬ್ರಾಹ್ಮಣ ಬಲೀಂದ್ರನಿಗೆ ಹೇಳುವ ಮಾತು–'ಈ ಆಂಡಲಾ ಏಳ್ ಕಡಲಾಪೆ ದಿಕ್ ಪೋಲ. ಒಂಜಿ ವರ್ಷೊಡ್ದು ಒಂಜಿ ವರ್ಷ, ಆಟಿದ ಅಮಾಸೆಣ್, ಸೋಣದ ಸಂಕ್ರಾಂತಿ ಆವ ಬೊಂತಲ್ದ ಕೊಡಿ ಪರ್ಬೊಗು ಈ ಆಂಡ ಬಲ್ಲಾ ಬಲಿಯೇಂದ್ರ. ಒಟ್ಟೆ ಓಡೊಡು..., ನಿನ್ನ ಭೂಮಿ ತೂವರೆ ಬಲಾ ಎಂದ್ ಪನ್ಪೆರುಗೆ ಮಾಣಿಕುಲು(ನೀನೀಗ ಏಳು ಸಮುದ್ರದಾಚೆಗೆ ಹೋಗು. ಒಂದು ವರ್ಷದಿಂದ ಒಂದು ವರ್ಷಕ್ಕೆ ಆಷಾಢ ಅಮಾವಾಸ್ಯೆ, ಸೋಣ ಸಂಕ್ರಾಂತಿಯ ಬಳಿಕ ಬೊಂತೆಲ್ ತಿಂಗಳಲ್ಲಿ ತುದಿ ಹಬ್ಬ ಬರುತ್ತದೆ. ಆಗ ಸಾಧ್ಯವಾದರೆ ನೀನು ಬಾ ಬಲಿಯೇಂದ್ರ ತೂತಾದ ದೋಣಿಯಲ್ಲಿ... ನಿನ್ನ ಭೂಮಿ ನೋಡಲು ಬಾ ಎಂದು ಹೇಳಿದರು ಆ ಬ್ರಾಹ್ಮಣರು)"[೯]

"ಇಲ್ಲಿ ಬ್ರಾಹ್ಮಣ ವರ್ಗದ ಸಾಂಪ್ರದಾಯಿಕ ಮನಸ್ಸು ವ್ಯಕ್ತವಾಗಿದೆ. ತಾವು ದಾನವಾಗಿ ಕಸಿದುಕೊಂಡ ಭೂಮಿ ಮುಂದೆಯೂ ಅವರಿಗೆ ಮರಳಿ ಹೋಗದಂತೆ ದೂರಕ್ಕೆ ಹಾಗೂ ಆಳಕ್ಕೆ ಬಲೀಂದ್ರನನ್ನು ತಳ್ಳಿದ್ದು ವ್ಯಕ್ತವಾಗಿದೆ. ಹೀಗೆ ಮೆಟ್ಟಿದರೂ ಮತ್ತೆ ಒಂದು ರೀತಿಯ ಸಹಾನುಭೂತಿ ವ್ಯಕ್ತಪಡಿಸಿ ವರ್ಷಕ್ಕೆ ಮೂರು ದಿನ ರಾಜ್ಯ ಪ್ರವೇಶಿಸುವ ಅವಕಾಶ ಕಲ್ಪಿಸಿಕೊಟ್ಟಿದ್ದಾರೆ"[೧೦] ಎಂದು ಮೇಲಿನ ಸಂನಿವೇಶದ ಕುರಿತು ವಿದ್ವಾಂಸರು ಪಡುವ ಅಭಿಪ್ರಾಯ ಸಮಂಜಸವಾಗಿದೆ. ಆದರೆ 'ಬಲಿ' ತನ್ನ ರಾಜ್ಯಕ್ಕೆ ಬಂದು ಹೋಗುವ ಬಗ್ಗೆ ಜನಪದರು ನೀಡುವ ಮಾಹಿತಿಯಲ್ಲಿ ಸಣ್ಣ ವ್ಯತ್ಯಾಸ ಕಂಡುಬರುತ್ತದೆ. ಅವರು ಹೇಳುವಂತೆ 'ಆಟಿ' ಅಮಾವಾಸ್ಯೆಗೆ ಸೇವಕ, 'ಕಾವೇರಿ ಸಂಕ್ರಾಂತಿ'ಗೆ ಬಲಿಯ ತಾಯಿ 'ಕಾವೇರಿ' ಮತ್ತು 'ಬೊಂತ್ಯೊಲ್ದ' 'ತುದಿ ಪರ್ಬ'ಕ್ಕೆ 'ಬಲಿ'ಯೇ ಬರುವುದಾಗಿದೆ.

ತುಳುವರ 'ಪರ್ಬ' ಆಚರಣೆಗೂ ತುಳುವೇತರರು ಆಚರಿಸುವ 'ದೀಪಾವಳಿ'ಗೂ ಸಮಾನತೆ ಕಂಡು ಬರುವುದಾದರೂ ಉದ್ದೇಶಗಳು ಮಾತ್ರ ಸ್ಪಷ್ಟವಾಗಿ ಬೇರೆಬೇರೆಯೇ ಆಗಿರುವುದು ಅಧ್ಯಯನದಿಂದ ತಿಳಿಯುತ್ತದೆ. "ದೀಪಾವಳಿಯಲ್ಲಿ ನರಕ ಚತುರ್ದಶಿ, ದೀಪಾವಳಿ, ಬಲೀಂದ್ರಪೂಜೆ, ಧನಲಕ್ಷ್ಮೀ ಪೂಜೆ, ಗೋಪೂಜೆ ಇವೆಲ್ಲಾ ಬೇರೆ ಬೇರೆ ಚಾರಿತ್ರಿಕ ಕಾಲಘಟ್ಟದಲ್ಲಿ ಹುಟ್ಟಿಕೊಂಡ, ಒಂದಕ್ಕೊಂದು ಸಂಬಂಧವಿರದ ಘಟನೆಗಳಾಗಿವೆ. ಆದರೆ ಅವೆಲ್ಲಾ ಕಾಲಕ್ರಮೇಣ ಒಂದರೊಡನೊಂದು ಅಂತರ್‌ಸಂಬಂಧವನ್ನು ಪಡೆದು, ದೀಪಾವಳಿಯಲ್ಲಿ ಒಟ್ಟಾಗಿ ಆಚರಣೆಯಾಗುತ್ತಿರುವಂತೆ ಕಂಡು ಬರುತ್ತದೆ. ಆದರೆ 'ಪರ್ಬ'ದಲ್ಲಿ ಮೂರು ದಿನದ ಎಲ್ಲಾ ಬೇರೆ ಬೇರೆ ಕ್ರಿಯೆಗಳು ಒಂದು ಪ್ರಧಾನ ಆಶಯಕ್ಕೆ

ದುಡಿಯುತ್ತಿರುವುದು ಕಂಡುಬರುತ್ತದೆ."[೧೧] ಅಂದರೆ ಪುರಾಣದ ಕಥೆಗಳ ಪ್ರಕಾರ ಬೇರೆ ಬೇರೆ ಹಿನ್ನೆಲೆಯಲ್ಲಿ ದೀಪಾವಳಿಯ ಮೂಲ ಆಚರಣೆಗಳು ಹುಟ್ಟಿಕೊಂಡಿರುವಂತೆ ತಿಳಿಯುತ್ತದೆ. ಆದರೆ ಒಂದೇ ಕಾಲದಲ್ಲಿ ನಿರಂತರವಾಗಿ ಬಂದದ್ದರಿಂದ ಅವುಗಳನ್ನು ಒಟ್ಟಾಗಿ ವಿಜಯದ ಸಂಕೇತದಲ್ಲಿ ದೀಪಾವಳಿ ಎಂದು ರೂಢಿಗತಗೊಳಿಸಿರುವ ಸಾಧ್ಯತೆಗಳು ಹೆಚ್ಚು ವಿಚಾರಣೀಯವಾಗಿ ಕಂಡು ಬರುತ್ತದೆ. ಆದರೆ ತುಳುವರ 'ಪರ್ಬ' ಆಚರಣೆ ಕೇವಲ ಭೂಮಿ ಮತ್ತು ಭೂಮಿಯಲ್ಲಿ ಬೆಳೆಯುವ ಭತ್ತ ಬೇಸಾಯಕ್ಕೆ ಸಂಬಂಧಿಸಿರುವುದು ಎಂಬುದು ಗಮನಾರ್ಹ ಸಂಗತಿ. 'ಪರ್ಬದ' ಕೇಂದ್ರ ಬಿಂದು 'ಬಲೀಂದ್ರ'. ಕ್ಷೇತ್ರ ಕಾರ್ಯದ ಮಾಹಿತಿ ಮತ್ತು 'ತುಳುವಾಲ ಬಲಿಯೇಂದ್ರ' ಪಾಡ್ದನದ ಪಠ್ಯದ ಪ್ರಕಾರ 'ಬಲೀಂದ್ರ' ತುಳುವರ ರಾಜ. ತುಳುನಾಡಿನಲ್ಲಿ ಯಾವುದೋ ಒಂದು ಕಾಲಘಟ್ಟದಲ್ಲಿ ಆಳ್ವಿಕೆ ಮಾಡುತ್ತಿದ್ದ ಜನಪ್ರಿಯ ರಾಜ. "ಮೂಡಾಯಿ ಘಟ್ಟ ಬರಿಡ್ದ್ ಪಡ್ಡಾಯಿ ಸಮುದ್ರ ಬರಿಮುಟ್ಟ ಆಲೊಂದಿತ್ತಿನ ರಾಜೆ. ಗೋವುದಾನ, ವಸ್ತ್ರದಾನ, ಅನ್ನದಾನ, ಪುಣ್ಯದಾನ ಮಲ್ತೊಂದಿತ್ತಿನ ರಾಜೆ"[೧೨] (ಪೂರ್ವದಲ್ಲಿ ಪಶ್ಚಿಮ ಘಟ್ಟದಿಂದ ಪಶ್ಚಿಮದಲ್ಲಿ ಸಮುದ್ರದವರೆಗಿನ ಭೂಪ್ರದೇಶವನ್ನು ಆಳುತ್ತಿದ್ದ ರಾಜ. ಗೋವು, ವಸ್ತ್ರ, ಅನ್ನ ಇತ್ಯಾದಿಯಾಗಿ ದಾನ ಧರ್ಮದ ಮೂಲಕ ರಾಜ್ಯವಾಳುತ್ತಿದ್ದ ರಾಜ.) 'ಬಲಿ' ಚಕ್ರವರ್ತಿಯ ಸತ್ಯ ನ್ಯಾಯ ನೀತಿ ಧರ್ಮಗಳೇ ಅವನ ನಾಶಕ್ಕೆ ಕಾರಣವಾಗಿದೆ. ಆತನ ಆಡಳಿತ ಮತ್ತು ಸಮೃದ್ಧಿಯನ್ನು ಕಂಡ ಸ್ವರ್ಗಲೋಕದ ದೇವತೆಗಳಿಗೆ ಮತ್ಸರವನ್ನು ಹುಟ್ಟಿಸುತ್ತದೆ. ಅವರು ಬಲೀಂದ್ರನ ಪ್ರಾಮಾಣಿಕತೆಯನ್ನು ಒಪ್ಪಿಕೊಳ್ಳಲು ಸಿದ್ಧರಿಲ್ಲದೆ, ಅವನ ನಡತೆಯಲ್ಲಿಯೇ ಅವನನ್ನು ಸೋಲಿಸಲು ವಿಷ್ಣುವನ್ನು ಪ್ರಾರ್ಥಿಸುತ್ತಾರೆ. ವಿಷ್ಣು ವಾಮನಾವತಾರ ತಾಳಿ ಬ್ರಾಹ್ಮಣನಾಗಿ ಬಂದು ಬಲೀಂದ್ರನಿಂದ ಭೂಮಿಯನ್ನು ಮೋಸದಿಂದ ಕಸಿದುಕೊಳ್ಳುತ್ತಾನೆ. ಕೇವಲ ನೆಲೆ ನಿಲ್ಲುವುದಕ್ಕಾಗಿ ಮೂರು ಹೆಜ್ಜೆ ಭೂಮಿಯನ್ನು 'ದಾನ' ಕೇಳಿ ನಂತರದಲ್ಲಿ ಭೂಮಿ ಗಾತ್ರ ಪಡೆದು ಎರಡೂವರೆ ಹೆಜ್ಜೆಯಲ್ಲಿ ರಾಜ್ಯವನ್ನು ಅಳೆದದ್ದು, ಮಾತ್ರವಲ್ಲ ಉಳಿದರ್ಧ ಹೆಜ್ಜೆಯಲ್ಲಿ 'ಬಲೀಂದ್ರ'ನ ತಲೆಯ ಮೇಲೆ ಇಟ್ಟು ತುಳಿದದ್ದು ಹಾಗು ಮುಂದೆಂದೂ ಆತ ಮರಳಿಬಾರದಂತೆ 'ಒಟ್ಟೆ ಓಡೊಡು' (ತೂತು ದೋಣಿಯಲ್ಲಿ) ಕಳುಹಿಸಿಕೊಟ್ಟ ವಿವರ ಪಾಡ್ದನ ಪಠ್ಯ ಮತ್ತು ಜನಪದರು ನೀಡಿದ ಮಾಹಿತಿಯಲ್ಲಿ ಸಿಗುತ್ತದೆ. ಇವುಗಳನ್ನು ಗಮನಿಸಿದರೆ ಜನರ ಪ್ರೀತಿಗೆ ಪಾತ್ರನಾಗಿದ್ದ ರಾಜನೊಬ್ಬ ತಾನು ತನ್ನ ಭೂಮಿಯ ಒಡೆತನವನ್ನು ಬ್ರಾಹ್ಮಣನಿಗೆ ದಾನಕೊಟ್ಟು ಪ್ರಜೆಗಳಿಂದ ದೂರವಾದ ವಿವರ ಕಂಡುಬರುತ್ತದೆ. ಹಾಗಾಗಿ 'ಕಲಿಡ್ದ್ ಮಿತ್ತ್‌ದ ಕಲಿಯಿಜ್ಜಿ, ಬಲಿಡ್ದ್ ಹೆಚ್ಚ ಬಲಿಯಾಯಿನಾಯೆ ಇಜ್ಜಿ'(ಕಳ್ಳುಗಿಂತ ಮಿಗಿಲಾದ ಕಳ್ಳು ಇಲ್ಲ.

ಬಲಿಗಿಂತ ಹೆಚ್ಚು ಬಲಿಯಾದವನಿಲ್ಲ) ಎಂಬ ಮಾತು ಗಾದೆಯಾಗಿ ಚಾಲ್ತಿಯಲ್ಲಿದೆ. ಈ ಮಾಹಿತಿ ವಿವರಗಳನ್ನು ಗಮನಿಸಿದಾಗ 'ಪರ್ಬ' ಆಚರಣೆ ತುಳುನಾಡಿನಲ್ಲಿ ಆಚರಣೆಗೆ ಬಂದಿರುವುದು ಯಾವುದೋ ಒಂದು ಚಾರಿತ್ರಿಕ ಕಾಲಘಟ್ಟದಲ್ಲಿ ಎಂಬುದಕ್ಕೆ ಅವಕಾಶಮಾಡಿಕೊಡುತ್ತದೆ. ವಿದ್ವಾಂಸರುಗಳು ಈಗಾಗಲೇ ಚರ್ಚಿಸಿರುವಂತೆ ತುಳುನಾಡಿನಲ್ಲಿ ಬಲಿ ಹೆಸರಿನ ದ್ರಾವಿಡ ಮೂಲದ ರಾಜ ಆಳ್ವಿಕೆ ಮಾಡುತ್ತಿದ್ದಿರಬೇಕು. ಇಂತಹ ಕಾಲಘಟ್ಟದಲ್ಲೇ ತುಳುನಾಡಿನಲ್ಲಿ ನೆಲೆಯೂರಲು ಉತ್ತರದಿಂದ ಬಂದ ಆರ್ಯರು ಬಲಿಯನ್ನು ಮೋಸಮಾಡಿ ತುಳುನಾಡನ್ನು ತಮ್ಮ ಅಧೀನಕ್ಕೆ ತೆಗೆದುಕೊಂಡು 'ಬಲಿ'ಯನ್ನು ಉಪಾಯದಿಂದ ಗಡಿಪಾರು ಮಾಡಿರುವಂತೆ ಕಂಡು ಬರುತ್ತದೆ. ಇಲ್ಲಿ ವಿಷ್ಣು ಬ್ರಾಹ್ಮಣನಾಗಿ ವೇಷ ಮರೆಸಿ ಬಲಿಯ ಬಳಿಗೆ ಬರುತ್ತಾನೆ ಎಂಬುದು ಆರ್ಯರು ತುಳುನಾಡಿಗೆ ಬಂದ ಸಂಕೇತವಾಗಿ ಕಂಡು ಬರುತ್ತದೆ. ಪಾಡ್ದನ ಮತ್ತು ಮೌಖಿಕ ಮಾಹಿತಿಯ ಪ್ರಕಾರ ವಿಷ್ಣು ವಾಮನಾವತಾರ ತಾಳಿ ಬ್ರಾಹ್ಮಣನಾಗಿ ಘಟ್ಟದ ಮೇಲಿಂದ ತುಳುನಾಡಿಗೆ ಇಳಿದು ಬರುವುದಕ್ಕೂ ಚಾರಿತ್ರಿಕ ಕಾಲಘಟ್ಟವೊಂದರಲ್ಲಿ ವೈದಿಕರು ತುಳುನಾಡಿಗೆ ವಲಸೆ ಬಂದಿರುವುದಕ್ಕೂ ಸಂಬಂಧ ಇರುವಂತೆ ಕಾಣುತ್ತದೆ. ಇತಿಹಾಸಕಾರರ ಸಂಶೋಧನೆಯ ಪ್ರಕಾರ ತುಳುನಾಡಿಗೆ ಬ್ರಾಹ್ಮಣರ ಪ್ರವೇಶವಾದದ್ದು ಕ್ರಿ. ಶ. ೭ನೇ ಶತಮಾನದ ಅನಂತರದಲ್ಲಿ. ಕದಂಬವಂಶದ ಮಯೂರ ಶರ್ಮನಿಂದ ಇದು ಆರಂಭವಾಯಿತು. ಅನಂತರ ಶಂಕರಾಚಾರ್ಯ, ಮಧ್ವಾಚಾರ್ಯ, ರಾಮಾನುಜಾಚಾರ್ಯರು ಇಲ್ಲಿಗೆ ವಲಸೆ ಬಂದು ವೈದಿಕ ಮತವನ್ನು ಪ್ರಚುರಪಡಿಸಿ ಅದರ ಮಠ, ಮಂದಿರಗಳನ್ನು ನಿರ್ಮಿಸಿರುವುದು ಚರಿತ್ರೆಯಿಂದ ತಿಳಿಯುತ್ತದೆ. ಅಲ್ಲಿಯವರೆಗೆ ತುಳುನಾಡಿನಲ್ಲಿ ತುಳುಭಾಷಿಕರಾದ ತುಳುಜನಾಂಗ ನೆಲೆಸಿತ್ತು ಎಂಬುದನ್ನು ತಮಿಳಿನ ಸಂಗಮ ಕಾಲದ ಸಾಹಿತ್ಯ ಮತ್ತು ತುಳುನಾಡಿನಲ್ಲಿ ದೊರೆಯುವ ಶಾಸನಗಳು ಸ್ಪಷ್ಟಪಡಿಸುವುದನ್ನು ಸಂಶೋಧಕರು ಕಂಡುಕೊಂಡಿದ್ದಾರೆ. ಹಾಗಾಗಿ ತುಳುನಾಡಿನಲ್ಲಿ ವೈದಿಕರ ಆಗಮನದ ಚಾರಿತ್ರಿಕ ಸಂಗತಿಯೊಂದು ಪುರಾಣರೂಪ ಪಡೆದು ಅದಕ್ಕೆ ಐತಿಹ್ಯಗಳು ಸೇರಿ 'ಪರ್ಬ' ಆಚರಣೆಗೆ ಮೂಲ ಕಾರಣವಾಗಿರಬೇಕು. ಇದಕ್ಕೆ ಪೂರಕವಾಗಿ 'ಪಾಡ್ದನ'ದಲ್ಲಿ ಪರ್ಬದ ಮಾಹಿತಿ ಐತಿಹ್ಯಗಳು ದೊರೆಯುತ್ತವೆ. ಪಾಡ್ದನ ಸಾಹಿತ್ಯವೂ ಸುಮಾರು ೧೫ನೇ ಶತಮಾನದ ನಂತರದ ರಚನೆಗಳಾಗಿರುವುದು ಇದನ್ನು ಇನ್ನಷ್ಟು ಪುಷ್ಟೀಕರಿಸುತ್ತದೆ. ತುಳುನಾಡಿಗೆ ಬಂದು, ಬಲಿಯನ್ನು ಬಲಿತೆಗೆದುಕೊಂಡು ನೆಲೆ ನಿಂತ ವೈದಿಕರು ಈ ಕುರಿತು ಪುರಾಣ ಸೃಷ್ಟಿಸಿಕೊಂಡಿರಬೇಕು. ನಂತರ ಆ ಪುರಾಣದ ಪ್ರಭಾವಕ್ಕೊಳಗಾಗಿ ತುಳುವರು ಪಾಡ್ದನ ರಚಿಸಿರಬೇಕು. ಆದುದರಿಂದ

ದೀಪಾವಳಿ ಆಚರಣೆ ನರಕಾಸುರ ವಧೆ ಮತ್ತು ಲಕ್ಷ್ಮೀ ಪೂಜೆಯ ಹಿನ್ನೆಲೆಯಲ್ಲಿ ಮೊದಲೇ ಇತ್ತಾದರೂ 'ಬಲೀಂದ್ರ' ಪೂಜೆಗೆ ಸಂಬಂಧಿಸಿದ ಆಚರಣೆ ನಂತರ ಸೇರಿಕೊಂಡಿರುವಂತೆ ತೋರುತ್ತದೆ. ಆದುದರಿಂದ ವೈದಿಕರ ದೀಪಾವಳಿ ಆಚರಣೆಯ ಸಂದರ್ಭದಲ್ಲಿ ತುಳುವರು 'ಪರ್ಬ' ಆಚರಣೆ ಪ್ರಾರಂಭಿಸಿರಬೇಕು. ಈ ಹಿನ್ನೆಲೆಯಲ್ಲಿ ತುಳುನಾಡಿಗೆ ಆರ್ಯರಾಗಮನ ತುಳು ನಾಡಿನಲ್ಲಿ 'ಪರ್ಬ' ಆಚರಣೆಗೆ ಮೂಲದ್ರವ್ಯವಾಗಿರುವಂತೆ ಕಂಡುಬರುತ್ತದೆ; ಮತ್ತು ಈ ಮೂಲಕ 'ಪರ್ಬ' ಆಚರಣೆಯಲ್ಲಿ ಪ್ರತಿಭಟನೆಯ ಸೂಚನೆಗಳಿರುವುದನ್ನು ಗಮನಿಸಬಹುದಾಗಿದೆ.

'ಪರ್ಬ' ಮತ್ತು ದೀಪಾವಳಿಗೆ ಸಂಬಂಧಿಸಿದಂತೆ ತುಳುವರ ಪಾಡ್ದನ ಮತ್ತು ವೈದಿಕರ ಪುರಾಣದಲ್ಲಿ ದೊರೆಯುವ ವಿವರಗಳಲ್ಲಿ ಸಮಾನತೆಯಿದೆ. ವೈದಿಕರ ಕಥೆಯಲ್ಲಿ ವಿಷ್ಣು ಬ್ರಾಹ್ಮಣನಾಗಿ ಬಂದು ಬಲೀಂದ್ರನಲ್ಲಿ ಮೊದಲ ಹೆಜ್ಜೆಯಲ್ಲಿ ಭೂಮಿಯನ್ನು ಎರಡನೆಯ ಹೆಜ್ಜೆಯಲ್ಲಿ ಆಕಾಶವನ್ನು, ಮೂರನೆಯ ಹೆಜ್ಜೆಯಲ್ಲಿ 'ಬಲೀಂದ್ರ'ನನ್ನು ವಶಪಡಿಸಿಕೊಳ್ಳುತ್ತಾನೆ. ಆದರೆ ತುಳುವರ ಕಥೆಯ ಪ್ರಕಾರ ಬ್ರಾಹ್ಮಣ ಎರಡೂವರೆ ಹೆಜ್ಜೆಯಲ್ಲಿ ಭೂಮಿಯನ್ನು ಉಳಿದರ್ದ ಹೆಜ್ಜೆಯನ್ನು ಬಲಿಯ ತಲೆ ಮೇಲಿಟ್ಟು ಆತನನ್ನು ಆಳಕ್ಕೆ ತಳ್ಳಿದ ವಿವರ ಸಿಗುತ್ತದೆ. ದೀಪಾವಳಿಯ ಕಥೆಯಲ್ಲಿ 'ಬಲೀಂದ್ರ' ಸ್ವರ್ಗವನ್ನು ವಶಪಡಿಸಿಕೊಂಡಿದ್ದ. ಹಾಗಾಗಿ ವಿಷ್ಣು ಸ್ವರ್ಗವನ್ನು ಅಂದರೆ ಆಕಾಶವನ್ನು ಒಂದು ಹೆಜ್ಜೆಯಲ್ಲಿ ವಶಪಡಿಸಿಕೊಂಡ ವಿವರ ಸಿಗುತ್ತದೆ. ಈ ವ್ಯತ್ಯಾಸಗಳನ್ನು ಗಮನಿಸಿದಾಗ 'ಬಲೀಂದ್ರ' ತುಳು ನಾಡಿನ ಪ್ರಸಿದ್ಧ ರಾಜನಾಗಿದ್ದ ಎಂಬುದಾಗಿಯೇ ಧ್ವನಿಸುತ್ತದೆ. ಈ ಹಿನ್ನೆಲೆಯಲ್ಲಿ ತುಳುವರ 'ಪರ್ಬ' ಮತ್ತು ವೈದಿಕರ ದೀಪಾವಳಿ ಕುರಿತು ತೌಲನಿಕವಾಗಿ ಚರ್ಚಿಸಿರುವ ಶ್ರೀಧರ ಟಿ.ಎನ್. ಅವರು ಮುಖ್ಯವಾಗಿ ಈ ಕೆಳಗಿನ ಕೆಲವು ಅಂಶಗಳನ್ನು ಮಂಡಿಸುತ್ತಾರೆ.[೧೩]

- ತುಳುವರು ಭೂಮಿಯ ಮೇಲಿನ ಒಡೆತನವನ್ನು ಬಿಟ್ಟುಕೊಟ್ಟ ಚಾರಿತ್ರಿಕ ದಿನವಾಗಿ 'ಪರ್ಬ' ಇದೆ. ಈ ಆಚರಣೆ ಇತಿಹಾಸದ ವಿವರವನ್ನು ಖಚಿತಪಡಿಸುತ್ತದೆ. ಮತ್ತು ತುಳುವ ಮೌಖಿಕ ಪರಂಪರೆಯ ಮೇಲೆ ಅಕ್ಷರಸ್ಥ ಪರಂಪರೆ ಬೀರಿದ ಪ್ರಭಾವವನ್ನು ಧ್ವನಿಸುತ್ತದೆ.
- 'ಬಲೀಂದ್ರ'ನನ್ನು ಕರೆಯುವ ಹಾಡಿನಲ್ಲಿ ಬ್ರಾಹ್ಮಣರ ಭೂಮಿಯ ಮೇಲಿನ ವ್ಯಾಮೋಹ ವ್ಯಕ್ತವಾಗಿದೆ.

- ವೈದಿಕರ 'ಬಲೀಂದ್ರ' ಪೂಜೆಯು ಅನಕ್ಷರಸ್ಥ ಮೌಖಿಕ ಪರಂಪರೆಯ ಪ್ರತಿಭಟನೆಯನ್ನು ತಣ್ಣಗಾಗಿಸುವ ಮತ್ತು ವೈದಿಕ ಪರಂಪರೆಗೆ ಜನತೆಯನ್ನು ಒಪ್ಪಿಸುವ ಉದ್ದೇಶ ಹೊಂದಿದೆ.
- 'ಪರ್ಬ'ವು 'ದೀಪಾವಳಿ' ಯಂತೆ ಒಟ್ಟು ಮೂರುದಿನಗಳ ಆಚರಣೆಯಾದರೂ ಪ್ರಧಾನವಾಗಿ ಆಚರಣೆಯ ಕ್ರಿಯೆಯನ್ನು ಹೊಂದಿರುವುದು ತುದಿಹಬ್ಬದಂದು.
- 'ಪರ್ಬ' ಭೂ ಒಡೆಯ ಮತ್ತು ಭೂ ರಹಿತ ಒಕ್ಕಲಿಗ ಇವರ ನಡುವಿನ ಸೂಕ್ಷ್ಮವಾದ ಸಂಘರ್ಷವನ್ನು ಅದರ ಎಲ್ಲಾ ಸ್ವರೂಪದೊಂದಿಗೆ ಧ್ವನಿಸುತ್ತದೆ.
- ತುದಿ ಹಬ್ಬದಂದು ರಾತ್ರಿ ಕತ್ತಲೆಯಲ್ಲಿ 'ಬಲೀಂದ್ರನ ಹಾಡು ಹಾಡುವ ಕ್ರಿಯೆ ಸಾಂಕೇತಿಕವಾಗಿ ವೈದಿಕ ಧರ್ಮಕ್ಕೆ ತೋರುವ ಪ್ರತಿಭಟನೆಯೇ ಆಗಿದೆ. ಹಾಡಿನ ಕೊನೆಯಲ್ಲಿ 'ಕೂ' ಎಂಬ ಮಾರುತ್ತರ ಭೂ ಒಡೆಯರಲ್ಲಿ ಭಯವನ್ನು ಹುಟ್ಟಿಸುವ ಆಶಯವನ್ನು ಹೊಂದಿದೆ.
- 'ಬಲೀಂದ್ರ' ತನ್ನ ರಾಜ್ಯವನ್ನು ಕಳೆದುಕೊಂಡ ಕಥೆಯು ಇಡೀ ತುಳುವ ಜನಾಂಗ ಬಲಿಯಾದ ವ್ಯಾಪಕತೆಯನ್ನು ಹೇಳುತ್ತದೆ ಮತ್ತು ವೈದಿಕರ 'ಬಲೀಂದ್ರ'ನ ಕಲ್ಪನೆಗೂ ಜನಪದರ 'ಬಲೀಂದ್ರ 'ಕಲ್ಪನೆಗೂ ವ್ಯತ್ಯಾಸವಿದೆ. ಜನಪದರ ಪ್ರಕಾರ 'ಬಲೀಂದ್ರ' ಸಮೃದ್ಧಿ ಫಲವಂತಿಕೆಯನ್ನು ಸಂಕೇತಿಸುತ್ತಾನೆ.
- ತುಳುವರು ಮೂಲ ಸ್ತರದಲ್ಲಿ ದೇವರು ಇತ್ಯಾದಿಗಳನ್ನು ಪೂಜಿಸುವ ಬದಲು ತಮ್ಮ ಉದ್ಯೋಗದಲ್ಲಿ ನೆರವಾಗುವ ವಸ್ತುಗಳಿಗೆ ಪೂಜೆಯನ್ನು ಕೊಡುತ್ತಾರೆ.
- ತುಳುವರ ಎಲ್ಲಾ ವಹಿವಾಟುಗಳು ಸಾಮಾನ್ಯವಾಗಿ 'ಪರ್ಬ'ದಿಂದ ಪರ್ಬಕ್ಕೆ ಮುಕ್ತಾಯ.
- ವೈದಿಕ ದೀಪಾವಳಿ 'ಪರ್ಬ'ದ ಮೇಲೆ ತನ್ನ ಪ್ರಭಾವವನ್ನು ಬೀರಿದೆ.

ಈ ಮೇಲಿನ ಅಂಶಗಳನ್ನು ಒಪ್ಪಿಕೊಳ್ಳಬಹುದಾಗಿದೆ; ಮತ್ತು ತುಳುವರ 'ಪರ್ಬ' ಆಚರಣೆ ನಿರ್ದಿಷ್ಟ ಕಾಲಘಟ್ಟವೊಂದರಲ್ಲಿ ತುಳುನಾಡಿನಲ್ಲಾದ ಐತಿಹಾಸಿಕ ಪಲ್ಲಟವೊಂದರ ಸ್ಮರಣಾರ್ಥವಾಗಿ ಆಚರಣೆಯಲ್ಲಿ ಬಂದು ಅತ್ಯಂತ ಪ್ರಸಿದ್ಧಿಯನ್ನು ಪಡೆದುಕೊಂಡಿರುವಂತಿದೆ. ಅಂದರೆ ಇದು ವೈದಿಕರ ಆಗಮನದೊಂದಿಗೆ ಆಚರಣೆಗೆ ಬಂತು ಎಂಬುದನ್ನು ಪುಷ್ಟೀಕರಿಸಲು ಸಿಗುವ ಇನ್ನೊಂದು ಅಂಶ. ಎಂದರೆ ವೈದಿಕ ಕಲ್ಪನೆಯ ಚಾಂದ್ರಮಾನ ತಿಂಗಳ ಅನುಕರಣೆ ಪರ್ಬದ ದಿನವನ್ನು ನಿಗದಿಗೊಳಿಸುತ್ತದೆ ಎಂಬುದು. ೨೦ನೆಯ ಶತಮಾನದಲ್ಲಿ ಭಾರತದ

ಸ್ವಾತಂತ್ರ್ಯ ಸಂಗ್ರಾಮದ ಹಿನ್ನೆಲೆಯಲ್ಲಿ ಚೌತಿಹಬ್ಬ ಭಾರತದಲ್ಲಿ ಅತ್ಯಂತ ಪ್ರಸಿದ್ಧಿಯನ್ನು ಪಡೆದಂತೆ 'ಪರ್ಬ'ವೂ ಒಂದು ಪ್ರಾದೇಶಿಕ ಸಾಮಾಜಿಕ ಅಗತ್ಯತೆಯ ಹಿನ್ನೆಲೆಯಲ್ಲಿ ಹುಟ್ಟಿಕೊಂಡಿರುವಂತೆ ಕಂಡುಬರುತ್ತದೆ.

ತುಳುವರ 'ಪರ್ಬಾ'ಚರಣೆಯ ಮೊದಲ ದಿನದ 'ಮೀಪಿಪರ್ಬದ' ಕುರಿತು ವಿದ್ವಾಂಸರು ಚರ್ಚಿಸಿದ್ದಾರೆ. 'ಪರ್ಬ'ದ ದಿನಗಳಲ್ಲಿ ಕೃಷಿ ಕೆಲಸಗಳಿಗೆ ರಜಾ ದಿನಗಳು ಮತ್ತು ಸಂಭ್ರಮದ ದಿನಗಳು ಕೂಡ. 'ಏಣೇಲು' ಬೆಳೆ ಕೊಯ್ಲಾಗಿ ಮನೆ ತುಂಬಿಸಿಕೊಂಡಿರುವ ಸಮೃದ್ಧತೆಯ ಸಮಯ. ಅನುಕೂಲಕರ ವಾತಾವರಣ ಮತ್ತೊಂದೆಡೆ. ಈ ನೆಲೆಯಲ್ಲಿ 'ಪರ್ಬ'ದ 'ಮೀಪಿ ಪರ್ಬ'ಕ್ಕೆ ಮಹತ್ವವಿದೆ. ಮೈ ಮನ ಮನೆಗಳನ್ನು ಶುಚಿಯಾಗಿಟ್ಟು ರುಚಿಕರವಾದ ತಿಂಡಿ ತಿನಿಸು ಅನ್ನ ಆಹಾರಗಳನ್ನು ಸೇವಿಸುವುದು ಹಬ್ಬ ಆಚರಣೆಗಳಲ್ಲಿ ಅತ್ಯಂತ ವಿಶೇಷ ಮತ್ತು ಧಾರ್ಮಿಕ ಹಿನ್ನೆಲೆಯಲ್ಲಿ ಸ್ವಯಂ ಪ್ರೇರಣೆಯನ್ನು ಇಲ್ಲಿ ಗುರುತಿಸಬಹುದಾಗಿದೆ. ಯಾವುದೇ ಆಚರಣೆಗಳ ಬದ್ಧತೆಯ ಹಿನ್ನೆಲೆಯಲ್ಲಿ ಮೊದಲು ಮಾಡುವ ಕೆಲಸ ಪರಿಸರವನ್ನು ಶುದ್ಧಗೊಳಿಸುವುದಾಗಿರುತ್ತದೆ. ಈ ಹಿನ್ನೆಲೆಯಲ್ಲಿ 'ಮೀಪಿಪರ್ಬ'ವೂ ಶುಚೀರ್ಭೂತರಾಗಿ 'ಪರ್ಬ' ಆಚರಣೆಗೆ ಮಾನಸಿಕ ಮತ್ತು ದೈಹಿಕವಾಗಿ ಸಿದ್ಧತೆಯಾಗುವುದು ಮತ್ತು ಮಳೆಗಾಲ ಕಳೆದು ಚಳಿಗಾಲ ಪ್ರಾರಂಭವಾಗುವ ಸಂಕ್ರಮಣದ ಕಾಲವಾದ್ದರಿಂದ ಪ್ರಕೃತಿಯ ನೈಸರ್ಗಿಕ ಪ್ರಕ್ರಿಯೆಯಿಂದ ತಮ್ಮ ದೇಹವನ್ನು ರಕ್ಷಿಸಿ ಸುಸ್ಥಿತಿಯಲ್ಲಿಟ್ಟುಕೊಳ್ಳುವ ಆಶಯ ಇಲ್ಲಿ ಹೆಚ್ಚು ಪ್ರಸ್ತುತವಾಗಿ ಕಂಡು ಬರುತ್ತದೆ. ವಿದ್ವಾಂಸರಾದ ಶ್ರೀಧರ ಟಿ.ಎನ್. ಅವರು – "ನನ್ನ ಕೆಲವು ವಕ್ತೃಗಳು ಪರ್ಬದ ಮೀಯುವ ಕ್ರಿಯೆಯನ್ನು ಪ್ರಕೃತಿಯ ನೈಸರ್ಗಿಕ ಪ್ರಕ್ರಿಯೆಯಿಂದ ತಮ್ಮ ದೇಹವನ್ನು ರಕ್ಷಿಸಿ ಸುಸ್ಥಿತಿಯಲ್ಲಿಟ್ಟುಕೊಳ್ಳುವ ರಕ್ಷಣೆಯ ಕ್ರಿಯೆ ಇದು ಎಂದು ಭಾವಿಸಿದ್ದಾರೆ. ಮೀಯುವ ಕ್ರಿಯೆಯ ಕಾಲವನ್ನು ಗಮನಿಸಿದರೆ ಇದನ್ನು ಒಪ್ಪುವ ಸಾಧ್ಯತೆ ಇದೆ. ಪರ್ಬ ಆಚರಣೆಯಾಗುವುದು ಚಳಿಗಾಲದ ಪ್ರಾರಂಭದ ದಿನಗಳಲ್ಲಿ. ಮುಂದೆ ಬರಲಿರುವ ವಿಪರೀತ ಚಳಿಯಿಂದ ಮನುಷ್ಯನ ದೇಹ ಸ್ಥಿತಿಯನ್ನು ಕಾಪಾಡುವ ಕಾರಣಕ್ಕೆ ಎಣ್ಣೆ ಹಚ್ಚಿ ಸ್ನಾನ ಜರಗುತ್ತದೆ ಎಂದು ನಾವು ಆ ಹಂತದಲ್ಲಿ ಒಪ್ಪುವ ಸಾಧ್ಯತೆ ಇದೆಯಾದರೂ, ಅವರ ಇತರ ಕ್ರಿಯೆಗಳನ್ನು ಗಮನಿಸಿದಾಗ ಅವರ ವಿವರಣೆಯನ್ನು ನಿರಾಕರಿಸುವುದು ಅನಿವಾರ್ಯವಾಗುತ್ತದೆ. ಅಂದರೆ ಅವರ ಉದ್ಯೋಗಿ ಸಂಬಂಧಿಯಾದ ನೇಗಿಲು, ಹಾರೆ, ಪಿಕ್ಕಾಸು, ಹಲಗೆ ಇತ್ಯಾದಿ ವಸ್ತುಗಳನ್ನು ಸ್ವಚ್ಛ ಮಾಡಿಡುವ ಕ್ರಿಯೆಯನ್ನು ಗಮನಿಸಿದರೆ, ಅವರ ಮೀಯುವ ಕ್ರಿಯೆ ಮರುದಿನ ಬರಲಿರುವ ತಮ್ಮ ಅರಸ ಬಲೀಂದ್ರನನ್ನು ಸ್ವಾಗತಿಸಲು ಅವರು ಮಾನಸಿಕವಾಗಿ

ಸಿದ್ಧರಾಗುವುದೇ ಆಗಿದೆ. ಇಲ್ಲಿ ತುಳುವರು ತಮ್ಮ ಮನಸ್ಸಿನ ಶುದ್ಧತೆಯ ಪರಿಕಲ್ಪನೆಯನ್ನು ತಮ್ಮ ದೇಹಕ್ಕೂ ಅಳವಡಿಸಿದ್ದು ಮಾತ್ರವಲ್ಲದೆ, ತಾವು ನಿತ್ಯ ಉಪಯೋಗಿಸುವ ವಸ್ತುಗಳಿಗೂ ಅನ್ವಯಿಸಿದ್ದು ಕಂಡು ಬರುತ್ತದೆ. ಹಳ್ಳಿಯಲ್ಲಿ ಗ್ರಾಮಸ್ಥರು ತಮ್ಮ ಪಟೇಲ, ಗುರಿಕಾರ ಇತ್ಯಾದಿ ಮುಖಂಡರನ್ನು ಭೇಟಿಯಾಗುವಾಗ ತಾವು ಒಂದು ನಿರ್ದಿಷ್ಟ ಶಿಸ್ತಿನಲ್ಲಿರಬೇಕೆಂದು ಭಾವಿಸುವುದನ್ನು ನಾವು ಗಮನಿಸಿದರೆ ಅವರ ಮೀಯುವ ಕ್ರಿಯೆ ಕೂಡ ರಾಜನನ್ನು ಸ್ವಾಗತಿಸಲು ಅವರು ಮಾನಸಿಕವಾಗಿ ತಯಾರಾಗುವುದೇ ಆಗಿದೆ. ಎಂಬುದು ಮನವರಿಕೆಯಾಗುತ್ತದೆ"೧೪ ಎಂದು ವಿಶ್ಲೇಷಿಸಿದ್ದಾರೆ. ಆದರೆ ಎಣ್ಣೆ ಹಚ್ಚಿ ಸ್ನಾನಮಾಡುವ ಕ್ರಿಯೆಯನ್ನು ಕೇವಲ ಮಾನಸಿಕ ತಯಾರಿ ಎಂದಷ್ಟೇ ತಿಳಿಯುವುದು ಅಷ್ಟೊಂದು ಪ್ರಸ್ತುತವೆನಿಸುವುದಿಲ್ಲ. ಋತುಪರಿವರ್ತನೆಗೆ ತಕ್ಕಂತೆ ದೈಹಿಕವಾದ ಸಾಮರ್ಥ್ಯವನ್ನು ಕಾಯ್ದುಕೊಳ್ಳುವ ವೈಜ್ಞಾನಿಕ ಸತ್ಯವನ್ನು ನಾವು ತಿಳಿದುಕೊಳ್ಳಬೇಕಾಗುತ್ತದೆ.

ತುಳುವರ 'ಪರ್ಬದ' ಆಚರಣೆಯಲ್ಲೂ ಸಾಮಾನ್ಯವಾಗಿ ಕೆಲವೊಂದು ಸಣ್ಣ ಪುಟ್ಟ ವ್ಯತ್ಯಾಸಗಳು ಕಂಡು ಬರುತ್ತವೆ. ಅವು ಬಳಸುವ ವಸ್ತುಗಳಲ್ಲಿ ಇರಬಹುದು; ಇಲ್ಲವೆ ಆಚರಿಸುವ ದಿನಗಳಲ್ಲಿ ವ್ಯತ್ಯಾಸವಾಗುವುದಿರಬಹುದು. ಉದಾಹರಣೆಗೆ ಮಂಗಳೂರು ಕಡೆಗಳಲ್ಲಿ 'ಬಿಲಕ್ಕಿ ಮರ' (ಬಲೀಂದ್ರಮರ)ವೆಂದು 'ಪಾಲೆಮರ' (ಹಾಲೆಮರ)ದ ಬದಲಿಗೆ ಹಲಸಿನಮರವನ್ನು ಹಾಕುತ್ತಾರೆ. ಇನ್ನು ಕೆಲವರು ಪೊಂಗರೆ, ಕಾನಜೆ(ರಾಮಪತ್ರೆ) ಇಲ್ಲವೆ 'ಸೇರೆ' ಮರಗಳನ್ನೂ ಹಾಕುತ್ತಾರಂತೆ. ಇದಕ್ಕೆ ಬಹಳ ಗಂಭೀರವಾದ ಅರ್ಥವನ್ನು ಹುಡುಕುವ ಅಗತ್ಯವೇನೂ ಕಾಣುವುದಿಲ್ಲ. ಬದಲಾಗಿ ಭೌತಿಕ ವಸ್ತುಗಳ ಲಭ್ಯತೆಯ ಹಿನ್ನೆಲೆಯಲ್ಲಿ ವಸ್ತುಗಳ ಬಳಕೆಯಲ್ಲಿ ವ್ಯತ್ಯಾಸವಾಗುತ್ತದೆ ಎಂಬುದೇ ಸರಿಯೆಂದೆನಿಸುತ್ತದೆ. ಹಾಲು ಕೊಡುವ 'ಪಾಲೆಮರ' (ಹಾಲೆಮರ)ದ ಬದಲಿಗೆ ಹಾಲು ಕೊಡುವ ಇತರ ಮರಗಳನ್ನು ಬಳಸುವುದರಲ್ಲಿ ಅರ್ಥವಿದೆ; ಮತ್ತು ಅವುಗಳಿಗೂ ತುಳುವರಲ್ಲಿ ಸಾಮಾಜಿಕವಾದ, ಧಾರ್ಮಿಕವಾದ ಪ್ರಾಶಸ್ತ್ಯವಿದೆ ಎಂಬುದನ್ನು ಗಮನದಲ್ಲಿಟ್ಟುಕೊಳ್ಳಬೇಕಾಗುತ್ತದೆ.

ಇನ್ನು ಮುಲ್ಕಿ ಹೊಳೆಯ ಆ ಕಡೆಯ ಪ್ರದೇಶಗಳಲ್ಲಿ ತುಳುವರು 'ದೇವೆರೆಪರ್ಬ' ದಂದೆ 'ಬಲೀಂದ್ರ' ಪೂಜೆಯನ್ನು ಆಚರಿಸುವ ಮಾಹಿತಿಯಿದೆ. ಆದರೆ 'ಗೋಪೂಜೆ'ಯನ್ನು ಮಾತ್ರ ತುದಿಹಬ್ಬ(ಬಲಿಪಾಡ್ಯಮಿ)ಯಂದೇ ಆಚರಿಸುವ ಮೂಲಕ ಮೂರುದಿನದ 'ಪರ್ಬ' ಆಚರಿಸುತ್ತಾರಂತೆ. ಇಲ್ಲಿಯ ದಿನ ವ್ಯತ್ಯಾಸಕ್ಕೆ ಕಾರಣ ಏನು ಎಂದು ಸಹಜವಾಗಿ ಪ್ರಶ್ನೆ ಉದ್ಭವಿಸುತ್ತದೆ. ಇದಕ್ಕೆ ಶ್ರೀಧರ ಟಿ.ಎಸ್. ಅವರು ಸಂಗ್ರಹಿಸಿದ ಉತ್ತರ ಈ ರೀತಿ ಇದೆ.

'ಬಲೀಂದ್ರ' ರಾಜ್ಯ ಸಂದರ್ಶಿಸುತ್ತ ಉತ್ತರದಿಂದ ದಕ್ಷಿಣಕ್ಕೆ ಬರುತ್ತಾನೆ. ಮುಲ್ಕಿ ಹೊಳೆಯ ಆ ಕಡೆಯಲ್ಲಿ 'ಬಲೀಂದ್ರ' ಅಮಾವಾಸ್ಯೆ ದಿನ ಇದ್ದುದರಿಂದ ಆ ಕಡೆಯವರು ಆ ದಿನವೇ ಬಲಿ ಪೂಜೆ ಮಾಡುತ್ತಾರಂತೆ. ಹೊಳೆಯ ಈ ಕಡೆಗೆ ಬರುವಾಗ ಅಮಾವಾಸ್ಯೆ ಕಳೆದು ಬೆಳಕಾಯಿತು. ಹಾಗಾಗಿ ಈ ದಕ್ಷಿಣ ಭಾಗದ ಜನರು ಪಾಡ್ಯದಂದು 'ಬಲೀಂದ್ರ' ಪೂಜೆ ಮಾಡುತ್ತಾರಂತೆ.[೧೫] ಇದಕ್ಕಿಂತ ಭಿನ್ನವಾದ ಇನ್ನೊಂದು ವಿವರಣೆಯನ್ನು ಕೊಟ್ಟಿದ್ದಾರೆ. ಮಧ್ಯಯುಗೀನ ಆಳುಪ ಕಾಲದಲ್ಲಿ ತುಳುನಾಡು ಸೀಮೆಗಳಾಗಿ ಬೇರೆ ಬೇರೆ ಆಳರಸರ ಆಡಳಿತಕ್ಕೆ ಒಳಪಟ್ಟಿತ್ತು. ಹೀಗೆ ಬೇರೆ ಬೇರೆ ಆಡಳಿತ ಘಟಕಕ್ಕೆ ತುಳುನಾಡು ಒಳಗಾಗಿದ್ದರೂ ಅಲ್ಲಿಯ ಜನರಲ್ಲಿ ವೈವಾಹಿಕ ಸಂಬಂಧ ಏರ್ಪಡುತ್ತಿತ್ತು. ಇದರಿಂದ ಎರಡೂ ಕಡೆಯ ನೆಂಟರಿಷ್ಟರು 'ಪರ್ಬ'ದಲ್ಲಿ ಸೇರಬೇಕು ಎಂಬ ಆಶಯವೇ ಪರ್ಬಾಚರಣೆ ಎರಡು ದಿನಗಳಲ್ಲಿ ನಡೆಯುವುದಕ್ಕೆ ಕಾರಣವಂತೆ.[೧೬] ಈ ಎರಡೂ ಮಾಹಿತಿಗಳಲ್ಲೂ ಹೊಳೆಯೊಂದು ಆಚರಣೆಗಳಲ್ಲಾಗುವ ವ್ಯತ್ಯಾಸಕ್ಕೆ ಪ್ರಮುಖ ಕಾರಣವಾಗಿರುವ ಐತಿಹ್ಯವಿರುವುದು ಕಂಡು ಬರುತ್ತದೆ.

ತುಳುವರ 'ಪರ್ಬ' ಆಚರಣೆಯಲ್ಲಿ ಕಂಡುಬರುವ ಗೋಪೂಜೆ, ಕೃಷಿ ಸಲಕರಣೆಗಳ ಪೂಜೆ, ಕರುಗಳಿಗೆ ಹೆಸರಿಡುವ ಕ್ರಮ, ಹಿರಿಯರಿಗೆ 'ಬಜಿಲುಪಾಡುನ' ಕ್ರಮ ಮತ್ತು 'ಕರಿಪರ್ಬ'ದ ಆಚರಣೆಯ ಭಾಗವಾಗಿ ಬಡವರಿಗೆ-ಕಾರ್ಮಿಕರಿಗೆ 'ಪರ್ಬ'ದ ತಿನಿಸುಗಳನ್ನು ಪ್ರೀತಿಯಿಂದ ನೀಡುವ ಕ್ರಮಗಳಲ್ಲೆಲ್ಲ ಧಾರ್ಮಿಕ ಶ್ರದ್ಧೆಯಿರುವುದು ಕಂಡುಬರುತ್ತದೆ. 'ಬಲಿ' ತುಳುನಾಡಿನ ರಾಜನಾಗಿ ತುಳುವರನ್ನು ಕೃಷಿ ಚಟುವಟಿಕೆಗಳಿಗೆ ಬಹಳಷ್ಟು ಪ್ರೋತ್ಸಾಹ ನೀಡಿ ಉತ್ತಮ ಆಡಳಿತ ನೀಡಿರುವುದರಿಂದ ಅವನ ಸ್ಮರಣಾರ್ಥವಾಗಿ 'ಬಲೀಂದ್ರ'ಪೂಜೆ ಮಾಡುತ್ತಾರೆಂದರೆ, ಉಳಿದ ಆಚರಣೆಗಳೂ ಅಷ್ಟೇ ಮಹತ್ವಪೂರ್ಣವಾದವು. ಯಾಕೆಂದರೆ ತುಳುವರು ಭತ್ತಬೇಸಾಯವನ್ನು ದೇವರ ಕೆಲಸವೆಂದೇ ನಂಬಿಕೊಂಡು ಬಂದವರು. ಭತ್ತ ತುಳುವರ ಪಾಲಿನ ದೇವರು. ಹಾಗಾಗಿ ಭತ್ತದ ಕೃಷಿಗೆ ಪೂರಕವಾಗಿರುವ ಎಲ್ಲ ವಸ್ತು ವೃತ್ತಿಗಳನ್ನು ವರ್ಷದಲ್ಲಿ ಒಂದು ದಿನವಾದರೂ ಸ್ಮರಿಸುವ, ಭಕ್ತಿಯಿಂದ ಪೂಜಿಸುವ ಧಾರ್ಮಿಕ ಶ್ರದ್ಧೆ ಎದ್ದು ಕಾಣುತ್ತದೆ. ಈ ಎಲ್ಲ ಅಂಶಗಳನ್ನು ಗಮನಿಸುವಾಗ ತಿಳಿದು ಬರುವ ವಿಚಾರ ಏನೆಂದರೆ ಪ್ರಸ್ತುತ 'ಬಲೀಂದ್ರ' ಪೂಜೆ 'ಪರ್ಬ'ದ ಪ್ರಮುಖ ಭಾಗವಾಗಿ ಕಂಡುಬರುತ್ತದೆಯಾದರೂ 'ಬಲೀಂದ್ರ'ನ ಐತಿಹ್ಯ ಕಥೆ ಯಾವುದೇ ಚಾರಿತ್ರಿಕ ಕಾಲಘಟ್ಟದ ಘಟನೆಯೆಂದೇ ಹೇಳಬೇಕಾಗುತ್ತದೆ. ಆ ಮೊದಲೇ 'ಪರ್ಬ' ಆಚರಣೆಯು ಉಳಿದ ಆಚರಣೆಗಳ ರೂಪದಲ್ಲಿ ಹುಟ್ಟಿಕೊಂಡಿರುವ ಸಾಧ್ಯತೆಯಿದೆ. ಕೃಷಿ ಚಟುವಟಿಕೆ ತುಳುನಾಡಿನಲ್ಲಿ

ಆರಂಭವಾದ ಕಾಲದಿಂದಲೇ 'ಪರ್ಬ'ದ ಮೂಲ ಆಚರಣಾ ರೂಪ ಹುಟ್ಟಿಕೊಂಡಿರಬೇಕು ಎನ್ನಲು ಅವಕಾಶವಿದೆ.

ಬನ್ನಂಜೆ ಬಾಬು ಅಮೀನ್ ಅವರು – "ತುಳು ಭೂಮಿಯ ಮೂಲ ಜನಾಂಗದ ಅಸ್ತಿತ್ವವೇ ಬಲಿ ಚಕ್ರವರ್ತಿಯಿಂದ. ಒಂದು ಜಾನಪದ ನಂಬುಗೆಯಂತೆ ಉಡುಪಿ, ತಿರುಪತಿ ಮೊದಲಾದೆಡೆ ಇದ್ದ ಪ್ರಾಚೀನ ಮಂದಿರಗಳು ಬಲಿ ಚಕ್ರವರ್ತಿಯ ಪೂಜಾ ಕೇಂದ್ರಗಳಾಗಿದ್ದವು. ತುಳುನಾಡಿಗೆ ಆರ್ಯರ ಆಕ್ರಮಣಪೂರಿತ ಆಗಮನ, ಈ ಪ್ರದೇಶದಲ್ಲಿ ಸಂಸ್ಕೃತಿಯ ಸಂಘರ್ಷಣೆಗೆ ಕಾರಣವಾಯಿತು. ಸಂಘರ್ಷದಲ್ಲಿ ಬುದ್ಧಿವಂತನಿಗೆ ಗೆಲುವೇ ವಿನಃ ಪ್ರಾಮಾಣಿಕತೆಗಂತೂ ಅಲ್ಲ. ಆರ್ಯ ದ್ರಾವಿಡ ಸಂಸ್ಕೃತಿಯ ಸಂಘರ್ಷದಿಂದ ಒದಗಿದ ದುರಂತ ಪರಿಣಾಮವೇ ಬಲಿ ಚಕ್ರವರ್ತಿಯು ವಾಮನ ಅವತಾರ ತಳೆದು ಬಂದ ಮಹಾವಿಷ್ಣುವಿನಿಂದ ಮೂರು ಹೆಜ್ಜೆ ಭೂಮಿಗಾಗಿ ರಸಾತಳಕ್ಕೆ ತುಳಿಯಲ್ಪಟ್ಟ"[೧೭] ಎಂದು ವಿಶ್ಲೇಷಿಸಿರುವಲ್ಲಿ ಆರ್ಯ ದ್ರಾವಿಡ ಸಾಂಸ್ಕೃತಿಕ ಸಂಘರ್ಷದ ವಿಚಾರವನ್ನು ಒಪ್ಪಿಕೊಳ್ಳಲು ಅಡ್ಡಿಯಿಲ್ಲ. ಆದರೆ ಆರ್ಯರು ತುಳುನಾಡಿಗೆ ಬರುವುದಕ್ಕೆ ಮೊದಲು ಉಡುಪಿ, ತಿರುಪತಿ ಮೊದಲಾದೆಡೆ ಪೂಜಾ ಮಂದಿರಗಳು ಇದ್ದು, ಅವು ಬಲಿ ಚಕ್ರವರ್ತಿಯದಾಗಿದ್ದವು ಎಂಬುವುದನ್ನು ಗಮನಿಸುವಾಗ ತುಳುನಾಡನ್ನು ಆಳ್ವಿಕೆ ಮಾಡಿದ್ದ ಬಲಿಯೂ ಬಹಳ ಪ್ರಾಚೀನ ಕಾಲದವನಲ್ಲ ಎಂಬುದು ಸ್ಪಷ್ಟವಾಗುತ್ತದೆ. ಯಾಕೆಂದರೆ ತುಳುವರಲ್ಲಿ ಮಂದಿರಗಳ ಕಲ್ಪನೆ ಮತ್ತು ಮೂರ್ತಿಪೂಜಾರಾಧನಾ ಕಲ್ಪನೆ ಮೂಲದಲ್ಲಿ ಇದ್ದಂತೆ ಎಲ್ಲೂ ಕಂಡುಬರುವುದಿಲ್ಲ. ತುಳುನಾಡಿನಲ್ಲಿ ಈ ರೀತಿಯ ಮಂದಿರಗಳ ಅಸ್ತಿತ್ವ ಆರ್ಯರ ಆಗಮನದ ನಂತರದ ಸ್ಥಿತ್ಯಂತರಗಳು ಎಂಬುದನ್ನು ಗಮನದಲ್ಲಿಟ್ಟುಕೊಳ್ಳಬೇಕಾಗುತ್ತದೆ.

'ಪರ್ಬ'ದ ಆಚರಣೆಯಲ್ಲೂ ವಾರ್ಷಿಕ ಆವರ್ತನದ ಒಂದು ಗಡುವಿನ ವಿಚಾರ ಗಮನಕ್ಕೆ ಬರುತ್ತದೆ. ವ್ಯಾಪಾರ ವ್ಯವಹಾರಗಳಿಗೆ ಸಂಬಂಧಿಸಿದಂತೆ ತುಳುನಾಡಿನಲ್ಲಿ ವಿನಿಮಯ ಮಾಧ್ಯಮವಾಗಿ ಭತ್ತವನ್ನೇ ಬಳಸಲಾಗುತ್ತಿತ್ತು. 'ಏಣೇಲು' ಬೆಳೆ ಕಟಾವಾಗಿ 'ಪರ್ಬ'ದ ವೇಳೆಗೆ ಮನೆಯಲ್ಲಿ ಧಾನ್ಯ ಲಕ್ಷ್ಮಿಯು ತುಂಬಿರುತ್ತಾಳೆ. ಹಾಗಾಗಿ ಆ ಮೊದಲು ಒಂದು ವರ್ಷದಿಂದ ಅಂಗಡಿಗಳಲ್ಲಿಯೋ ಇಲ್ಲವೇ ಇತರ ವ್ಯವಹಾರದ ಲೆಕ್ಕಾಚಾರವನ್ನು 'ಪರ್ಬ'ದಂದು ಮುಕ್ತಾಯಗೊಳಿಸಲಾಗುತ್ತದೆ. ಎಲ್ಲಾ ಲೆಕ್ಕಾಚಾರಗಳಿಗೂ ತುಳುನಾಡಿನಲ್ಲಿ 'ಪರ್ಬ'ದಿಂದ 'ಪರ್ಬ'ದವರೆಗಿನ ಗಡುವನ್ನು ನೀಡಲಾಗುತ್ತಿತ್ತು.

## ೧೧.೪: 'ಬಜಿಲ್ ಪಾಡುನ'

'ಪರ್ಬ'ದಲ್ಲಿ 'ಬಜಿಲ್‌ಪಾಡುನ' ಆಚರಣೆ ಬಹಳ ಮುಖ್ಯಭಾಗವಾಗಿ ಕಂಡುಬರುತ್ತದೆ. ಕುಟುಂಬದಲ್ಲಿ ಆ ವರ್ಷ ಯಾರಾದರೂ ಸತ್ತಿದ್ದರೆ ಅವರಿಗೆ 'ಬಜಿಲ್ ಪಾಡುನ' ಕ್ರಮ ನಡೆಯುತ್ತದೆ. ಇದು ಸತ್ತವರಿಗೆ ಮಾಡುವ ಕೊನೆಯ ಕ್ರಿಯೆಯಾಗಿದೆ. 'ನಿರ್ನಾಲ' ತಿಂಗಳ 'ಪುದ್ವಾರ್' ಆಚರಣೆಯ ನಂತರ ಸತ್ತವರಿಗೆ ಆ ವರ್ಷದ 'ಪರ್ಬ'ದಲ್ಲಿ 'ಬಜಿಲ್ ಪಾಡುನ' ಕ್ರಮ ಇರುವುದಿಲ್ಲ. ಸತ್ತ ವ್ಯಕ್ತಿ ಹೆಂಗಸಾದರೆ ಅವರಿಗೆ 'ಪರ್ಬ'ದ ಅಮಾವಾಸ್ಯೆ ದಿನ ಮತ್ತು ಸತ್ತ ವ್ಯಕ್ತಿ ಗಂಡನಾಗಿದ್ದರೆ ಅವರಿಗೆ ಪಾಡ್ಯದದಿನ ಈ ಆಚರಣೆ ನಡೆಯುತ್ತದೆ. ಸತ್ತವರ ಉತ್ತರಕ್ರಿಯೆ ಮಾಡುವ ವ್ಯಕ್ತಿ ಸತ್ತ ವ್ಯಕ್ತಿಗೆ 'ಬಜಿಲ್ ಪಾಡುನ'ವರೆಗೆ ಅವಲಕ್ಕಿ ಮತ್ತು ದೋಸೆ ತಿನ್ನಬಾರದಂತೆ. ವಾಸ್ತವವಾಗಿ ಇದು ತುಳುವರ ಜೀವನಾವರ್ತನ ಆಚರಣೆ. ಇದು ವಾರ್ಷಿಕಾವರ್ತನದ ಆಚರಣೆಯಾದ 'ಪರ್ಬ'ದೊಂದಿಗೆ ಸಂಬಂಧಹೊಂದಿರುವುದರಿಂದ ವಿಚಾರಣೀಯವಾಗಿದೆ. 'ಬಲಿ' ಚಕ್ರವರ್ತಿಯೂ ತುಳುನಾಡಿನಿಂದ ದೂರವಾದ ಇಲ್ಲವೇ ಇಹದಿಂದ ಪರಕ್ಕೆ ಸಂದ ನೆನಪಿಗಾಗಿ 'ಪರ್ಬ' ಆಚರಣೆಯಾಗುತ್ತಿರುವುದು ಮತ್ತು 'ಪರ್ಬ' ಆಚರಣೆಯ ಬಹಳ ಮುಖ್ಯ ನೈವೇದ್ಯ ಪ್ರಸಾದವೆಂದರೆ ಅದು 'ಪಂದ್‌ರ್ಬಜಿಲ್' (ಬಾಳೆಹಣ್ಣು ಅವಲಕ್ಕಿ). ಹಾಗಾಗಿ 'ಬಲಿ'ಯಂತೆ ಮನೆಯಲ್ಲಿ ಆ ವರ್ಷ ಸತ್ತಂತಹ ಹಿರಿಯರಿಗೂ ಅವಲಕ್ಕಿ ಬಡಿಸುವ ಕ್ರಮ ಬಂದಿರಬೇಕು. ಈ ಬಗ್ಗೆ ವಿದ್ವಾಂಸರು ಹೇಳುವ ಮಾತನ್ನು ಗಮನಿಸಬೇಕು– "ತಾವು ಒಂದು ಸ್ಥಿತಿಯಿಂದ ಇನ್ನೊಂದು ಕೆಳಗಿನ ಸ್ಥಿತಿಗೆ ತಳ್ಳಲ್ಪಟ್ಟ ದುಃಖದ ದಿನವಾಗಿ ವರ್ಷಂಪ್ರತಿ ಆಚರಿಸುವ ಪರ್ಬದಲ್ಲಿ ತುಳುವರು ಒಂದು ಲೆಕ್ಕ ಪತ್ರ ಮುಗಿಸಿ ಇನ್ನೊಂದು ಲೆಕ್ಕ ಪತ್ರ ಆರಂಭಿಸುವಾಗ ತಮ್ಮ ಹಿರಿಯರನ್ನು ನೆನಸಿ ಅವರಿಗೆ ಗೌರವ ಸಲ್ಲಿಸುವ ಕ್ರಿಯೆ ಇದಾಗಿದೆ. ಇಲ್ಲಿ 'ಅವಲಕ್ಕಿ' ಬಡಿಸುವುದು ಗಮನಾರ್ಹ. ಜನಪದರು ದೇವತೆ ಭೂತ ಇತ್ಯಾದಿ ಅಲೌಕಿಕ ಶಕ್ತಿಗಳಿಗೆ ಆಹಾರವನ್ನು ಕೊಡುವಾಗ ನೀರಿನಲ್ಲಿ ಬೇಯಿಸದ ಆದರೆ ಬೆಂಕಿಯಲ್ಲಿ ಹುರಿದ ಅವಲಕ್ಕಿ, ಅರಳನ್ನು ಕೊಡುವುದನ್ನೂ ಕಾಣುತ್ತೇವೆ. ಸ್ವತಃ ತಾವು ಆಹಾರವಾಗಿ ಸ್ವೀಕರಿಸುವುದು ನೀರಿನಲ್ಲಿ ಹಾಕಿ ಬೇಯಿಸಿದ ಪದಾರ್ಥವನ್ನು. ಬೆಂಕಿಯಲ್ಲಿ ಹುರಿದ ಅಕ್ಕಿ ಶುದ್ಧವಾದುದು ಎಂಬ ನಂಬಿಕೆ ಜನಪದರಲ್ಲಿದೆ. ತಮ್ಮ ಸತ್ತು ಹೋದ ಹಿರಿಯರು ಇನ್ನೊಂದು ಲೋಕದಲ್ಲಿ ಅಲೌಕಿಕ ಶಕ್ತಿಯಾಗಿದ್ದಾರೆ ಎಂದು ತುಳುವರು ಭ್ರಮಿಸಿ ಅವರಿಗೂ ಹುರಿದ ಅವಲಕ್ಕಿಯನ್ನು ಆಹಾರವಾಗಿ ಕೊಡುವುದು ಕಂಡುಬರುತ್ತದೆ."[೧೮] ಅಂತೆಯೇ 'ಪರ್ಬ'ದ ಮೊದಲ ದಿನ 'ಸೈತಿನಗ್‌ಲೆ ಪರ್ಬ'(ಸತ್ತವರಿಗೆ ದೀಪಾವಳಿ) ಆಚರಣೆಯನ್ನೂ ಮಾಡುತ್ತಾರೆ. ಇದೂ ತೀರಿಕೊಂಡಿರುವ

ಕುಟುಂಬದ ಸದಸ್ಯರನ್ನು ನೆನಪಿಸಿಕೊಳ್ಳುವ ಕ್ರಮವಾಗಿರುತ್ತದೆ. ಆದಿನ ಕುಂಬಳ-ಬಾಳೆಕಾಯಿ ಪದಾರ್ಥ ಮಾಡಬೇಕು. ಅರಸಿನ ಎಲೆಯ ಗಟ್ಟಿ ಆಗಬೇಕು. ಮೀನು ಪದಾರ್ಥವೂ ಬೇಕು. ಕತ್ತಲಾದ ಮೇಲೆ ಮನೆಯ ಹೊರಗಡೆ ಒಂದು ಪಾತ್ರೆಯಲ್ಲಿ ಬಿಸಿನೀರು ಇಡುತ್ತಾರೆ. ಮನೆಯ ಒಳಗೆ ಅಡುಗೆ ಕೋಣೆಯಲ್ಲಿ ಅವರವರ ಪದ್ಧತಿಯಂತೆ ೫-೭-೯ ಹೀಗೆ ಎಲೆ ಹಾಕಿ ಅದರಲ್ಲಿ ಮಾಡಿದ ಅನ್ನ, ಪದಾರ್ಥಗಳನ್ನು ಬಡಿಸುತ್ತಾರೆ. ಮುಂದುಗಡೆ ಮಣೆಯಿಟ್ಟು ಪಿತೃಗಳಿಗೆ ಉಡಲು ಹೊಸ ಬಟ್ಟೆ ಇಡುತ್ತಾರೆ. ತಿನ್ನಲು ಹರಿವಾಣದಲ್ಲಿ ಎಲೆಅಡಿಕೆ ಇಡುತ್ತಾರೆ. ಮನೆಯವರೆಲ್ಲ ಒಟ್ಟಾಗಿ ಒಂದು ಚೆಂಬಿನಲ್ಲಿ ನೀರು ಇಟ್ಟು ಈ ರೀತಿ ಪ್ರಾರ್ಥನೆ ಮಾಡುತ್ತಾರೆ.

"ಈದಿನ ಸತ್ತವರಿಗೆ ದೀಪಾವಳಿ ಹಬ್ಬ. ಈ ಮನೆಯಲ್ಲಿ ನಮ್ಮಿಂದ ದೂರವಾಗಿ ತೀರಿಕೊಂಡವರೆಲ್ಲರಿಗೂ ಹೊರಗಡೆ ಬಿಸಿನೀರು ತಯಾರಿದೆ. ಸ್ನಾನ ಮಾಡಿ ಒಳಗೆ ಬಂದು ಹೊಸ ಬಟ್ಟೆ ಉಡಬೇಕು. ಒಳಗೆ ನಿಮಗಾಗಿ ಬಡಿಸಿದ 'ಅಗೆಲ'ನ್ನು ಸಂತೋಷದಿಂದ ಸ್ವೀಕರಿಸಬೇಕು" ಎಂದು ಹೇಳಿ ಅಡ್ಡಬೀಳುತ್ತಾರೆ.

### ೧೧.೫: 'ಜೋಕುಲೆ ಪುಣ್ಣಮೆ' (ಮಕ್ಕಳ ಹುಣ್ಣಿಮೆ)

ಪರ್ಬ ಕಳೆದು ಮುಂದೆ ಬರುವ ಹುಣ್ಣಿಮೆಯಂದು 'ಜೋಕುಲೆ ಪುಣ್ಣಮೆ' ಆಚರಿಸುತ್ತಾರೆ. ಪರ್ಬಕ್ಕೂ ಜೋಕುಲೆ ಪುಣ್ಣಮೆಗೂ ನಿಕಟವಾದ ಸಂಬಂಧವಿರುವುದು ಕಂಡುಬರುತ್ತದೆ. ಜೋಕುಲೆ ಪುಣ್ಣಮೆಯನ್ನು 'ಜೋಕುಲೆ ಪರ್ಬ' ಎಂತಲೂ ಕರೆಯುತ್ತಾರೆ. ಈ ಆಚರಣೆಯಲ್ಲಿ ಮಕ್ಕಳು ಕೇಂದ್ರ ಬಿಂದುವಾಗಿರುತ್ತಾರೆ. ಮನೆಯಲ್ಲಿ ತೀರಿಕೊಂಡ ಮಕ್ಕಳಿಗಾಗಿ ಈ ಆಚರಣೆ ನಡೆಸುವುದು ಕಂಡುಬರುತ್ತದೆ.

ಜೋಕುಲೆ ಪುಣ್ಣಮೆಯಂದು ಬೆಳಗ್ಗಿನ ಉಪಾಹಾರಕ್ಕಾಗಿ ಉದ್ದು ಹಾಕಿದ ದೋಸೆ ಮಾಡಲು ಹಿಂದಿನ ದಿನವೇ ಹಿಟ್ಟು ಕಡೆದಿಡಲಾಗುತ್ತದೆ. ಹೀಗೆ ತಯಾರಿಸಿದ ಹಿಟ್ಟಲ್ಲಿ ಸ್ವಲ್ಪ ಹಿಟ್ಟನ್ನು ತೆಂಗಿನಕಾಯಿಯ ಗೆರಟೆಯಲ್ಲಿ ಹಾಕಿ ಕಡೆಯುವ ಕಲ್ಲಿನಲ್ಲಿ ಇಡುತ್ತಾರೆ. ಈ ಕ್ರಮವನ್ನು ಕೆಲವು ಕಡೆ ಹುಣ್ಣಿಮೆಯ ದಿನ, ಹುಣ್ಣಿಮೆಯ ಹಿಂದಿನ ದಿನ ಮತ್ತು ಹುಣ್ಣಿಮೆಯ ಮರುದಿನ ಹೀಗೆ ಮೂರು ದಿನ ಮಾಡುತ್ತಾರೆ. ಇದು ಸತ್ತು ಸ್ವರ್ಗದಲ್ಲಿರುವ ಮಕ್ಕಳಿಗೆಂದು ಜನರ ನಂಬಿಕೆ. ಸತ್ತಂತಹ ಮಕ್ಕಳು ದೇವರ ಜೊತೆಗಿರುತ್ತಾರೆ. ದೇವರು ಈ ದಿನ ಮಕ್ಕಳನ್ನು ತಮ್ಮ ತಮ್ಮ ಮನೆಗೆ ದೋಸೆಗೆ ಅಕ್ಕಿ ಹಿಟ್ಟು ತರಲು ಕಳುಹಿಸುತ್ತಾರಂತೆ. ಒಂದು ವೇಳೆ ಹಿಟ್ಟು ತರಲಿಲ್ಲವಾದರೆ ಮಕ್ಕಳನ್ನು ದೇವರು ಕಾದ ಕಾವಲಿಯ ಮೇಲೆ ಕುಳ್ಳಿರಿಸಿ ಸುಟ್ಟ ಚರ್ಮವನ್ನು ತಿನ್ನಿಸುತ್ತಾರೆ

ಎಂದು ಜನಪದರು ಈ ಆಚರಣೆಯ ಬಗ್ಗೆ ಕಥೆ ಹೇಳುತ್ತಾರೆ. ಹಾಗಾಗಿ ಹುಣ್ಣಿಮೆ ದಿನ ಬೆಳಿಗ್ಗೆ ದೋಸೆ ಮಾಡಿ ತಿನ್ನುತ್ತಾರೆ. ರಾತ್ರಿ ಪರ್ಬ ಆಚರಣೆಯ ರೀತಿಯಲ್ಲಿಯೇ ಬಿಲಕ್ಕಿ ಮರ (ಬಲೀಂದ್ರಮರ)ದ ಬುಡದಲ್ಲಿ ಅಗೆಲು(ಎಡೆ) ಹಾಕಿ ದೀಪ ಆರತಿ ಬೆಳಗುವುದು ತಿಳಿಯುತ್ತದೆ. ಅಂದರೆ ಪರ್ಬಕ್ಕೆ ಹಾಕಿದ ಬಿಲಕ್ಕಿ ಮರ (ಬಲೀಂದ್ರಮರ) ಜೋಕುಲೆ ಪುಣ್ಣಮೆವರೆಗೆ ಇರುತ್ತದೆ ಮತ್ತು ಪರ್ಬದಿಂದ ಮೊದಲ್ಗೊಂಡು ಜೋಕುಲೆ ಪುಣ್ಣಮೆ(ಮಕ್ಕಳಹುಣ್ಣಿಮೆ)ಯವರೆಗೆ ಮನೆಯ ಯಜಮಾನ ನಿತ್ಯ ಬಿಲಕ್ಕಿ ಮರ (ಬಲೀಂದ್ರಮರ)ಕ್ಕೆ ರಾತ್ರಿ ದೀಪ ಇಡುವುದು ರೂಢಿಯಲ್ಲಿದೆ. ಅಂತೆಯೇ ಪರ್ಬ ಆಚರಣೆಯನ್ನು ಜನನ ಮರಣಾದಿ ಸೂತಕಗಳ ಅನಿವಾರ್ಯ ಕಾರಣಗಳಿಂದ ಆಚರಿಸಲಾಗದೆ ಇರುವವರು ಯಥಾವತ್ತಾಗಿ ಜೋಕುಲೆ ಪುಣ್ಣಮೆ (ಮಕ್ಕಳಹುಣ್ಣಿಮೆ) ದಿನ ಆಚರಿಸುತ್ತಾರೆ. ಅಂತೆಯೇ ಸತ್ತಂತಹ ಹಿರಿಯರಿಗೆ ಪರ್ಬದ ದಿನಗಳಲ್ಲಿ ಬಜಿಲ್ ಪಾಡುನ (ಅವಲಕ್ಕಿ ಹಾಕುವುದು) ಕಾರ್ಯಕ್ರಮ ನಡೆಸಲು ಆಗದಿದ್ದಲ್ಲಿ ಆ ಕಾರ್ಯಕ್ರಮವನ್ನು ಜೋಕುಲೆ ಪುಣ್ಣಮೆ (ಮಕ್ಕಳಹುಣ್ಣಿಮೆ)ಯಂದು ನಡೆಸುವುದು ಜೋಕುಲೆ ಪುಣ್ಣಮೆ (ಮಕ್ಕಳಹುಣ್ಣಿಮೆ)ಯ ವಿಶೇಷವಾಗಿದೆ.

ಇದು 'ಪರ್ಬ' ಆಚರಣೆಯ ಒಂದು ಉಪಾಂಗ ಎಂದು ಹೇಳಬಹುದು. ಹೆಸರೇ ಸೂಚಿಸುವಂತೆ, ಇದು ಮಕ್ಕಳಿಗೆ ಸಂಬಂಧಿಸಿದ ಪರ್ಬವಾಗಿದೆ. ತುಳುನಾಡಲ್ಲಿ ಮಕ್ಕಳಿಗೆ ಇರುವ ಪ್ರಾಧಾನ್ಯತೆಯನ್ನು ಇದರಿಂದ ತಿಳಿಯಬಹುದು. ಜೊತೆಗೆ ಜನನ ಮರಣಾದಿ ಸೂತಕಗಳ ಹಿನ್ನೆಲೆಯಲ್ಲಿ 'ಪರ್ಬ' ಆಚರಣೆ ನಡೆಯದೇ ಹೋದ ಪಕ್ಷದಲ್ಲಿ ಅದನ್ನು ಮತ್ತೆ ಹದಿನೈದು ದಿನದ ಅಂತರದಲ್ಲಿ ಹುಣ್ಣಿಮೆಯಂದು ಆಚರಿಸಲು ಈ ದಿನ ಮೀಸಲಾಗಿರುವಂತೆ ತಿಳಿಯುತ್ತದೆ. ಹಾಗಾಗಿ ಈ ಆಚರಣೆಯನ್ನು 'ಕೊಡಿಪರ್ಬ' ಎಂದೂ ಕರೆಯುತ್ತಾರೆ. ಈ ದಿನವೂ ಬೇಟೆ, ಕೋಳಿಅಂಕ, ತೆಂಗಿನಕಾಯಿ ಕುಟ್ಟುವಂತಹ ಕ್ರೀಡೆಗಳು ನಡೆಯುತ್ತವೆ.

ಕತ್ತಲು ಕಳೆದು ಬೆಳಕು ಬರಲಿ ಎಂಬ ಆಶಯದಲ್ಲಿ ದೀಪಾವಳಿಯನ್ನು ಇಂದು ಭಾರತ ಮಾತ್ರವಲ್ಲ, ವಿಶ್ವದ ಬೇರೆ ಬೇರೆ ರಾಷ್ಟ್ರಗಳಲ್ಲಿ ಆಚರಿಸುವುದು ಕಂಡುಬರುತ್ತದೆ. ದೀಪಾವಳಿಯಲ್ಲಿ ಗೋಪೂಜೆಗೆ ಅಗ್ರಸ್ಥಾನವಿದೆ. "ಸಂಕ್ರಾಂತಿ, ದೀಪಾವಳಿ ಮುಂತಾದ ಹಬ್ಬಗಳಲ್ಲಿ ಗೋಪೂಜೆಗೆ ಹೆಚ್ಚು ಪ್ರಾಶಸ್ತ್ಯವಿರುತ್ತದೆ. ಸಂಕ್ರಾಂತಿ ಹಬ್ಬದಂದು ಹಸುಗಳ ಮೈತೊಳೆದು ಅಲಂಕರಿಸಿ ಚೆನ್ನಾಗಿ ಮೇಯಿಸಿ ಸಂಜೆಯ ವೇಳೆಗೆ ಅವುಗಳಿಗೆ ಪೂಜಿಸಿ ಕಿಚ್ಚು ಹಾಯಿಸುವ ಸಂಪ್ರದಾಯವಿದೆ. ಕಾರ್ ಹಬ್ಬದ ದಿನ ಹಸುವೊಂದನ್ನು ಪೂಜಿಸಿ ಎಡೆಗೆ ಇಟ್ಟಿದ್ದ ತಿಂಡಿ ಪದಾರ್ಥಗಳನ್ನು ತಿನ್ನಿಸುತ್ತಾರೆ. ದೀಪಾವಳಿಯಲ್ಲಿ ಅದರ ಕಾಲುತೊಳೆದು ಹಸುವಿನ

ಹಣೆ, ಕಾಲುಗಳಿಗೆ ಅರಿಶಿನ ಕುಂಕುಮವನ್ನು ಹಚ್ಚಿ ಪೂಜೆ ಮಾಡುತ್ತಾರೆ. ಕೋಲೆ ಬಸವನಾಟದವರು ಊರಿಗೆ ಬಂದರೆ ಪ್ರತಿಯೊಬ್ಬರ ಮನೆಯಲ್ಲೂ ಅದರ ಕಾಲುತೊಳೆದು ಅರಿಶಿನ ಕುಂಕುಮ ಹಚ್ಚಿ, ಪೂಜೆ ಮಾಡಿ ಅದರ ಬಾಯಿಗೆ ಒಂದಿಷ್ಟು ಕಲಸಿದ ಹಿಟ್ಟನ್ನು ಕೊಡುವ ರೂಢಿಯಿದೆ. ಹೊನ್ನಾರು ಕಟ್ಟುವಾಗ ರಾಗಿ ಜೋಳ ಮುಂತಾದುವನ್ನು ಬಿತ್ತಲು ಮೊದಲು ಪ್ರಾರಂಭಿಸಿದಾಗ ಎತ್ತುಗಳಿಗೆ ಪೂಜೆ ಮಾಡಿದ ತರುವಾಯ ಬಿತ್ತನೆ ಕೆಲಸ ಪ್ರಾರಂಭವಾಗುತ್ತದೆ. ಗಾಡಿಯ ಮೇಲೆ ದೂರದ ಪ್ರಯಾಣಕ್ಕೆ ಹೊರಟಾಗ ಹೂಡಿದ ಎತ್ತುಗಳನ್ನು ಪೂಜಿಸುತ್ತಾರೆ. ಹಸು ಕರು ಹಾಕಿದ ಮೇಲೆ ಅದರ ಗಿಣ್ಣು ಹಾಲಿನಿಂದ ಅಡುಗೆ ತಯಾರಿಸಿ ದೇವರಿಗೆ ಅರ್ಪಿಸುವಾಗ ಕರುಹಾಕಿದ ಹಸುವನ್ನು ಪೂಜಿಸುತ್ತಾರೆ. ಜಾತ್ರೆ ಉತ್ಸವಗಳಿಗೆ ಅಥವಾ ವ್ಯಾಪಾರ ಮಾಡಲು ಹೋದಾಗ ಎತ್ತು ಅಥವಾ ಹಸುಗಳನ್ನು ಪೂಜಿಸುವುದು ವಾಡಿಕೆ. ಕೆಲವು ಹಬ್ಬಗಳ ಬಂಡಿಉತ್ಸವಗಳಲ್ಲಿ ಎತ್ತುಗಳನ್ನು ಬಂಡಿಗೆ ಕಟ್ಟಲಾಗುತ್ತದೆ. ಆಗ ಹೂಡುವ ಎತ್ತುಗಳಿಗೆ ವಿವಿಧ ರೀತಿಯ ಅಲಂಕಾರ ಮಾಡಿ ಪೂಜಿಸುತ್ತಾರೆ. ಗೃಹ ಪ್ರವೇಶ ಸಂದರ್ಭದಲ್ಲಿ ಹಸುವನ್ನು ಮನೆಯೊಳಕ್ಕೆ ಬಿಟ್ಟು ಪೂಜಿಸುವ ಪದ್ಧತಿಯಿದೆ. ಅಲ್ಲಿ ಅದು ಸೆಗಣಿ ಹಾಕಿದರೆ ಆ ಮನೆ ಸಮೃದ್ಧಿಯಿಂದ ತುಂಬುತ್ತದೆಂದು ನಂಬಿಕೆಯಿದೆ”[೧೯] ಎಂಬುದಾಗಿ ಗೋಪೂಜೆಯ ಬೇರೆಬೇರೆ ನೆಲೆಗಳನ್ನು ಗುರುತಿಸಲಾಗಿರುವುದನ್ನು ಗಮನಿಸಬಹುದು. ಈ ಹಿನ್ನೆಲೆಯಲ್ಲಿ ಕರ್ನಾಟಕದಲ್ಲಿನ ‘ಸಂಕ್ರಾಂತಿ ಹಬ್ಬ’ದಂದು ನಡೆಯುವ ‘ಕಿಚ್ಚು ಹಾಯಿಸುವ’ ಆಚರಣೆ,[೨೦] ‘ಕಾರಹುಣ್ಣಿಮೆ ಹಬ್ಬ’ದಂದು ನಡೆಯುವ ‘ಕರಿಹರಿಯುವ ಆಚರಣೆ’[೨೧] ಹಾಗೂ ‘ಪಾಂಡವರ ಪೂಜೆ’[೨೨]ಗಳೆಲ್ಲ ವಿಶೇಷವಾಗಿ ಗೋವುಗಳಿಗೆ ಸಂಬಂಧಿಸಿದ ವಿಶೇಷ ಆಚರಣೆಗಳಾಗಿವೆ. ಹಾಗೆಯೇ ತುಳುವರ ಬಲೀಂದ್ರ ಪೂಜೆಯನ್ನು ದಕ್ಷಿಣ ಕನ್ನಡ ಜಿಲ್ಲೆಯ ಮಲೆಯಾಳಿ ಭೋವಿ ಜನಾಂಗದಲ್ಲಿ ಭಗವತಿ ಆರಾಧನೆಯ ಸಂದರ್ಭದಲ್ಲಿ ಆಚರಿಸಲಾಗುವುದನ್ನು ವಿಶೇಷವಾಗಿ ಗಮನಿಸಬಹುದು.[೨೩]

ಪರ್ಬಕ್ಕೂ ಪಟಾಕಿಗೂ ಹತ್ತಿರದ ನಂಟು. ಪಟಾಕಿಯಿಲ್ಲದೆ ಪರ್ಬ ಆಚರಣೆಯಿಲ್ಲ ಎನ್ನುವಷ್ಟರ ಮಟ್ಟಿಗೆ ಪರ್ಬದಲ್ಲಿ ಪಟಾಕಿಯ ಬಳಕೆಯಾಗುತ್ತದೆ. ಅಂದರೆ ತುಳುವರು ಪರ್ಬವನ್ನು ಅತ್ಯಂತ ಸಂಭ್ರಮದಿಂದ ಆಚರಿಸುತ್ತಾರೆ. ಹಾಗಾಗಿ ‘ದೀಪಾವಳಿ ಗಡ್ದ್ ಮಲ್ತೆ, ಮನದಾನಿ ದಿವಾಳಿ ದೆತ್ತೆ’ (ದೀಪಾವಳಿ ಗೌಜಿ ಮಾಡಿದ, ಮರುದಿನ ದಿವಾಳಿಯಾದ) ಎಂಬ ಗಾದೆ ಹುಟ್ಟಿಕೊಂಡಿದೆ. ಅಂತೆಯೇ, ‘ಪರ್ಬೊಗು ತಿನಂದಿ ಬಜಿಲ್, ದೀಪಾವಳಿಗ್ ಬುಡಂದಿ ಪಟಾಕಿ’(ಪರ್ಬಕ್ಕೆ ತಿನ್ನದ ಅವಲಕ್ಕಿ, ದೀಪಾವಳಿಗೆ ಬಿಡದ ಪಟಾಕಿ) ಎಂಬ ಮತ್ತೊಂದು

ಗಾದೆಯೂ ಈ ಆಚರಣೆಯ ಅವಲಕ್ಕಿ ಮತ್ತು ಪಟಾಕಿ ಬಳಕೆಯ ಬಗ್ಗೆ ಗಮನ ಸೆಳೆಯುತ್ತವೆ. ಆದರೆ ಪಟಾಕಿ ಸಿಡಿಸುವ ಕ್ರಿಯೆಯಲ್ಲಿ ಮೇಲ್ನೋಟಕ್ಕೆ ಸಂಭ್ರಮ ಕಂಡುಬಂದರೂ ಅಲ್ಲಿ ಪ್ರತಿಭಟನೆ, ವಿರೋಧ ವ್ಯಕ್ತಪಡಿಸುವ, ನೋವನ್ನು ಹೊರಹಾಕುವ ಸಂಗತಿಗಳಿವೆ.

ಒಟ್ಟಿನಲ್ಲಿ ಹೇಳುವುದಾದರೆ, 'ಪರ್ಬ' ಆಚರಣೆ ಕೃಷಿ ಪ್ರಧಾನ ಸಂಸ್ಕೃತಿಯೊಂದರ ಗರ್ಭದಿಂದ ಹುಟ್ಟಿಕೊಂಡ ಆಚರಣೆಯಾಗಿದೆ. ಚಾರಿತ್ರಿಕ ಕಾಲಘಟ್ಟವೊಂದರಲ್ಲಿ ಇಲ್ಲಿನ ಮೂಲನಿವಾಸಿಗಳಾದ ದ್ರಾವಿಡ ಜನಾಂಗಗಳು ನಂತರ ಬಂದ ಆರ್ಯರಿಂದ ತುಳಿತಕ್ಕೊಳಗಾದ ಸಂಕೇತ ಮತ್ತು ಅದರ ಪ್ರತಿಭಟನೆಯ ನೆಲೆಯಲ್ಲಿ ಈ ಆಚರಣೆ ಮಹತ್ವವನ್ನು ಪಡೆದುಕೊಂಡಿದೆ. ಆದರೆ ಈ ಆಚರಣೆಯ ಜೊತೆಗೆ ಕಂಡುಬರುವ 'ಮೀಪಿಪರ್ಬ' ಮತ್ತು ಅಮಾವಾಸ್ಯೆ ದಿನದ ಆಚರಣೆಗಳೆಲ್ಲ ವೈದಿಕ ಆಚರಣೆಯ ಪ್ರಭಾವದಿಂದ ಉಂಟಾಗಿರುವುದು ಸ್ಪಷ್ಟವಾಗುತ್ತದೆ. ಬಲೀಂದ್ರಪೂಜೆ, ಗೋಪೂಜೆ, ಕೃಷಿಸಂಬಂಧಿಪೂಜೆ, ಸತ್ತವರಿಗೆ ಬಜಿಲ್ ಪಾಡುನ ಕ್ರಮ ಹಾಗೂ ಜೋಕುಲೆ ಪರ್ಬ ಇವು 'ಪರ್ಬ' ಆಚರಣೆಯ ಪ್ರಧಾನ ಅಂಗಗಳಾಗಿವೆ. 'ಪರ್ಬೊ ಗದ್ದಲೊ, ಬಜಿಲ್ ಮುಕ್ಕೊಂಡೆ'(ಹಬ್ಬ ಗದ್ದಲ, ಅವಲಕ್ಕಿ ತಿಂದುಕೊಂಡೆ/ಅವಲಕ್ಕಿ ಮೂರು ಕೊಂಡೆ), 'ಪರ್ಬೊ ಮುಟ್ಟ ದೋಸೆ, ಪರ್ಬೊಡ್ದ್ ಬುಕ್ಕೊ ರೊಟ್ಟಿ'(ಹಬ್ಬದವರೆಗೆ ದೋಸೆ, ಹಬ್ಬದ ನಂತರ ರೊಟ್ಟಿ) ಮೊದಲಾದ ಗಾದೆಗಳು 'ಪರ್ಬ'ದ ಮಹತ್ವವನ್ನು ಸಾರುತ್ತವೆ.

### ೧೧.೬: 'ಪರ್ಬ'–ಆಚರಣೆಯ ಒಟ್ಟೂ ಸ್ವರೂಪ

ಈ ಎಲ್ಲ ಹಿನ್ನೆಲೆಯಲ್ಲಿ 'ಪರ್ಬ' ಆಚರಣೆಯ ಒಟ್ಟೂ ಆಶಯ ಸ್ವರೂಪಗಳನ್ನು ಒಂದೆಡೆ ಕ್ರೋಢೀಕರಿಸಿ ಈ ರೀತಿ ಹೇಳಬಹುದು.

೧. 'ಪರ್ಬ'ವನ್ನು 'ಬೊಂತೆಲ್' ತಿಂಗಳ ಅಮಾವಾಸ್ಯೆ ಇಲ್ಲವೆ ಮರುದಿನದ ಪಾಡ್ಯದಂದು ಆಚರಿಸಲಾಗುತ್ತದೆ.

೨. 'ಬಲಿ' ಚಕ್ರವರ್ತಿಯನ್ನು ಸಂಕೇತಿಸುವ 'ಬಿಲಕ್ಕಿಮರ' (ಬಲೀಂದ್ರಮರ)ವನ್ನು ಹಾಕಿ ಅಲಂಕರಿಸಿ ಬಲೀಂದ್ರ ಪೂಜೆ, ಗೋಪೂಜೆ, ಕೃಷಿಸಲಕರಣೆಗಳ ಪೂಜೆ, ಅವಲಕ್ಕಿ ಹಾಕುವುದು, ಜೋಕುಲೆ ಪರ್ಬ(ಮಕ್ಕಳಹಬ್ಬ) ಇತ್ಯಾದಿ 'ಪರ್ಬ' ಆಚರಣೆಯ ಪ್ರಧಾನ ಅಂಗಗಳಾಗಿವೆ.

೩. ಭೂತ ನಾಗಗಳಿಗೆಲ್ಲ ಈ ದಿನ ವಿಶೇಷ ಪರ್ವ, ತಂಬಿಲ, ಅಗೆಲು ಸೇವೆಗಳನ್ನೆಲ್ಲ ನಡೆಸಲಾಗುತ್ತದೆ.

೪. ಕೋಳಿಅಂಕ, ತೆಂಗಿನಕಾಯಿ ಕುಟ್ಟುವುದು, ಬೇಟೆಗೆಹೋಗುವಂತಹ ಕ್ರೀಡೆಗಳನ್ನು ಆಡಲಾಗುತ್ತದೆ.

೫. ಸತ್ತ ಮಕ್ಕಳಿಗಾಗಿ 'ಜೋಕುಲೆ ಪುಣ್ಣಮೆ'(ಮಕ್ಕಳಹುಣ್ಣಿಮೆ) ಆಚರಣೆಯನ್ನು ಆಚರಿಸಲಾಗುತ್ತದೆ.

೬. ಅವಲಕ್ಕಿ, ಬಾಳೆಹಣ್ಣು, ಉದ್ದುಹಾಕಿದ ದೋಸೆ ಮತ್ತು ಮಾಂಸ ಪದಾರ್ಥ 'ಪರ್ಬ'ದ ವಿಶೇಷ ತಿಂಡಿತಿನಿಸುಗಳಾಗಿರುತ್ತವೆ.

೭. ಕುಟುಂಬದ ಸದಸ್ಯರೆಲ್ಲ ತಪ್ಪದೆ 'ಪರ್ಬ' ಕ್ಕೆ ಮನೆಗೆ ಬರುತ್ತಾರೆ.

೮. ಜನನ ಮರಣಾದಿ ಸೂತಕಗಳು ಬಂದರೆ 'ಪರ್ಬ' ಆಚರಣೆ ನಡೆಯುವುದಿಲ್ಲ.

೯. ಶುರುವಿಗೆ 'ಪರ್ಬ'ಕ್ಕಲ್ಲದೆ, ಬೆಳ್ತಿಗೆ ಅಕ್ಕಿ ಮಾಡಬಾರದೆಂಬ ನಂಬಿಕೆಯಿದೆ.

---

<u>**ಅಡಿಟಿಪ್ಪಣಿ**</u>

೧. **ತುಳು ನಿಘಂಟು:** ಸಂಪುಟ-೦೫: ೧೯೯೭: ಡಾ. ಯು. ಪಿ. ಉಪಾಧ್ಯಾಯ : ರಾಷ್ಟ್ರಕವಿ ಗೋವಿಂದ ಪೈ ಸಂಶೋಧನಾ ಕೇಂದ್ರ, ಉಡುಪಿ: ಪುಟ-೧೯೫೭

೨. **ಸೇರಿಗೆ:** ೨೦೦೦: (ಸಂ.) ಡಾ. ಕೆ. ಚಿನ್ನಪ್ಪ ಗೌಡ: ಮದಿಪು ಪ್ರಕಾಶನ, ಮಂಗಳ ಗಂಗೋತ್ರಿ: ಲೇಖನ: ತುಳುವರ ಪರ್ಬ: ಜಾನಪದೀಯ ಅಧ್ಯಯನ: ಲೇಖಕ: ಶ್ರೀಧರ ಟಿ.ಎನ್.: ಪುಟ-೨೭೭

೩. **ತುಳುವಾಲ ಬಲಿಯೇಂದ್ರ:** ೨೦೦೯: ಎನ್.ಎ.ಶೀನಪ್ಪ ಹೆಗ್ಡೆ: ವ್ಯವಸ್ಥಾಪನಾ ಸಮಿತಿ, ವಿಶ್ವತುಳು ಸಮ್ಮೇಳನ, ಉಜಿರೆ

೪. **ಕನ್ನಡ ಜಾನಪದ ವಿಶ್ವಕೋಶ:** ಸಂಪುಟ-೨: ೧೯೮೫: (ಸಂ.)ಚಂದ್ರಶೇಖರ ಕಂಬಾರ: ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು: ಪುಟ-೧೧೨೪

೫. **ಅದೇ:** ಪೂರ್ವೋಕ್ತ: ಪುಟ-೧೧೨೪

೬. **ಅದೇ:** ಪೂರ್ವೋಕ್ತ: ಪುಟ-೧೧೨೪, ೧೧೨೫

೭. **ಅದೇ:** ಪೂರ್ವೋಕ್ತ: ಪುಟ-೧೧೨೪

೮. **ಅದೇ:** ಪೂರ್ವೋಕ್ತ: ಪುಟ-೧೧೨೫

೯. **ಸೇರಿಗೆ:** ೨೦೦೦: (ಸಂ.)ಡಾ.ಕೆ.ಚಿನ್ನಪ್ಪ ಗೌಡ: ಪೂರ್ವೋಕ್ತ: ಪುಟ-೨೮೨

೧೦. **ಅದೇ:** ಪೂರ್ವೋಕ್ತ: ಪುಟ-೨೮೨

೧೧. **ಅದೇ:** ಪೂರ್ವೋಕ್ತ: ಪುಟ–೨೮೫

೧೨. **ಅದೇ:** ಪೂರ್ವೋಕ್ತ: ಪುಟ–೨೭೯

೧೩. **ಅದೇ:** ಪೂರ್ವೋಕ್ತ: ಪುಟ–೨೮೯,೨೯೦

೧೪. **ಅದೇ:** ಪೂರ್ವೋಕ್ತ: ಪುಟ–೨೮೫,೨೮೬

೧೫. **ಅದೇ:** ಪೂರ್ವೋಕ್ತ: ಪುಟ–೨೮೬

೧೬. **ಅದೇ:** ಪೂರ್ವೋಕ್ತ: ಪುಟ–೨೮೬

೧೭. **ತುಳು ಜಾನಪದ ಆಚರಣೆಗಳು:** ೨೦೦೩: ಬನ್ನಂಜೆ ಬಾಬು ಅಮೀನ್: ಕೆಮ್ಮಲಜೆ ಜಾನಪದ ಪ್ರಕಾಶನ, ಉಡುಪಿ: ಪುಟ – ೧೩೬

೧೮. **ಸೇರಿಗೆ:** ೨೦೦೦: (ಸಂ.) ಡಾ. ಕೆ. ಚಿನ್ನಪ್ಪ ಗೌಡ: ಪೂರ್ವೋಕ್ತ: ಪುಟ–೨೮೮

೧೯. **ಕನ್ನಡ ಜಾನಪದ ವಿಶ್ವಕೋಶ:** ಸಂಪುಟ–೧: ೧೯೮೫ (ಸಂ.)ಚಂದ್ರಶೇಖರ ಕಂಬಾರ: ಪೂರ್ವೋಕ್ತ: ಪುಟ–೬೯೩

೨೦. **ಅದೇ:** ಪೂರ್ವೋಕ್ತ: ಪುಟ–೪೦೬

೨೧. **ಅದೇ:** ಪೂರ್ವೋಕ್ತ: ಪುಟ–೩೪೬

೨೨. **ಅದೇ:** ಸಂಪುಟ–೨: ಪೂರ್ವೋಕ್ತ: ಪುಟ–೧೨೪೧

೨೩. **ಅದೇ:** ಪೂರ್ವೋಕ್ತ: ಪುಟ–೧೩೮೨

■■■

# ಅಧ್ಯಾಯ–೧೨

## ತುಳುನಾಡಿನ ವಾರ್ಷಿಕ ಆವರ್ತನದ ಆಚರಣೆ–'ಕೆಡ್ಡಸ'

೧೨.೧: 'ಕೆಡ್ಡಸ'–ಅರ್ಥ

೧೨.೨: 'ಕೆಡ್ಡಸ'–ಆಚರಣೆಯ ವಿಧಾನ

೧೨.೩: 'ಕೆಡ್ಡಸ' ಆಚರಣೆ–ವಿಶ್ಲೇಷಣೆ

೧೨.೪: 'ಕೆಡ್ಡಸ'ಕ್ಕೆ ಸಮಾನವಾದ ಆಚರಣೆಗಳು

೧೨.೫: 'ಕೆಡ್ಡಸ'–ಆಚರಣೆಯ ಒಟ್ಟು ಸ್ವರೂಪ

# ಅಧ್ಯಾಯ-೧೨

## ತುಳುನಾಡಿನ ವಾರ್ಷಿಕ ಆವರ್ತನದ ಆಚರಣೆ-'ಕೆಡ್ಡಸ'

೧೨.೧: 'ಕೆಡ್ಡಸ'-ಅರ್ಥ

೧೨.೨: 'ಕೆಡ್ಡಸ'-ಆಚರಣೆಯ ವಿಧಾನ

೧೨.೩: 'ಕೆಡ್ಡಸ' ಆಚರಣೆ-ವಿಶ್ಲೇಷಣೆ

೧೨.೪: 'ಕೆಡ್ಡಸ'ಕ್ಕೆ ಸಮಾನವಾದ ಆಚರಣೆಗಳು

೧೨.೫: 'ಕೆಡ್ಡಸ'-ಆಚರಣೆಯ ಒಟ್ಟೂ ಸ್ವರೂಪ

# ಅಧ್ಯಾಯ-೧೨

# ತುಳುನಾಡಿನ ವಾರ್ಷಿಕ ಆವರ್ತನದ ಆಚರಣೆ 'ಕೆಡ್ಡಸ'

## ೧೨.೧: 'ಕೆಡ್ಡಸ'-ಅರ್ಥ

ತುಳುವರಿಗೆ 'ಪೊನ್ನಿ' ('ಪುಯಿಂತೆಲ್') ಹತ್ತನೇ ತಿಂಗಳು. ಈ ತಿಂಗಳ ೨೭, ೨೮, ೨೯, ೩೦ರಂದು 'ಕೆಡ್ಡಸ' ಆಚರಣೆ ಬರುತ್ತದೆ. ಅಂದರೆ 'ಮಾಯಿ' ತಿಂಗಳ (ಕುಂಭಮಾಸ) ಸಂಕ್ರಮಣದವರೆಗೆ 'ಕೆಡ್ಡಸ' ಆಚರಣೆ ಇರುತ್ತದೆ. ಕನ್ನಡದಲ್ಲಿ ಇದನ್ನು 'ಭೂಮಿತಾಯಿಯ ಮೀಹದ ಹಬ್ಬ' ಎಂದು ಕರೆಯುತ್ತಾರೆ. ಸಾಮಾನ್ಯವಾಗಿ 'ಕೆಡ್ಡಸ'ವನ್ನು ಮೂರು ದಿನ ಆಚರಿಸುತ್ತಾರೆ. ಇದನ್ನು 'ಶುರುಕೆಡ್ಡಸ', 'ನಡುಕೆಡ್ಡಸ ಮತ್ತು 'ಕಡೆಕೆಡ್ಡಸ'ವೆಂದು ಜನಪದರು ಕರೆಯುತ್ತಾರೆ. ಭೂಮಿತಾಯಿ ರಜಸ್ವಲೆ(ಪುಷ್ಪವತಿ)ಯಾಗುತ್ತಾಳೆ ಎಂಬ ನಂಬಿಕೆ ಈ ಆಚರಣೆಯ ಹಿಂದಿದೆ. ಪುಷ್ಪವತಿಯಾದ ಹೆಣ್ಣು ಹೆಂಗಸಾದಳೆಂಬುದು ಇದರರ್ಥ. ಈ ಮೂಲಕ ಹೆಣ್ಣು ಫಲವತಿಯಾಗುವ ಅರ್ಹತೆಯನ್ನು ಪಡೆಯುತ್ತಾಳೆ. ಹಾಗಾಗಿ 'ಕೆಡ್ಡಸ' ಆಚರಣೆ ಫಲೋತ್ಪತ್ತಿಯನ್ನು ಸಂಕೇತಿಸುವ ಅತ್ಯಂತ ಮಹತ್ವದ ಆಚರಣೆಯಾಗಿದೆ.

'ಕೆಡ್ಡಸ'ವನ್ನು 'ಕೆಡ್ಡಸೊ', 'ಕೆಡ್ಡೇಸೊ', ಇಲ್ಲವೆ 'ಕೆಡುವಾಸ' ಮೊದಲಾದ ಬೇರೆ ಬೇರೆ ಹೆಸರುಗಳಿಂದ ಕರೆಯುವುದು ಕಂಡುಬರುತ್ತದೆ. ಈ ಪದಕ್ಕೆ, ಮಕರ ಮಾಸದ ೨೭ನೆಯ ದಿನ ಮೊದಲ್ಗೊಂಡು ಕುಂಭಸಂಕ್ರಮಣದವರೆಗಿನ ದಿನಗಳಲ್ಲಿ ಆಚರಿಸುವ ತುಳುನಾಡಿನ ಒಂದು ಹಬ್ಬ. (ಈ ಮೂರು ದಿನಗಳಲ್ಲಿ ಭೂದೇವಿಯು ಪುಷ್ಪವತಿಯಾಗಿ ಫಲವತಿಯಾಗುವಳೆಂಬುದು ಜನಪದ ನಂಬಿಕೆ. ಈ ಸಮಯದಲ್ಲಿ ಮೂಡುದಿಕ್ಕಿನಿಂದ ಬೀಸುವ ಒಂದು ವಿಲಕ್ಷಣವಾದ ಗಾಳಿಯನ್ನು ಕೆಡ್ಡಸದ ಗಾಳಿ ಎನ್ನುತ್ತಾರೆ. ಈ ದಿನಗಳಲ್ಲಿ ನೆಲ ಅಗೆಯುವ, ಉಳುವ ಕೆಲಸ ನಿಷಿದ್ಧ. ಶೂರರು ಬೇಟೆಗೆ ಹೋಗುವುದು ಸಂಪ್ರದಾಯ. ಅಕ್ಕಿ ಮತ್ತಿತರ ಧಾನ್ಯಗಳನ್ನು ಹುರಿದು ಗೋಟು ತೆಂಗಿನ ಕಾಯಿ ಚೂರುಗಳನ್ನು ಬೆರೆಸಿ ಭೂದೇವಿಗೆ ಸಮರ್ಪಿಸಿ ತಿನ್ನುವುದು ವಾಡಿಕೆ. ಕೊನೆಯ ದಿನ ಭೂದೇವಿಗೆ ಸ್ನಾನ ಹಾಗೂ ಅಲಂಕಾರಕ್ಕೆ ಸಂಬಂಧಿಸಿದ ಆಚರಣೆಗಳಿವೆ); A three day festival of tulunad in the month of February. (There is a belief that the Mother Earth blooms during these days and becomes fertile. A strong eastern wind blows these days. People donot use their digging instruments. They go on a hunting expedition. A special fried dish of

rice and other cereals and pieces of dry coconut is prepared and offered to Mother Earth. On the last day of the festival certain rites are performed to celebrate bathing and ritual purification and decoration of the Mother Earth.) ಎಂಬುದಾಗಿ ತುಳು ನಿಘಂಟಿನಲ್ಲಿ ಅರ್ಥ ನೀಡಿದ್ದಾರೆ.[೧] "'ಕೆಡ್ಡಸ'ವೆಂದರೆ ತೊಡಗು ಎಂಬ ಅರ್ಥವೂ ಇದೆ. ತೊಡಗುವುದು ಎಂದರೆ ಕೃಷಿ ಆರಂಭಿಸುವುದು ಎಂದು ಪರಿಗ್ರಹಿಸಬಹುದು"[೨] ಎಂದು ಓರ್ವ ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ.

### ೧೨.೨: 'ಕೆಡ್ಡಸ'–ಆಚರಣೆಯ ವಿಧಾನ

'ಕೆಡ್ಡಸ' 'ಪೊನ್ನಿ' ತಿಂಗಳ ೨೭ರಂದು ಆರಂಭವಾದರೂ ಇದರ ವಿಶೇಷ ಆಚರಣೆಯ ಭಾಗ ಹೆಚ್ಚಾಗಿ 'ಪೊನ್ನಿ' ೨೯ ರಂದು ನಡೆಯುತ್ತದೆ. 'ಪೊನ್ನಿ' ೨೭ರಿಂದ ಸಾಮಾನ್ಯವಾಗಿ ೨೯ರವರೆಗೆ ಯಾರೂ ಭೂಮಿಗೆ ತೊಂದರೆ ಕೊಡುವಂತಹ ಯಾವುದೇ ಕೆಲಸಗಳನ್ನು ಮಾಡುವುದಿಲ್ಲ. 'ಪೊನ್ನಿ' ೨೯ರಂದು ಎಲ್ಲರೂ ಸಾಮಾನ್ಯವಾಗಿ ಮನೆಯನ್ನು ಸೆಗಣಿ ಸಾರಿಸಿ ಶುದ್ಧಗೊಳಿಸುತ್ತಾರೆ. ಮಾತ್ರವಲ್ಲ, ಮಧ್ಯಾಹ್ನ ಊಟಕ್ಕೆ ನುಗ್ಗೆ ಮತ್ತು ಬದನೆ ಪದಾರ್ಥವನ್ನು ಕಡ್ಡಾಯವಾಗಿ ಮಾಡುತ್ತಾರೆ. ತರಕಾರಿ ಭೋಜನ ನಡೆಯುತ್ತದೆ. ರಾತ್ರಿಗೆ 'ಪೇರಲ್ದಎಲೆ' (ಅಲದಮರದ ಎಲೆ), ಗಳಲ್ಲಿ ಮಡಚಿದ 'ಅಡ್ಯೆ' (ಅಕ್ಕಿತಿಂಡಿ) ಮಾಡುತ್ತಾರೆ. ರಾತ್ರಿ ಮೀನು ಮಾಂಸ ಪದಾರ್ಥ ಮಾಡುತ್ತಾರೆ. ಗಂಡಸರು 'ಕೆಡ್ಡಸ'ದ ದಿನಗಳಲ್ಲಿ ಈ ಆಚರಣೆ ಭಾಗವಾಗಿ ಮೂರು ದಿನಗಳಲ್ಲಿಯೂ 'ಬೋಂಟೆ'ಗೆ (ಬೇಟೆಗೆ) ಹೋಗುತ್ತಾರೆ. 'ಬೋಂಟೆ'ಯಲ್ಲಿ ಯಾವುದೇ ಪ್ರಾಣಿಗಳು ಸಿಕ್ಕಿದಲ್ಲಿ 'ಕೆಡ್ಡಸ'ದ ರಾತ್ರಿ ಅದನ್ನೆ ಪದಾರ್ಥ ಮಾಡುತ್ತಾರೆ. ಮೀನುಮಾಂಸವನ್ನು ತಿನ್ನದವರು ಮಾತ್ರ ಅಕ್ಕಿಯನ್ನು ಹುರಿದು ತಿನ್ನುತ್ತಾರೆ. 'ಕೆಡ್ಡಸ'ದ ನಾಲ್ಕನೆಯ ದಿನ ಬೆಳಿಗ್ಗೆ ಬೇಗ ಅಂದರೆ 'ಪೊನ್ನಿ' ೩೦ ಹೋಗುವಂದು ಮನೆಯ ಹಿರಿಯ ಹೆಂಗಸು ಭೂಮಿಗೆ 'ಎಣ್ಣೆ ಹೊಯ್ಯುವ' ವಿಧಿಯನ್ನು ನೇರವೇರಿಸುತ್ತಾರೆ. ಇದಕ್ಕಾಗಿ ಹಿಂದಿನ ದಿನ ರಾತ್ರಿಯೇ ಎಲ್ಲಾ ಸಿದ್ಧತೆಗಳನ್ನು ಮಾಡಿಕೊಳ್ಳುತ್ತಾರೆ. ತುಳಸಿಕಟ್ಟೆಯ ಬಳಿ ರಾತ್ರಿ ಸೆಗಣಿ ಸಾರಿಸಿ ಸ್ಥಳ ಶುದ್ಧಗೊಳಿಸಿ ಮಾವಿನ ಮರದ ಮೂರು ಎಲೆ, ಹಲಸಿನ ಮರದ ಮೂರು ಎಲೆ, ಸೀಗೆಕಾಯಿ (ಕೊಳೆ ತೆಗೆಯುವ ಒಂದು ಜಾತಿಯ ಕಾಯಿ) ಗರಿಕೆ ಹುಲ್ಲು, ಗೆರೆಟೆಯಲ್ಲಿ ಕುಂಕುಮ, ಗಂಧ, ತೆಂಗಿನೆಣ್ಣೆ ಇಲ್ಲವೆ ಎಳ್ಳೆಣ್ಣೆ ಹಾಗೂ ದೀಪ ಇತ್ಯಾದಿಗಳನ್ನು ಇಡುತ್ತಾರೆ. ಜೊತೆಗೆ ರಾತ್ರಿ ಮಾಡಿದ 'ಅಡ್ಯೆ'(ಅಕ್ಕಿತಿಂಡಿ) ಒಂದನ್ನು ಇಡುತ್ತಾರೆ. ಮರುದಿನ ಬೆಳಿಗ್ಗೆ ಬೇಗ

ಎದ್ದು ಆ ಜಾಗದಲ್ಲಿ ಭೂಮಿಗೆ ಮೂರು ತೊಟ್ಟು ಎಣ್ಣೆ ಹೊಯ್ಯುತ್ತಾರೆ; ಭಕ್ತಿಯಿಂದ ಕೈ ಮುಗಿಯುತ್ತಾರೆ. ಈ ರೀತಿ ಭೂಮಿಗೆ ಎಣ್ಣೆ ಹೊಯ್ಯುವ ಹೆಂಗಸರು ಹಿಂದಿನ ರಾತ್ರಿ ಮಾಂಸಾಹಾರ ಸೇವಿಸುವುದಿಲ್ಲ.

'ಕೆಡ್ಡಸ'ಕ್ಕೆ 'ಕುಡುಅರಿ' ಅಥವಾ 'ನನ್ನೆರಿ' ಅತ್ಯಂತ ಅಗತ್ಯ ಮತ್ತು ಇದರ ಸೇವನೆಯನ್ನು ಮಾಡಲೇಬೇಕೆಂಬುದು ಜನಪದರ ನಂಬಿಕೆ. ಈ ಬಗ್ಗೆ ವಿದ್ವಾಂಸರು ಹೇಳುವಂತೆ, "ಇನ್ನು ಕೆಲವು ಕಡೆಗಳಲ್ಲಿ ಅಂಗಳದ ಒಂದೆಡೆ ಸ್ವಲ್ಪ ನೆರಳಿನ ಜಾಗದಲ್ಲಿ ಗೋಮಯದಿಂದ ಸ್ಥಳ ಶುದ್ಧಿ ಮಾಡಿ, ಮೊಳದಷ್ಟು ಅಗಲಕ್ಕೆ ವೃತ್ತವೊಂದನ್ನು ವಿಭೂತಿಯಿಂದ ಬಿಡಿಸಿ ಅದರಲ್ಲಿ ಬಿಳಿಯ ಮಡಿ ಬಟ್ಟೆ, ಗೆಜ್ಜೆ ಕತ್ತಿ (ಕಿರುಗತ್ತಿ), ತೆಂಗಿನ ಸೋಗೆಯ ಹಸಿಕಡ್ಡಿಯನ್ನು ಇಟ್ಟು ಭೂಮಿ ತಾಯಿಯ ಸಾನಿಧ್ಯವನ್ನು ಸಂಕೇತಿಸುತ್ತಾರೆ. ಕೆಡ್ಡಸದ ಪ್ರಾರಂಭದ ದಿನ ಬೆಳಿಗ್ಗೆ ಅಡುಗೆ ಮನೆಯನ್ನು ಶುಚೀಕರಿಸಿ ನವಧಾನ್ಯಗಳನ್ನು (ಇವುಗಳಲ್ಲಿ ಹುರುಳಿ ಮುಖ್ಯವಾದದ್ದು) ಅಥವಾ ಇದ್ದಷ್ಟು ಬಗೆಯ ಧಾನ್ಯಗಳನ್ನು ಹುರಿದು ಪುಡಿ ಮಾಡಿ, ಬೆಲ್ಲ, ಅರಳು, ತೆಂಗಿನಕಾಯಿಯ ಚೂರುಗಳನ್ನು ಬೆರೆಸಿ ಅಗ್ರದ ಬಾಳೆಯೆಲೆಯಲ್ಲಿ ಹಾಕಿ ಭೂಮಿ ಬರೆದುದರ ಬದಿಯಲ್ಲಿಟ್ಟು ನಮಿಸುತ್ತಾರೆ. (ಇವೆಲ್ಲ ಫಲವಂತಿಕೆಯ ಬಯಕೆಯ ಸಂಕೇತಗಳು) ಆ ಬಳಿಕ ಎಲ್ಲರಿಗೂ ಹಂಚಿ ತಿನ್ನುತ್ತಾರೆ. ಇದಕ್ಕೆ 'ಕೆಡ್ಡಸದ ಕುಡು ಅರಿ' ಅಥವಾ 'ನನ್ನೆರಿ' ಎನ್ನುತ್ತಾರೆ. ಜೊತೆಗೆ ಬಾಳೆಹಣ್ಣನ್ನೂ ಸೇರಿಸಿಕೊಳ್ಳುವ ಸಂಪ್ರದಾಯವೂ ಇದೆ. ಚೊಚ್ಚಲ ಮಕ್ಕಳಂತೂ ಈ ಹುರಿಗಾಳನ್ನು ತಿನ್ನಲೇಬೇಕಂತೆ. ಅವರು ಪರವೂರಿನಲ್ಲಿದ್ದರೆ ಅವರ ಪಾಲಿನದ್ದನ್ನು ಕಟ್ಟಿಟ್ಟು ಅವರು ಬಂದಾಗ ಕೊಡಲೇಬೇಕಂತೆ"[3] ಎಂದು ಹೇಳಲಾಗಿದೆ. ಹಾಗೆಯೇ 'ಕೆಡ್ಡಸ'ದ ದಿನ ಮಧ್ಯಾಹ್ನದ ಊಟಕ್ಕೆ ನುಗ್ಗೆ ಮತ್ತು ಬದನೆಯ ಪದಾರ್ಥ ಕಡ್ಡಾಯವಾಗಿ ಆಗಬೇಕೆಂದು ಜನಪದರು ಹೇಳುತ್ತಾರೆ. ಅಂತೆಯೇ ಹಲಸಿನ ಮಿಡಿಯ ಪದಾರ್ಥಗಳನ್ನು ಮಾಡುವುದು ಕಂಡುಬರುತ್ತದೆ. ಈ ಕುರಿತು ವಿದ್ವಾಂಸರು ಹೀಗೆ ಹೇಳುತ್ತಾರೆ "ಆ ದಿನ ಮಧ್ಯಾಹ್ನದ ಊಟಕ್ಕೆ ನುಗ್ಗೆಯಪಲ್ಯ ಅಗತ್ಯವೆನ್ನಲಾಗಿದೆ. ನುಗ್ಗೆ ಬದನೆ ಮಿಶ್ರ ಮಾಡಿದ ಪದಾರ್ಥಗಳಲ್ಲದೆ ಅವರೆ, ಹಲಸಿನ ಮಿಡಿಗಳ ಪಲ್ಯವನ್ನು ಮಾಡುವುದು ರೂಢಿ. ರಾತ್ರಿ ಉದ್ದಿನ ದೋಸೆ, ಪುಳಿಓಟ್ಟು, ಸಿಹಿತಿಂಡಿ ಇತ್ಯಾದಿ ಮಾಡುತ್ತಾರೆ. ಗಂಡಸರು ರುಬ್ಬುವ ಕಲ್ಲಿನ ಬಳಿ ಕುಳಿತು ಅಕ್ಕಿ ಕಡೆದು ದೋಸೆ ಮಾಡುವ ಪದ್ಧತಿ ಕೆಲವು ಕಡೆ ಇದೆ. ದೈನಂದಿನ ಬದುಕಿನ ಒಂದು 'ವ್ಯತ್ಯಾಸ ಮುಖ' (ಚೇಂಜ್) ತತ್ವ ಇದರಲ್ಲಿದೆ ಎನ್ನಬಹುದು. ಗಂಡಸರು ಈ ಬಿಡುವಿನ ದಿನಗಳಲ್ಲಿ ಬೇಟೆ, ಕೋಳಿಅಂಕ ಇತ್ಯಾದಿಗಳಲ್ಲಿ ಪಾಲ್ಗೊಳ್ಳುವುದು ವಾಡಿಕೆ.

ಹೆಂಗಸರು ಭೂಮಿ ಅದುರುವಂತೆ ಓಡಾಡುವುದಕ್ಕೆ ವಿನಾಯಿತಿ ಇದೆ"[9] ಎನ್ನುತ್ತಾರೆ. 'ಕೆಡ್ಡಸ' ಎಂದರೆ ಸಾಮೂಹಿಕ ಬೇಟೆ ಎಂಬುದಾಗಿ ಹೆಚ್ಚು ಪ್ರಚಲಿತವಿರುವ ಸಂಗತಿ. 'ಪುಂಡದ' ಎಂಬ ಹಕ್ಕಿಗೆ ಈ ಸಮಯದಲ್ಲಿ ಜ್ವರ ಬರುತ್ತದೆ ಎಂಬ ವಾಡಿಕೆಯ ಮಾತೊಂದಿದೆ. ಅಂತೆಯೇ 'ಪುಂಡದ ಬೋಂಟೆ' 'ಕೆಡ್ಡಸ'ದ ವೇಳೆ ನಡೆಸುತ್ತಾರೆ. ಜ್ವರದಿಂದ ಬಳಲುತ್ತಿರುವ ಈ ಪಕ್ಷಿ ಸುಲಭವಾಗಿ ಸಿಗುತ್ತದೆಯಂತೆ. ಇದರ ಪದಾರ್ಥ ಎಲುಬು ಸುರಿಯುವ ಕಾಯಿಲೆಗೆ ಒಳ್ಳೆಯ ಮದ್ದು ಎಂಬುದಾಗಿ ಹೇಳಲಾಗುತ್ತದೆ. ಆದರೆ ಈ 'ಪುಂಡದ' ಪಕ್ಷಿಯ ಪದಾರ್ಥವನ್ನು ಮನೆಯೊಳಗೆ ಮಾಡಬಾರದೆಂಬ ವಿಧಿನಿಷೇಧವೂ ಜನಪದರಲ್ಲಿದೆ. ಈ 'ಕೆಡ್ಡಸ'ದ ಬೇಟೆಯ ಬಗ್ಗೆ ವಿದ್ವಾಂಸರು ನೀಡುವ ವಿವರವನ್ನು ಗಮನಿಸುವುದಾದರೆ–"ಬೇಟೆಗೆ ಹೊರಡಬೇಕೆನ್ನುವ ಡಂಗುರವನ್ನು ಊರ ಅಜಲಾಯ (ನಲಿಕೆಯವ)ನು ಡೋಲು ಹೆಗಲಿಗೆ ಹಾಕಿ ಬಾರಿಸುತ್ತಾ ಮನೆ ಮನೆಗೆ ಬಂದು ಸಾರುವುದು ರೂಢಿ. ಕಾಡಿಗೆ ಹೋಗಿ ಬೇಟೆಯಾಡುವುದಲ್ಲದೆ ಕೊಳ ಕೆರೆಗಳಿಗೆ ಹೋಗಿ ಮೀನು, ಏಡಿ ಮುಂತಾದವನ್ನು ಹಿಡಿಯುತ್ತಾರೆ. ಕೆಲವರು ಆಮೆಗಳನ್ನು ಹುಡುಕುತ್ತಾರೆ. ಹಬ್ಬಕ್ಕೋಸ್ಕರ ಸಾಕಿದ ಹಂದಿಗಳನ್ನು ಕೊಲ್ಲುವುದೂ ಇದೆ. ಅದಲ್ಲದಿದ್ದರೆ ಕುಕ್ಕುಟ ಸಂಹಾರ. ಕೋಳಿ ಅಂಕವಂತೂ ಹಳ್ಳಿಯ ಆಕರ್ಷಕ ರಕ್ತರಂಜಿತ ಕ್ರೀಡೆ. ಇದಲ್ಲದೆ ವಿನೋದಕ್ಕೋಸ್ಕರ ಕುಟ್ಟಿದೊಣ್ಣೆ, ಚೆಡುಗುಡು (ಕಬಡ್ಡಿ), ಚೆಂಡು, ಪಲ್ಲಿಪತ್ತ್ ಮೊದಲಾದ ಆಟಗಳಲ್ಲಿ ಕಾಲ ಕಳೆಯುದಿದೆ.

ನಡುಕೆಡ್ಡಸದ ದಿವಸ 'ದೊಡ್ಡ ಬೇಟೆ'ಯ ಸಂಪ್ರದಾಯ. ಬೇಟೆನಾಯಿಗಳ ನೆರವಿನಿಂದ ಕೋವಿ, ಕತ್ತಿ, ದೊಣ್ಣೆಗಳಿಂದ ಕಾಡನ್ನು ಎಬ್ಬುವ ಸಾಮೂಹಿಕ ಸಂಭ್ರಮದ ಸಂದರ್ಭವಿದು. ಹೊರಡುವ ಮೊದಲು ಪುರುಷ ಭೂತ ಹಾಗೂ ಮುಗ್ಗೆರ್ಲು ದೈವಗಳನ್ನು (ಈ ದೈವಗಳು ಬೇಟೆಗೆ ಸಹಕಾರಿಗಳೆಂದು ಪ್ರತೀತಿ) ಪ್ರಾರ್ಥಿಸಿ ಕಾಡನ್ನು ಪ್ರವೇಶಿಸುವುದು ರೂಢಿ. ನಲಿಕೆಯವನು ಡೋಲು ಹೊಡೆಯುತ್ತಾ ಬೇಟೆಗಾರರನ್ನು ಪುಸಲಾಯಿಸಿ ಹೊಗಳಿ ಕಾಕು ಹಾಕುತ್ತಾ ಒಂದಿಷ್ಟು ದೂರ ಹೋಗಿ ಒಂದು ಮುಷ್ಟಿ ಮರಳನ್ನು ಮುಂದೆ ಬಿಸಾಡಿ ಒಂದಿರುಗುತ್ತಾನೆ. (ಇದೊಂದು ಮೃಗಾಕರ್ಷಣೆಯ ತಾಂತ್ರಿಕ ವಿಧಿಯ ಪಳಿಯುಳಿಕೆ ಇರಬಹುದು) ಬೇಟೆಗಾರರು ಉತ್ಸಾಹದಿಂದ ಮುನ್ನುಗ್ಗುತ್ತಾರೆ.

ಬೇಟೆಯಲ್ಲಿ ಮೊದಲು ಮೃಗಕ್ಕೆ ಹೊಡೆದು ರಕ್ತ ಚಿಮ್ಮಿಸಿದವನಿಗೆ ಮೊದಲ ದಾಯ (ಪಾಲು) ಲಭ್ಯವಾಗುತ್ತದೆ. ಹಂದಿ ಹೊಡೆದವನಿಗೆ ಮೂರು ದಾಯಗಳು. ತಲೆ, ಕೈ, 'ನಡುಗಂಟ' (ಬೆನ್ನೆಲುಬು ಭಾಗ) ಉಳಿದುದು ಎಲ್ಲರಿಗೂ ಪಾಲು. ಮೊದಲು ಕಾಡಿನ

ಭೂತಗಳಿಗೆಂದು ಅದರ 'ಕರ್ಯಟ' (ಪಿತ್ತ ಜನಕಾಂಗ)ವನ್ನು ಬೆಂಕಿಯಲ್ಲಿ ಸುಟ್ಟು ಅರ್ಪಿಸಿ, ಅದನ್ನು ಅಲ್ಲೇ ಪ್ರಸಾದ ರೂಪವಾಗಿ ಹಂಚುತ್ತಾರೆ. ಹಾಗೆ ಪುರುಷ ಭೂತಕ್ಕೂ ಮುಗ್ಗೆರ್ಲ ದೈವಗಳಿಗೂ ಒಂದೊಂದು ಮೀಸಲು ಪಾಲು ಸಲ್ಲುತ್ತದೆ. ಆ ಮಾಂಸಭಾಗವನ್ನು ಸಂಬಂಧಪಟ್ಟವರು ಮನೆಗೊಯ್ದು, ಪಾಕಮಾಡಿ ಆಯಾ ದೈವಗಳಿಗೆ ಮರಗಳ ಬುಡಗಳಲ್ಲಿ ಎಡೆ ಅರ್ಪಿಸುತ್ತಾರೆ. ಕೂಡಿದ ಜನರಿಗೆಲ್ಲ ದಾಯವನ್ನು ಕ್ರಮದಂತೆ ಹಂಚಲಾಗುತ್ತದೆ. ಬೇಟೆಯಲ್ಲಿ ಪಾಲುಗೊಂಡವರಿಗೆ ಮಾತ್ರವಲ್ಲದೆ ಊರ ಪಟೇಲರಿಗೂ ಇತರ ಗಣ್ಯವ್ಯಕ್ತಿಗಳಿಗೂ ಪಾಲು ಸಲ್ಲುತ್ತದೆ. ಬೇಟೆ ಡಂಗುರದ ಅಜಲಾಯನಿಗೂ ಪಾಲು ಸಲ್ಲುತ್ತದೆ. ಬೇಟೆ ನಾಯಿಗಳೂ ಪಾಲು ಪಡೆಯುತ್ತವೆ. ಮಾಂಸ ಹಂಚಿಕೊಂಡಾದ ಬಳಿಕ 'ನನ ದುಂಬುಗುಲಾ ಇಂಚನೇ ನಡಪೊಡು' (ಇನ್ನು ಮುಂದಕ್ಕೂ ನಡೆಯಬೇಕು) ಎಂದು ಹೊರಡುವಾಗ ಒಂದು ಸನ್ನೆಗುಂಡು ಹೊಡೆದು ಶಬ್ದವೆಬ್ಬಿಸುವ ಕ್ರಮವಿದೆ"[೨] ಎಂದು ಹೇಳುವಲ್ಲಿ ಈ ಆಚರಣೆಯ ಮಹತ್ವವನ್ನು ತಿಳಿಯಬಹುದು. ಹೀಗೆ ಬೇಟೆಗೆ ಹೋಗುವವರನ್ನು 'ಸೋವತ'ರೆಂದೂ, ಬೇಟೆಯ ನಿರ್ದೇಶಕನನ್ನು 'ಬೊಂಟ್ರ'ನೆಂದೂ ಕರೆಯಲಾಗುತ್ತದೆ.[೬]

ಅವರು ಮುಂದುವರೆಸುತ್ತಾ-"ಮೂರನೆಯ ಮುಂಜಾನೆ ಮುತ್ತೈದೆಯರು 'ಭೂಮಿ' ಬರೆದಲ್ಲಿ (ತುಳಸಿಕಟ್ಟೆಯ ಬಳಿಯೂ ಆಗಬಹುದು) ಏಳು ಸರೊಳಿ ಸೊಪ್ಪುಗಳನ್ನು (ಲೋಳೆ ರಸವುಳ್ಳದ್ದು) ಪಶ್ಚಿಮಕ್ಕೆ ತುದಿ ಬರುವಂತೆ ಸಾಲಾಗಿರಿಸಿ, ದೀಪವಿರಿಸಿ, ಮಣೆ ಮಡುಗುತ್ತಾರೆ. ಅರಸಿನ ಕುಂಕುಮ, ಮಸಿ, ಎಣ್ಣೆ, ಸೀಗೆ ಬಾಗೆಗಳ ಕೋಡು ತೊಗಟೆಗಳು (ಅಥವಾ ಅವುಗಳನ್ನು ಪುಡಿ ಮಾಡಿ ಉಂಡೆ ಮಾಡಿಟ್ಟದ್ದನ್ನು), ಪಚ್ಚೆಹೆಸರು ಪುಡಿ, ವೀಳ್ಯ, ಊದುಬತ್ತಿ ಇತ್ಯಾದಿಗಳನ್ನು ಇರಿಸುತ್ತಾರೆ. ಭೂಮಿಯ ಅಲಂಕಾರಕ್ಕಾಗಿ ಕನ್ನಡಿ, ಬಾಚಣಿಗೆ, ಕರಿಮಣಿಗಳನ್ನು ಇರಿಸುವುದೂ ಉಂಟು. ಹೊಸ್ತಿಲನ್ನು ರಂಗವಲ್ಲಿಯಿಂದ ಸಿಂಗರಿಸುವುದಿದೆ. ಮಿಂದು ಶುದ್ಧಳಾದ ಭೂಮಿತಾಯಿಯನ್ನು, ಫಲವತಿಯಾಗಲಿರುವ ಮಾತೃದೇವತೆಯನ್ನು ಮನೆಯೊಳಕ್ಕೆ ಸ್ವಾಗತಿಸುವ ಸನ್ನಾಹವಿದು"[೭] ಎಂದು ಹೇಳುವುದನ್ನು ವಿಶೇಷವಾಗಿ ಲಕ್ಷಿಸಬೇಕು. ಕುಟುಂಬದ ಸದಸ್ಯರು ಎಲ್ಲಿದ್ದರೂ ಈ ದಿನ ಮನೆಗೆ ಬರುತ್ತಾರೆ. ಈ ಆಚರಣೆಯಲ್ಲಿ ಭಕ್ತಿ ಸಂಭ್ರಮಗಳಿಂದ ಪಾಲ್ಗೊಳ್ಳುತ್ತಾರೆ. ಸಾಮೂಹಿಕ ಬೇಟೆಯಲ್ಲದೆ ಕೋಳಿಅಂಕ, ಇಲ್ಲವೆ ತೆಂಗಿನಕಾಯಿ ಕುಟ್ಟುವಂತಹ ಕ್ರೀಡೆಯನ್ನು ಮನೋರಂಜನೆಗಾಗಿ ಆಡುತ್ತಾರೆ. ಹುಟ್ಟು ಸಾವುಗಳ ಸೂತಕಗಳು ಬಂದರೆ ಈ ಆಚರಣೆಯನ್ನು ಮಾಡುವುದಿಲ್ಲ. ('ಕೆಡ್ಡಸ' ಆಚರಣೆಗೆ ಸಂಬಂಧಿಸಿದಂತೆ

ಅನುಬಂಧ ಪುಟ- xv ರಲ್ಲಿನ ಚಿತ್ರ-೧.೯.೧ ಮತ್ತು ೧.೯.೨ ಇವುಗಳನ್ನು ಗಮನಿಸಬಹುದು.)

### ೧೨.೩: 'ಕೆಡ್ಡಸ' ಆಚರಣೆ-ವಿಶ್ಲೇಷಣೆ

'ಕೆಡ್ಡಸ' ಆಚರಣೆಯ ಕ್ರಮವನ್ನು ಪರಿಶೀಲಿಸುವಾಗ ಇದು ಫಲವಂತಿಕೆಯನ್ನು ಸಂಕೇತಿಸುತ್ತದೆ. ಹೆತ್ತ ತಾಯಿಯಂತೆ ಹೊತ್ತ ಭೂಮಿಯನ್ನು, ಪ್ರಕೃತಿಯನ್ನು ಹೆಣ್ಣು ಎಂದು ಕಲ್ಪಿಸಿರುವ ಮನುಷ್ಯ ಬೆಳೆ, ಗಿಡ-ಮರ-ಬಳ್ಳಿ, ಫಲ-ಪುಷ್ಪ ಸಮೃದ್ಧಿಗಳೆಲ್ಲ ಭೂದೇವಿಯ ಫಲವಂತಿಕೆಯ ಕೊಡುಗೆಗಳೆಂದು ಸ್ವೀಕರಿಸಿದ್ದಾನೆ. ತಾಯಿಯಂತೆ ಜೀವನಾಧಾರಳಾಗಿ ಕಂಡ ಭೂಮಾತೆಯನ್ನು ಅತ್ಯಂತ ಗೌರವದಿಂದ ಪ್ರಕೃತಿಮಾತೆ ಎಂದು ಆರಾಧಿಸತೊಡಗಿದ. ಮಾತೃ-ಪ್ರಕೃತಿ ಕಲ್ಪನೆಗಳು ಸಮಾನವೆಂದು ಗ್ರಹಿಸಿರುವ ಮಾನವ ಬದುಕಲು ಅನಿವಾರ್ಯವಾದ ಅನ್ನವನ್ನು ಕೊಡುವ ಭೂಮಿಯನ್ನು ಬೆಳೆ ಬೆಳೆಯುವ ಕ್ಷೇತ್ರವಾಗಿ ಸ್ವೀಕರಿಸಿದ. ಹಾಗಾಗಿ ಇಲ್ಲಿ ತನ್ನಂತೆ ಪ್ರಕೃತಿಯನ್ನೂ ಬಗೆಯುವ ಜನಪದರ ಆನ್ವಯಿಕ ಕಲ್ಪನೆ ವೈಶಿಷ್ಟ್ಯಪೂರ್ಣವಾಗಿದೆ. ಸಕಲ ಜೀವರಾಶಿಗಳ ಹುಟ್ಟಿಗೆ ಕಾರಣವಾಗಿರುವ ಭೂಮಿಯನ್ನು ಜನ್ಮದಾತೆ ಎಂಬರ್ಥದಲ್ಲಿ ಹೆಣ್ಣೆಂದು ಪರಿಭಾವಿಸಿ, ಹೆಣ್ಣಿನ ಶರೀರದಲ್ಲಾಗುವ ಜೈವಿಕ ಪರಿವರ್ತನೆಗಳಲ್ಲೊಂದಾದ ರಜಸ್ವಲೆಯಾಗುವ ಸಾಂಕೇತಿಕತೆಯನ್ನು ಭೂಮಿಗೂ ಅನ್ವಯಗೊಳಿಸಿ ಆ ನೆಲೆಯಲ್ಲಿ ತುಳುವರು 'ಕೆಡ್ಡಸ' ಆಚರಣೆಯನ್ನು ಮಾಡುತ್ತಿರುವುದು ತುಳುವರ ಸಮನ್ವಯ ದರ್ಶನ ದೃಷ್ಟಿಗೆ ಸಾಕ್ಷಿಯಾಗಿ ನಿಲ್ಲುತ್ತದೆ. ಫಲವಂತಿಕೆಯನ್ನು ಸಂಕೇತಿಸುವ ಹಿನ್ನೆಲೆಯಲ್ಲಿ ಹೇಳುವಾಗ ವಿದ್ವಾಂಸರು ವ್ಯಕ್ತಪಡಿಸುವ ಈ ಅಭಿಪ್ರಾಯವನ್ನು ವಿಶೇಷವಾಗಿ ಗಮನಿಸಬೇಕು-"ನಮ್ಮ ಸಂಸ್ಕೃತಿಯಲ್ಲಿ ಫಲವಂತಿಕೆಯ ಆಚಾರ ವಿಧಿ (Fertility cult) ಹಲವು ರೀತಿಗಳಲ್ಲಿ ವ್ಯಕ್ತಗೊಂಡಿದೆ. ಅನೇಕ ದೇವತೆಗಳು ಸಮೃದ್ಧಿ ಹಾಗೂ ಸಂತಾನಕಾರಕ ಶಕ್ತಿಯಿಂದ ಕೂಡಿರುವುದನ್ನು ಅವುಗಳ ವಿಗ್ರಹ ವಿನ್ಯಾಸ, ಕೈಯಲ್ಲಿ ಧರಿಸಿದ ಮಾದಳ ಇತ್ಯಾದಿ ಫಲವಸ್ತುಗಳು, ಉಪಾಸನಾ ವಿಧಾನ, ಸ್ತೋತ್ರಕ್ರಮ ಇತ್ಯಾದಿಗಳಿಂದ ತಿಳಿದುಕೊಳ್ಳಬಹುದು. ಎಷ್ಟೋ ದೇವತೆಗಳನ್ನು ವಿಶಿಷ್ಟ ಋತುಗಳಲ್ಲಿ ನಿರ್ದಿಷ್ಟ ನೈಸರ್ಗಿಕ ಹಿನ್ನೆಲೆಗಳಲ್ಲಿ ಪೂಜಿಸುವ ಪರಂಪರೆಯೂ ಬೆಳೆದು ಬಂದಿದೆ. ಅನೇಕ ಹಬ್ಬಗಳು ಸೃಷ್ಟಿವೈಚಿತ್ರಕ್ಕೆ ಮನುಷ್ಯ ತೋರುವ ಸಂಭ್ರಮಾತ್ಮಕವಾದ ಪ್ರತಿಕ್ರಿಯೆಗಳಾಗಿವೆ.

ಸಂತಾನಾಪೇಕ್ಷೆಯ ಅದಮ್ಯತೆಯನ್ನು, ವೈಭವೀಕರಣವನ್ನು ಇಂಥ ಸಂದರ್ಭಗಳಲ್ಲಿ ನಾವು ಇದಿರುಗೊಳ್ಳುತ್ತೇವೆ. ಪ್ರಾಚೀನ ಶಿಷ್ಟ ಕಾವ್ಯಗಳಲ್ಲಿ ಮಾತ್ರವಲ್ಲ, ಜನಪದ ಕಾವ್ಯಗಳಲ್ಲೂ ಈ ಬಯಕೆ ವಿಧವಿಧವಾಗಿ ಅಭಿವ್ಯಕ್ತಗೊಂಡುದನ್ನು ಕಾಣುತ್ತೇವೆ. ಮನುಷ್ಯ ಪೂಜಿಸುವ ದೇವತೆಗಳಿಗೆ, ಮನುಷ್ಯನಂತೆಯೇ ಕಾಯವಿಕಾರಗಳನ್ನೂ ಭಾವವಿಕಾರಗಳನ್ನೂ ಆಹಾರ, ನಿದ್ರಾ, ಭಯ, ಮೈಥುನ ಪ್ರವೃತ್ತಿಯನ್ನೂ ಅಂಟಿಸಿದ್ದನ್ನು ಪುರಾಣ ಐತಿಹ್ಯಾದಿಗಳಲ್ಲೂ ಹಬ್ಬ ಹರಿದಿನಗಳಿಗೆ ಆಧಾರವಾದ ಜನಪದ ನಂಬಿಕೆಗಳಲ್ಲೂ ನಾವು ಧಾರಾಳವಾಗಿ ಕಾಣುತ್ತೇವೆ. ಕೆಲವೆಡೆ ಉತ್ಸವ ಸಂದರ್ಭಗಳಲ್ಲಿ ಸ್ತ್ರೀದೇವತೆ ಬಹಿಷ್ಠೆಯಾದುದರ ಸೂಚನೆಯಾಗಿ ಅರಸಿನ ಅಥವಾ ಕೆಂಪು ಬಣ್ಣದ ಬಟ್ಟೆಯನ್ನು ಅಡ್ಡವಾಗಿ ಕಟ್ಟಲಾಗುತ್ತದೆ. ನೈಸರ್ಗಿಕ ಸ್ತ್ರೀ ದೇಹ ಧರ್ಮವಾದ ಋತುಸ್ರಾವದ ಕುರಿತು ದೇಶವಿದೇಶಗಳ ಜನಪದರಲ್ಲಿ, ಆದಿವಾಸಿಗಳಲ್ಲಿ ಚಿತ್ರವಿಚಿತ್ರಗಳಾದ ಕಲ್ಪನೆಗಳು, ವಿಧಿನಿಷೇಧಗಳು ಬೆಳೆದುಬಂದಿವೆ.

ಪುರಾಣಗಳ ಪ್ರಕಾರ ಹೆಣ್ಣು ರಜಸ್ವಲೆಯಾಗುವುದು ಇಂದ್ರನ ಬ್ರಹ್ಮಹತ್ಯಾ ದೋಷದಲ್ಲಿ ಒಂದು ಪಾಲನ್ನು ಆಕೆ ಪಡೆದುದರಿಂದ ಎನ್ನಲಾಗಿದೆ. ವಿಶ್ವರೂಪಾಚಾರ್ಯನ ವಧೆಯಿಂದ ಪ್ರಾಪ್ತವಾದ ಬ್ರಹ್ಮದೋಷವನ್ನು ನಾಲ್ಕು ಪಾಲು ಮಾಡಿ ಭೂಮಿ, ನದಿ, ವೃಕ್ಷ ಹಾಗೂ ಸ್ತ್ರೀ ಇವರಿಗೆ ಹಂಚಿಕೊಟ್ಟುದಾಗಿಯೂ ಇದೇ ಕಾರಣಕ್ಕಾಗಿ ಭೂಮಿದೇವಿ ವರ್ಷಕ್ಕೊಮ್ಮೆ ಬಹಿಷ್ಠೆಯಾಗುವುದಾಗಿಯೂ ಪೌರಾಣಿಕ ನಂಬಿಕೆ. ಆದರೆ ಭೂಮಿಯ ಈ 'ದೋಷ' ಲೋಕಕ್ಕೆ ಶುಭಕರವೆಂದು ಸಂಬಂಧಪಟ್ಟ ಆಚರಣೆಗಳಿಂದ ತಿಳಿಯುವಂತಿದೆ"[೮] ಎನ್ನಲಾಗಿದೆ. ಈ ವಿಶ್ಲೇಷಣೆಯಲ್ಲಿ 'ಭೂಮಿ'ಯ ಬಗೆಗಿನ ಕುತೂಹಲ ಮತ್ತು 'ಕೆಡ್ಡಸ' ಆಚರಣೆಯ ಹಿಂದಿರುವ ಆಶಯವನ್ನು ತಿಳಿಸುವ ಸಾಕಷ್ಟು ನಂಬಿಕೆ ಆಚರಣೆಗಳು ಲೋಕಾದ್ಯಂತ ಬಹುಹಿಂದಿನಿಂದಲೇ ಪ್ರಚಲಿತದಲ್ಲಿರುವ ವಿಷಯ ಕಂಡುಬರುತ್ತದೆ.

'ಕೆಡ್ಡಸ' ತುಳುವರ ವಿಶಿಷ್ಟವಾದ ಆಚರಣೆಗಳಲ್ಲಿ ಒಂದು. 'ಕೆಡ್ಡಸ' ಪದ ನಿಷ್ಪತ್ತಿಯ ಬಗ್ಗೆ ಸರಿಯಾದ ನಿರ್ವಚನ ಸಿಗುವುದಿಲ್ಲ. ಡಾ.ಅಮೃತ ಸೋಮೇಶ್ವರ ಅವರು ಖೇಟ, ಖೆಡ್ಡ, ಕೆಡ್ಡ ಎಂಬುದಕ್ಕೆ ಬೇಟೆ ಎಂಬರ್ಥವಿದ್ದು ಕೆಡ್ಡಸಕ್ಕೆ ಸಂಬಂಧಪಟ್ಟ ಹಾಗೆ ಬೇಟೆಯೂ ಒಂದಂಗವಾಗಿರುವುದರಿಂದ ಈ ಹೆಸರು ಬಂದಿರಲೂಬಹುದು ಎಂದು ಅಭಿಪ್ರಾಯಪಟ್ಟಿದ್ದಾರೆ.[೯] ಡಾ.ಪಾಲ್ತಾಡಿ ರಾಮಕೃಷ್ಣ ಆಚಾರ್ ಅವರು 'ಕೆಡ್ಡಸ' ಪದ ನಿಷ್ಪತ್ತಿ ಬಗ್ಗೆ ವಿಶ್ಲೇಷಿಸುತ್ತಾ ಡಾ. ಅಮೃತ ಸೋಮೇಶ್ವರ ಅವರ ಅಭಿಪ್ರಾಯವನ್ನೇ ಹೇಳುತ್ತಾರೆ. "ಕೆಡ್ಡ ಎಂಬ ಶಬ್ದದ ವ್ಯುತ್ಪತ್ತಿ ಖೇಟದಿಂದ ಬಂದಿದೆ. ಖೇಟ, ಖೆಡ್ಡ, ಕೆಡ್ಡ ಎಂದರೆ ಬೇಟೆ ಎಂದರ್ಥ. ಕೆಡ್ಡಸದ ದಿನಗಳಲ್ಲಿ

ಕಾಡು ಮೃಗಗಳಿಗೆ ಕಾಲುಬಾಯಿ ರೋಗ (ಕಾಲುಕುಂಟು ರೋಗ) ಬರುತ್ತದೆ ಎಂಬ ಪ್ರತೀತಿ ಇದೆ. ಆಗ ಬೇಟೆಯಾಡಲು ಸುಲಭ. ಹೆಂಗಸರೂ ಬೇಟೆಯಾಡಬಹುದು. ಬೇಟೆಯಾಡುವ ಹಬ್ಬ ಎಂದು ಪರಿಗಣಿಸಿರುವುದರಿಂದಲೇ ಈ ಹಬ್ಬಕ್ಕೆ ಕೆಡ್ಡಸ ಎಂಬ ಹೆಸರು ಬರಲು ಕಾರಣವಾಯಿತು"[೧೦] ಎಂದು ಹೇಳುತ್ತಾರೆ. ಆದರೆ ಈ ವಾದಗಳನ್ನು ಒಪ್ಪಿಕೊಳ್ಳಲು ಸಾಧ್ಯವಿಲ್ಲ. ಈ ಆಚರಣೆಯು ಮುಖ್ಯವಾಗಿ ಭೂಮಿ ಬಹಿಷ್ಠೆಯಾಗುತ್ತಾಳೆ ಎಂಬ ನಂಬಿಕೆಯ ಹಿನ್ನೆಲೆಯಲ್ಲಿ ಭೂಮಿಗೆ ಎಣ್ಣೆಹೊಯ್ಯುವ ಆಚರಣೆಯಾಗಿರುವುದರಿಂದ ಆ ಅರ್ಥ ಕೊಡುವ ಪದವಾಗಿ ಕೆಡ್ಡಸ ಪದ ಹುಟ್ಟಿಕೊಂಡಿರಬೇಕು. ಬೇಟೆಯಾಡುವುದು ಈ ಆಚರಣೆಯ ಎರಡನೆಯ ಭಾಗವಾಗಿರುವುದರಿಂದ ಈ ಪದ ಬೇಟೆಗೆ ಸಂಬಂಧಿಸಿದ್ದು ಎಂದು ಹೇಳುವುದು ಅಷ್ಟೊಂದು ಸಮರ್ಥನೀಯವಲ್ಲ ಎಂದೆನಿಸುತ್ತದೆ.

'ಕೆಡ್ಡಸ' ಆಚರಣೆ ಯಾವಾಗ ಯಾಕೆ ಮತ್ತು ಹೇಗೆ ಅಸ್ತಿತ್ವಕ್ಕೆ ಬಂತು ಎನ್ನುವುದು ಕುತೂಹಲ ಹುಟ್ಟಿಸುವ ವಿಷಯ. ತುಳುನಾಡಿನ ಮೂಲನಿವಾಸಿಗಳಿಂದಲೇ ಈ ಆಚರಣೆ ಆರಂಭವಾಗಿರಬೇಕು. ಪ್ರಕೃತಿಯಲ್ಲಿನ ಆವರ್ತನವನ್ನು ಗಮನಿಸಿದ ಮೂಲನಿವಾಸಿಗಳು ಈ ಆಚರಣೆಯನ್ನು ನಡೆಸುತ್ತಾ ಬಂದಿರಬೇಕು. ಈ ಬಗ್ಗೆ ವಿದ್ವಾಂಸರು ಹೇಳುವ ಮಾತುಗಳು ಹೀಗಿವೆ– "ತುಳು ನಾಡಿನ ಜನರು ಮೊದಲಿನಿಂದಲೂ ಸರ್ವ ಸಜೀವವಾದವನ್ನು ಪ್ರತಿಪಾದನೆ ಮಾಡುತ್ತ ಬಂದವರು. ಅವರ ಪ್ರಕಾರ ಮರ, ಗಿಡ, ಪರ್ವತ, ಕಲ್ಲು ಎಲ್ಲದಕ್ಕೂ ಜೀವ ಉಂಟು. ಹಾಗೆ ಭೂಮಿ ಎಂದರೆ ಹೆಣ್ಣು: ಆಕೆ ಎಲ್ಲರಿಗೂ ತಾಯಿ. ಅವಳೂ ಮದುಮಗಳಾಗುತ್ತಾಳೆ, ಹೆರುತ್ತಾಳೆ. ಅವಳಿಗೂ ಮದುವೆ ಬಯಕೆ ಎಲ್ಲಾ ಇದೆ. ಹೀಗೆ ಆಲೋಚನೆ ಮಾಡುತ್ತಿದ್ದವರು ಪ್ರಾಚೀನ ತುಳುನಾಡಿನವರು. ಮಾಯಿ–ಸುಗ್ಗಿಯ ಕಾಲಕ್ಕೆ ಈ ಭೂಮಿಯಲ್ಲಿರುವ ಸರ್ವಸಸ್ಯಗಳೂ ಕೂಡ ಚಿಗುರುವುದಕ್ಕೆ ಶುರುವಾಗುತ್ತವೆ. ವೈದಿಕ ಸಂಸ್ಕೃತಿಯವರೂ ಕೂಡ ಇದನ್ನು ವಸಂತ ಮಾಸ ಎಂದು ಹೇಳಿದ್ದಾರೆ. ಭೂಮಿಯ ಮೇಲಿದ್ದ ಗಿಡ, ಮರ, ಬಳ್ಳಿಗಳು ಚಿಗುರಬೇಕಾದರೆ ಸೃಷ್ಟಿ ಕಾರ್ಯ ನಡೆಯಬೇಕಾದರೆ ಭೂಮಿ ತಾಯಿ ಗರ್ಭಧರಿಸಲೇಬೇಕು. ಅದಕ್ಕೆ ಮೊದಲು ಅವಳು ರಜಸ್ವಲೆಯಾಗಿ ಮಿಂದು ಬರಲೇಬೇಕು. ಹೀಗೆ ಆಲೋಚನೆ ಮಾಡಿದ ಹಿಂದಿನ ಜನರು ಅವಳು ಪೊನ್ನಿ ೨೭ಕ್ಕೆ ರಜಸ್ವಲೆಯಾಗುವುದು; ಸಂಕ್ರಾಂತಿ ದಿನ (೩೦ ರಂದು) ಅವಳು ಮಿಂದು ಬರುವುದು ಎಂದು ಲೆಕ್ಕ ಹಾಕಿದರು. ಭೂಮಿ ತಾಯಿ ಗರ್ಭಿಣಿಯಾಗುತ್ತಾಳೆ ಎಂದರೆ ಎಲ್ಲರಿಗೂ ಭಾರಿ ಸಂತೋಷ. ಹಾಗಾಗಿ ಅದು ಹಬ್ಬವಾಯಿತು"[೧೧] ಎನ್ನುತ್ತಾರೆ. ಈ ನಿರ್ವಚನ ಅತ್ಯಂತ ಅರ್ಥಪೂರ್ಣವಾಗಿ ಕಂಡು ಬರುತ್ತದೆ.

ಅದೂ 'ಪೊನ್ನಿ' ತಿಂಗಳ ಅಂತ್ಯದ ವೇಳೆ ಸಂಕ್ರಾಂತಿಯ ಕಾಲ ಪರಿಕಲ್ಪನೆ ತುಳು ಜನಪದರ ಪ್ರಕೃತಿ ಆರಾಧನೆಯ ಮಹತ್ವವನ್ನು ಹೇಳುತ್ತದೆ. ಹೆಣ್ಣು ಹೆಂಗಸರು ತಿಂಗಳಿಗೆ ಒಂದಾವರ್ತಿ ಮುಟ್ಟಾಗುವುದು ಜೈವಿಕ ಪ್ರಕ್ರಿಯೆಯಾದರೆ, ಭೂಮಿಹೆಣ್ಣು ವರ್ಷಕ್ಕೊಂದಾವರ್ತಿ ಮುಟ್ಟಾಗುತ್ತಾಳೆ ಎಂಬ ಕಲ್ಪನೆ ಈ ಆಚರಣೆಯ ಮೂಲಕ ವ್ಯಕ್ತವಾಗುತ್ತದೆ. ಇಂತಹ ಆಚರಣೆಯ ಸಂದರ್ಭದಲ್ಲಿ ಭೂಮಿಯನ್ನು ಗಾಯಗೊಳಿಸುವಂತಹ ಕೆಲಸ ಕಾರ್ಯಗಳನ್ನು ಮಾಡಬಾರದೆಂಬ ಪ್ರತೀತಿ. ಆ ದಿನಗಳಲ್ಲಿ ಭೂಮಿಗೆ ಹಿಂಸೆಯಾದರೆ ಆಕೆ ಬಂಜೆಯಾಗುತ್ತಾಳೆಂಬುದು ಜನಪದರ ನಂಬಿಕೆ. ಹಿಂದೊಮ್ಮೆ ಒಬ್ಬಾತ ನೆಲವನ್ನು ಉತ್ತಾಗ ನೆತ್ತರು ಒತ್ತರಿಸಿ ಬಂದಿತ್ತೆಂದು ಜನಪದರು ಹೇಳುತ್ತಾರೆ. ಇದರರ್ಥ ರಜೋದರ್ಶನ ವೇಳೆ ಪುರುಷ ಸಂಪರ್ಕ ಸಲ್ಲದೆಂಬ ಧಾರ್ಮಿಕ ಭೇದದ ನೆರಳನ್ನು ಇಲ್ಲಿ ಕಾಣಬಹುದೆಂದು ವಿದ್ವಾಂಸರು ಪಡುವ ಅಭಿಪ್ರಾಯ ಸಮಂಜಸವಾಗಿದೆ. ಅಂದರೆ ಭೋಗಿಸುವ ಪ್ರವೃತ್ತಿಯನ್ನು ಕೊನೆಯ ಪಕ್ಷ ವರ್ಷದಲ್ಲಿ ಮೂರುದಿನವಾದರೂ ನಿಷೇಧಿಸುವ ಜನಪದರ ಕಲ್ಪನೆ ಗಮನಾರ್ಹವಾದುದು. 'ಎಡ್ಡೆ ಯೇಸ ಪಾಡುನಾಯಗ್ ಕೆಡ್ಡಸದ ಅಡ್ಡಿ ಬತ್ತ್‌ಂಡ್' (ಒಳ್ಳೆಯ ವೇಷ ಹಾಕುವವನಿಗೆ ಕೆಡ್ಡಸದ ಅಡ್ಡಿ ಬಂತು) ಎಂಬ ಗಾದೆಯೂ ಕೆಡ್ಡಸದ ದಿನಗಳಲ್ಲಿ ಭೂಮಿ ಅದುರುವ ಯಾವುದೇ ಕೆಲಸವನ್ನೂ ಮಾಡಬಾರದೆಂಬುದನ್ನು ಸೂಚಿಸುತ್ತದೆ.

ಭೂಮಿಗೆ ಎಣ್ಣೆ ಹೊಯ್ಯುವ ಕ್ರಿಯೆ ಅತ್ಯಂತ ಅರ್ಥಪೂರ್ಣವಾಗಿದೆ. ಬಹಿಷ್ಠೆಯಾದ ಮಹಿಳೆ ಮಿಂದು ಮಡಿಯಾಗಿ ಮನೆಯೊಳಗೆ ಬರಬೇಕಾದರೆ ಏನೆಲ್ಲ ವಸ್ತುಗಳನ್ನು ಉಪಯೋಗಿಸುತ್ತಾರೆಯೋ ಅವುಗಳೆಲ್ಲವನ್ನು 'ಕೆಡ್ಡಸ'ದ ಆಚರಣೆಯಲ್ಲಿ ಭೂದೇವಿಗೆ ಎಣ್ಣೆ ಹೊಯ್ಯುವ ಕ್ರಿಯಾ ವಿಧಿಯಲ್ಲಿ ಬಳಸುವುದು ಜನಪದರ ಆನ್ವಯಿಕ ಧರ್ಮವನ್ನು ತಿಳಿಸುತ್ತದೆ.

'ಕೆಡ್ಡಸ'ದ ಆಚರಣೆಯ ಕಾಲ ಸಂದರ್ಭವೇ ಅತ್ಯಂತ ವಿಶಿಷ್ಟವಾದುದು. ವಾತಾವರಣದಲ್ಲಿ ಸಾಕಷ್ಟು ಬದಲಾವಣೆಗಳು ಗೋಚರಿಸುತ್ತವೆ. ಮರಗಿಡ ಬಳ್ಳಿಗಳಲ್ಲಿ ಫಲ ಬಿಡುವುದಕ್ಕೆ ಅನುಕೂಲಕರವಾದ ಸುಖಶೀತವಾದ ಗಾಳಿ ಮೂಡುದಿಕ್ಕಿನಿಂದ ಬೀಸುತ್ತದೆ. ಇದನ್ನು 'ಕೆಡ್ಡಸದ ಗಾಳಿ' ಎಂದೇ ಕರೆಯುತ್ತಾರೆ. ಭೂಮಿಗೆ ವಿಶೇಷ ಕಂಪು ಬರುತ್ತದೆ. ಆದುದರಿಂದ ಪ್ರಕೃತಿ ಫಲೀಕರಣಕ್ಕೆ ಸಿದ್ಧಗೊಳ್ಳುವ ಸಂಕ್ರಮಣದ ಕಾಲ ಘಟ್ಟದಲ್ಲಿ 'ಕೆಡ್ಡಸ' ಆಚರಣೆ ನಡೆಯುವುದು ವೈಜ್ಞಾನಿಕವಾದ ಸತ್ಯವನ್ನು ಹೊರಗೆಡಹುತ್ತದೆ. ಕೃಷಿ ಸಮೃದ್ಧಿಯ ಫಲ ನೀಡಲು ಭೂಮಾತೆ ಮತ್ತೆ ಸಿದ್ಧಳಾಗುವುದನ್ನು ಸಂಕೇತಿಸುವ ಪರ್ವವಾಗಿ 'ಕೆಡ್ಡಸ'

ಆಚರಿಸಲ್ಪಡುತ್ತದೆ. ಹಾಗಾಗಿ ಈ ಆಚರಣೆ ತುಳು ಜನಪದರು ಪ್ರಕೃತಿ ಭೂಮಿಗಳ ಮೇಲೆ ಇಟ್ಟಿರುವ ಭಯ, ಭಕ್ತಿ, ಶ್ರದ್ಧೆಯ ಸಂಕೇತವಾಗಿರುವುದನ್ನು ಪ್ರಸ್ತುತಪಡಿಸುತ್ತದೆ.

'ಕೆಡ್ಡಸ'ದ ಬೇಟೆಗೆ ಸಂಬಂಧಿಸಿದಂತೆ ವಿಶ್ಲೇಷಿಸುವಾಗ, 'ಕೆಡ್ಡಸ'ದ ದಿನಗಳಲ್ಲಿ ಕಾಡು ಪ್ರಾಣಿಗಳು ರೋಗ ಪೀಡಿತವಾಗಿರುತ್ತವೆ; ಹಾಗಾಗಿ ಅವುಗಳನ್ನು ಸುಲಭವಾಗಿ ಬೇಟೆಯಾಡಬಹುದು ಎಂಬ ನಂಬಿಕೆ ತುಳುವರದು. ಆದರೆ ಬಹಳ ಮುಖ್ಯವಾಗಿ 'ಕೆಡ್ಡಸ'ದ ಮೂರು ನಾಲ್ಕು ದಿನಗಳ ಕಾಲ ಗಂಡಸರಿಗೆ ಯಾವುದೇ ಕಾಯಕವಿಲ್ಲದಿರುವುದರಿಂದ ಅವರು ವಿನೋದಕ್ಕಾಗಿ ಮತ್ತು ಆಹಾರಕ್ಕಾಗಿ ಸಾಮೂಹಿಕವಾಗಿ ಬೇಟೆ ಮಾಡುವ ಕ್ರಮವನ್ನು ರೂಢಿಸಿಕೊಂಡಿರಬೇಕು. ಎರಡನೆಯದಾಗಿ ಕೃಷಿಗೆ ತೊಂದರೆ ಕೊಡುವ ಕಾಡು ಹಂದಿ ಮೊದಲಾದ ಅಪಾಯಕಾರಿ ಪ್ರಾಣಿಗಳನ್ನು ಒಬ್ಬಿಬ್ಬರು ಬೇಟೆಯಾಡುವುದು ಸುಲಭದ ಕೆಲಸವಲ್ಲ; ಅದೂ ದಟ್ಟ ಕಾಡುಗಳಲ್ಲಿ ಪ್ರಾಣಿ ಬೇಟೆ ಕಷ್ಟ ಸಾಧ್ಯ. ಹಾಗಾಗಿ ಊರಜನ ಎಲ್ಲ ಒಗ್ಗಟ್ಟಾಗಿ ವಿವಿಧ ಆಯುಧಗಳ ಸಹಿತ ಬೇಟೆಯಾಡಿ ತಮ್ಮ ಕೃಷಿಗೆ ತೊಂದರೆಯಾಗುವುದನ್ನು ತಪ್ಪಿಸುವ ಕೆಲಸ ಇದಾಗಿತ್ತೆಂಬುದನ್ನು ಅರ್ಥೈಸಬಹುದಾಗಿದೆ. ಇದಕ್ಕೆ ಪೂರಕವಾಗಿ ಓರ್ವ ವಿದ್ವಾಂಸರು– ಬೇಟೆ ಎನ್ನುವುದು ವೈಯಕ್ತಿಕ ಆಸಕ್ತಿಯ ತೀರಿಕೆಯ ಕ್ರಿಯಾಚರಣೆ ಅಲ್ಲ. ಅದು ಅರಸು ಪ್ರಜೆಗಳ ನೆರವಿನೊಂದಿಗೆ ನಡೆಸುವ ವಿಧ್ಯುಕ್ತ ಆಚರಣೆ ಎಂದು ವಿಶ್ಲೇಷಿಸುತ್ತಾ, "ಈ ಭೂಪ್ರದೇಶದ ಒಡೆಯ ಅರಸು ವಿಶೇಷ ಸಂದರ್ಭಗಳಲ್ಲಿ ಮಾತ್ರ ಅರಣ್ಯವನ್ನು ಪ್ರವೇಶಿಸುತ್ತಾನೆ. ಇದನ್ನು ವಿಧ್ಯುಕ್ತ ವಾರ್ಷಿಕ ಬೇಟೆ (ತುಳು: ಕೆಡ್ಡಸದ ಬೋಂಟೆ)ಎನ್ನಲಾಗುತ್ತದೆ. ಆ ದಿನ ಆತನು ಗ್ರಾಮಸ್ಥರ ಕೋರಿಕೆಯ ಮೇರೆಗೆ ತನ್ನ ಕೃಷಿಭೂಮಿಯ ಮೇಲೆ ವನ್ಯಮೃಗಗಳಿಂದ ಒದಗಬಹುದಾದ ಆಕ್ರಮಣಗಳನ್ನು ತಡೆದು ನಿಯಂತ್ರಿಸುವ ಸಲುವಾಗಿ ಈ ಬೇಟೆಯನ್ನು ನಡೆಸುತ್ತಾನೆ. ಬೇಟೆಯ ಕಾರ್ಯ ಮತ್ತು ಅರಸನ ಮಿತಿಮೀರಿ ಸೊಕ್ಕಿ ಬೆಳೆದಿರುವ ಉತ್ಪನ್ನಶೀಲ ಪ್ರಕೃತಿಯನ್ನು ನಿಯಂತ್ರಿಸುವುದು ಹಾಗೂ ಪ್ರಕೃತಿಯ ಅತಿಶಯ ಸಮೃದ್ಧಿಯನ್ನು ಆಹಾರದ ಮೂಲವಾಗಿ ಬಳಸಿಕೊಳ್ಳುವುದು ಇಂತಹ ಬೇಟೆಯ ಉದ್ದೇಶವಾಗಿದೆ. ಹೀಗೆ ಬೇಟೆಯ ಸಂದರ್ಭದಲ್ಲಿ ಅರಸನು ಸಂರಕ್ಷಕನಾಗಿ ವ್ಯವಸ್ಥೆಯ ಮತ್ತು ಸಮೃದ್ಧಿಯ ನಾಯಕನಾಗಿ ಕಂಡುಬರುತ್ತಾನೆ" ಎಂದು ವಿದೇಶಿ ವಿದ್ವಾಂಸ ಪೀಟರ್ ಜೆ. ಕ್ಲಾಸ್ ಅವರ ಅಭಿಪ್ರಾಯವನ್ನು ಉದ್ಧರಿಸುತ್ತಾರೆ.[೧೨]

'ಕೆಡ್ಡಸ'ದ ದಿನಗಳಲ್ಲಿ ಮಾಂಸಾಹಾರಿಗಳು ಮಾಂಸಾಹಾರ ಸೇವಿಸಲೇಬೇಕು ಇಲ್ಲವಾದರೆ ಎಲುಬು ಸುರಿಯುತ್ತದೆ. (ನುಗ್ಗು ನುರಿಯಾಗುತ್ತದೆ) ಎಂಬ ನಂಬಿಕೆ

ತುಳುವರಲ್ಲಿದೆ. ಆದ್ದರಿಂದ ಈ ಹಿನ್ನಲೆಯಲ್ಲಿ 'ಕೆಡ್ಡಸ'ದಂದು ಬೇಟೆಯಾಡುವುದು ರೂಢಿಯಾಗಿ ಆಚರಣೆಯ ಭಾಗವಾಗಿ ಬಂದಿರುವ ಇನ್ನೊಂದು ಸಾಧ್ಯತೆಯನ್ನು ಊಹಿಸಬಹುದು. ಅದೂ ಅಲ್ಲದೆ ಬೇಟೆಯಾಡುವುದು ಮನುಷ್ಯನ ಆದಿಮ ಜೀವನ ಸಂಸ್ಕೃತಿಯಾಗಿತ್ತು. ಅದನ್ನು ಸಾಂಕೇತಿಕವಾಗಿ ಮುಂದುವರಿಸಿಕೊಂಡು ಬಂದಿರುವುದು ಇಲ್ಲಿ ಉಲ್ಲೇಖನೀಯ ಅಂಶವಾಗುತ್ತದೆ.

ಮಾಂಸಾಹಾರ ಹೇಗೆ ಕಡ್ಡಾಯವಾಗಿ ಆಗಬೇಕೋ, ಹಾಗೇ ನುಗ್ಗೆ, ಬದನೆ ಪದಾರ್ಥವೂ ಅತ್ಯಗತ್ಯವಾಗಿ ಮಾಡಲೇಬೇಕು. ಮಾಂಸಾಹಾರ ಸೇವಿಸದವರು ನುಗ್ಗೆ ಬದನೆ ಪದಾರ್ಥದಲ್ಲಿ ಊಟ ಮಾಡಲೇಬೇಕು. ಬಹುಷ: 'ಕೆಡ್ಡಸ'ದ ದಿನಗಳ ಪ್ರಾಕೃತಿಕ ಹವಾಮಾನ ಸಂದರ್ಭದಲ್ಲಿ ಮಾಂಸಾಹಾರ ಮತ್ತು ನುಗ್ಗೆ- ಬದನೆಗಳಲ್ಲಿ ಮನುಷ್ಯನ ಎಲುಬುಗಳನ್ನು ಸಶಕ್ತಗೊಳಿಸುವ ಪೋಷಕಾಂಶಗಳು ಸೇರಿಕೊಳ್ಳುತ್ತಿರಬೇಕು.

'ಕೆಡ್ಡಸ' ಆಚರಣೆಗೆ ಸಂಬಂಧಿಸಿದಂತೆ ತುಳುನಾಡಿನ ಕೆಲವೆಡೆ ದೈವಸ್ಥಾನಗಳಲ್ಲಿ 'ಕೆಡ್ಡಸದ ಆಯನ' ನಡೆಯುತ್ತದೆ. ದೈವಗಳ ನುಡಿಗಟ್ಟುಗಳಲ್ಲಿ ಬೇಟೆಗೆ ಹೊರಡುವ ಪ್ರಸ್ತಾಪ ಬರುತ್ತದೆ. ಇದು 'ಕೆಡ್ಡಸ' ಆಚರಣೆಗೆ ಸಂಬಂಧಿಸಿದಂತೆ ಉಲ್ಲೇಖನೀಯ. (ಉದಾ: ಕೊಡ್ಲ ಮೊಗರು ಮಲರಾಯ ದೈವಸ್ಥಾನ, ಬೋಳಂಗಳ ಉಳ್ಳಾಕುಳು ದೈವಸ್ಥಾನ) 'ಕೆಡ್ಡಸ'ದ ದಿನಗಳಲ್ಲಿ ಹೆಂಗಸರು ಮುಟ್ಟಾದರೆ ತೆಂಗಿನ ಹಸಿ ಸೋಗೆಯಲ್ಲಿ ಮಲಗಬೇಕು ಮತ್ತು ಅನ್ನ ಊಟ ಮಾಡುವ ಬದಲು ಮೂರೂ ಹೊತ್ತು 'ಅಡ್ಯೆ'(ಅಕ್ಕಿತಿಂಡಿ) ಮಾತ್ರ ಸೇವಿಸಬೇಕು; ಅದೂ ನಿಂತುಕೊಂಡೇ ಆಹಾರ ಸೇವಿಸಬೇಕು ಎಂಬ ವಿಧಿ ನಿಷೇಧಗಳು ಕಂಡುಬರುತ್ತವೆ. ಬಹುಷಃ ತಾನು ಮುಟ್ಟಾಗುವ ವೇಳೆ ಇತರ ಹೆಣ್ಣು ಮಕ್ಕಳು ಮುಟ್ಟಾಗುವುದನ್ನು ಭೂಮಿತಾಯಿ ಸಹಿಸಲಾರಳೆಂಬ ಕಲ್ಪನೆ ಇದಾಗಿರಬಹುದು. ಅಥವಾ ಮುಟ್ಟಾದ ಭೂಮಿತಾಯಿಯನ್ನು ಗೌರವಿಸುವ ಭಾವನೆಯನ್ನೂ ಇದರಲ್ಲಿ ಗಮನಿಸಬಹುದು.

### ೧೨.೪: 'ಕೆಡ್ಡಸ'ಕ್ಕೆ ಸಮಾನವಾದ ಆಚರಣೆಗಳು

ತುಳುವರ 'ಕೆಡ್ಡಸ ಆಚರಣೆಗೆ' ಪೂರಕವಾದ ಆಶಯವಿರುವ ಆಚರಣೆಗಳು ದೇಶದಾದ್ಯಂತ ಕಂಡು ಬರುತ್ತವೆ. ಈ ಹಿನ್ನಲೆಯಲ್ಲಿ 'ಭೂಮಿ ಹುಣ್ಣಿಮೆ'ಯನ್ನು ಅತ್ಯಂತ ಶ್ರದ್ಧಾ ಭಕ್ತಿಯಿಂದ ಆಚರಿಸುತ್ತಾರೆ. ಒರಿಸ್ಸಾದಲ್ಲಿ 'ರಜ ಉತ್ಸವ' ಎಂಬ ಆಚರಣೆ ಕಂಡುಬರುತ್ತದೆ. ಕಾಶ್ಮೀರದಲ್ಲಿ 'ರಾಜ್ಞೀ ಸ್ನಾಪ್ಯ' (ರಾಣಿಯ ಸ್ನಾನ) ಎಂಬ ವಿಧಿ ನಡೆಯುತ್ತದೆ. ಪ್ರಾದೇಶಿಕ

ವ್ಯತ್ಯಾಸ ಮತ್ತು ಕಾಲ ವ್ಯತ್ಯಾಸಗಳಿಂದಾಗಿ ಬೇರೆ ಬೇರೆ ಸಂದರ್ಭಗಳಲ್ಲಿ ಬೇರೆ ಬೇರೆ ವಿಧಾನಗಳಲ್ಲಿ ಈ ಆಚರಣೆಗಳು ಕಂಡುಬರುತ್ತವೆಯಾದರೂ ಇವುಗಳ ಮೂಲ ಆಶಯ ಒಂದೇ ಆಗಿರುವುದು ಗಮನಾರ್ಹ. ಅಸ್ಸಾಮ್, ಬಂಗಾಲ, ಕೇರಳ ಮೊದಲಾದ ರಾಜ್ಯಗಳಲ್ಲಿಯೂ ಭೂಮಿ ರಜಸ್ವಲೆಯಾಗುವ ಹಬ್ಬ ನಡೆಯುವುದು ತಿಳಿಯುತ್ತದೆ. ಹೀಗೆ ತುಳುನಾಡಿನ 'ಕೆಡ್ಡಸ'ಕ್ಕೆ ಸಂವಾದಿಯಾದ ಆಚರಣೆಗಳು ಬೇರೆ ಬೇರೆ ಕಡೆಗಳಲ್ಲಿ ಬೇರೆ ಬೇರೆ ಸಂದರ್ಭಗಳಲ್ಲಿ ಪ್ರಚಲಿತದಲ್ಲಿವೆ. ಪ್ರಕೃತಿಯ ಚೇತನೋದ್ದೀಪನದ, ಫಲೀಕರಣದ ಆಶಯ ಈ ಆಚರಣೆಗಳಲ್ಲಿದೆ. ಈ ನಡುವೆ ಕನ್ನಡ ಜಾನಪದ ವಿಶ್ವಕೋಶದಲ್ಲಿ 'ಕೆಡ್ಡಸ' ಎಂಬುದಕ್ಕೆ ವಿವರಣೆ ನೀಡುತ್ತಾ, ಒಂದೆಡೆ "ಈ ಹಬ್ಬವನ್ನು ಕೆಲವೆಡೆ ಹೀಗೆ ಆಚರಿಸುವರು. ಮೊದಲನೆಯ ದಿನ ಮನೆಗೆ ಬಂದ ಭತ್ತವು (ಲಕ್ಷ್ಮಿ) ಬೇರೆ ಮನೆಗೆ ಹೋಗಕೂಡದು ಎಂಬ ನಂಬಿಕೆಯಿಂದ ಭತ್ತದ ರಾಶಿಯ ಮೇಲೆ ಚೂರಿಮರದ ಮುಳ್ಳು' ಕತ್ತಿ ಮತ್ತು ಕಲ್ಲನ್ನು ಹೇರುವರು. ಈ ಮೂರು ದಿನಗಳಲ್ಲಿ ರಾಶಿಯಿಂದ ಭತ್ತವನ್ನು ತೆಗೆದುಕೊಳ್ಳುವಂತಿಲ್ಲ"[೧೩] ಎಂದು ಹೇಳಲಾಗಿದೆ ಆದರೆ ಈ ರೀತಿಯ ಕ್ರಮ 'ಕಾವೇರಿ ಸಂಕ್ರಾಂತಿ' ಆಚರಣೆಯಲ್ಲಿ ಕಂಡುಬರುತ್ತದೆಯೇ ಹೊರತು 'ಕೆಡ್ಡಸ' ಆಚರಣೆಯಲ್ಲಿ ಈ ವಿಧಿಯಿರುವ ಬಗ್ಗೆ ಎಲ್ಲೂ ಮಾಹಿತಿ ಸಿಗುವುದಿಲ್ಲ. ಆದಾಗ್ಯೂ 'ಕೆಡ್ಡಸ' ಆಚರಣೆಯ ಮೂರು ದಿನಗಳಲ್ಲಿ ಯಾವುದೇ ರೀತಿಯ ಕೃಷಿ ಕೆಲಸ ಮಾಡುವುದಕ್ಕೆ ನಿಷೇಧವಿರುವುದರಿಂದ ಕೆಲವೆಡೆ ಈ ಮೇಲಿನ ಕ್ರಮವನ್ನು ಅನುಸರಿಸುತ್ತಿರಲೂಬಹುದು.

### ೧೨.೫: 'ಕೆಡ್ಡಸ'-ಆಚರಣೆಯ ಒಟ್ಟೂ ಸ್ವರೂಪ

ಈ ಎಲ್ಲ ವಿಶ್ಲೇಷಣೆಗಳ ಹಿನ್ನೆಲೆಯಲ್ಲಿ 'ಕೆಡ್ಡಸ' ಆಚರಣೆಯ ಒಟ್ಟೂ ಸ್ವರೂಪವನ್ನು ಹೀಗೆ ಹೇಳಬಹುದು.

೧. 'ಪೊನ್ನಿ' ತಿಂಗಳ ೨೭ರಿಂದ ೩೦ರವರೆಗೆ ನಾಲ್ಕು ದಿನ 'ಕೆಡ್ಡಸ'ವನ್ನು ಆಚರಿಸಲಾಗುತ್ತದೆ.

೨. ನಾಲ್ಕನೆಯ ದಿನ ಭೂಮಿಗೆ 'ಎಣ್ಣೆ ಹೊಯ್ಯುವ' ವಿಧಿ ನಡೆಯುತ್ತದೆ.

೩. ಮೂರನೆಯ ದಿನ 'ಸಾಮೂಹಿಕ ಬೇಟೆ' ನಡೆಯುತ್ತದೆ.

೪. ಭೂಮಿತಾಯಿ ರಜಸ್ವಲೆಯಾಗುತ್ತಾಳೆ ಎಂಬ ಜನಪದರ ನಂಬಿಕೆ ಈ ಆಚರಣೆಯ ಹಿಂದಿದೆ.

೫. ಈ ಆಚರಣೆಯ ದಿನ ಭೂಮಿಯನ್ನು ಗಾಯಗೊಳಿಸುವಂತಹ ಯಾವುದೇ ರೀತಿಯ ಚಟುವಟಿಕೆಗಳು ನಡೆಯುವುದಿಲ್ಲ.

೬. 'ಕುಡುಅರಿ' ಅಥವಾ 'ನನ್ನೆರಿ', ನುಗ್ಗೆ, ಬದನೆ, ಆಲದ ಮರದ ಎಲೆಯ 'ಅಡ್ಯೆ'(ಅಕ್ಕಿತಿಂಡಿ) ಹಾಗೂ ಮಾಂಸ ಪದಾರ್ಥ 'ಕೆಡ್ಡಸ' ಆಚರಣೆಯ ವಿಶೇಷ ಖಾದ್ಯಗಳಾಗಿವೆ.

೭. 'ಸಾಮೂಹಿಕ ಬೇಟೆ'ಯಲ್ಲದೆ ತೆಂಗಿನಕಾಯಿ ಕುಟ್ಟುವುದು, ಕೋಳಿಅಂಕಗಳು ಈ ಆಚರಣೆಯ ಸಂದರ್ಭದ ಇತರ ಕ್ರೀಡೆಗಳು.

೮. ಕುಟುಂಬದ ಸದಸ್ಯರೆಲ್ಲ ಆ ದಿನ ಮನೆಯಲ್ಲಿರುತ್ತಾರೆ.

೯. ಜನನ ಮರಣಾದಿ ಸೂತಕಗಳು ಬಂದಲ್ಲಿ ಈ ಆಚರಣೆಯನ್ನು ಮಾಡುವುದಿಲ್ಲ.

---

<u>**ಅಡಿಟಿಪ್ಪಣಿ**</u>

೧. **ತುಳು ನಿಘಂಟು:** ಸಂಪುಟ-೩: ಡಾ.ಯು.ಪಿ.ಉಪಾಧ್ಯಾಯ : ರಾಷ್ಟ್ರಕವಿ ಗೋವಿಂದ ಪೈ ಸಂಶೋಧನಾ ಕೇಂದ್ರ, ಉಡುಪಿ: ಪುಟ-೮೯೬

೨. **ಪರ್ವಕಾಲ:** ೨೦೦೭: ಕೆ.ಎಲ್.ಕುಂಡಂತಾಯ:ಸರಸ್ವತಿ ಪ್ರಕಾಶನ, ಅದಮಾರು, ಉಡುಪಿ: ಪುಟ-೫೩

೩. **ತುಳುವ ಜಾನಪದ** : ಕೆಲವು ನೋಟಗಳು: ೨೦೦೭: ಡಾ.ಅಮೃತ ಸೋಮೇಶ್ವರ: ಪ್ರಸಾರಾಂಗ, ಕನ್ನಡ ವಿ.ವಿ., ಹಂಪಿ: ಪುಟ-೨೩೪, ೨೩೫

೪. **ಅದೇ: ಪೂರ್ವೋಕ್ತ:** ಪುಟ-೨೩೫

೫. **ಅದೇ: ಪೂರ್ವೋಕ್ತ:** ಪುಟ -೨೩೫, ೨೩೬

೬. **ಕನ್ನಡ ಜಾನಪದ ವಿಶ್ವಕೋಶ:** ಸಂಪುಟ-೧: ೧೯೮೫: (ಸಂ.)ಚಂದ್ರಶೇಖರ ಕಂಬಾರ: ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು: ಪುಟ-೪೮೦

೭. **ತುಳುವ ಜಾನಪದ:** ಕೆಲವು ನೋಟಗಳು: ೨೦೦೭: ಡಾ.ಅಮೃತ ಸೋಮೇಶ್ವರ: ಪೂರ್ವೋಕ್ತ: ಪುಟ-೨೩೭

೮. **ಅದೇ: ಪೂರ್ವೋಕ್ತ:** ಪುಟ-೨೩೩, ೨೩೪

೯. **ಅದೇ: ಪೂರ್ವೋಕ್ತ:** ಪುಟ-೨೩೪

೧೦. **ಜಾನಪದ ಮಿನದನ:** ೧೯೯೭: ಡಾ.ಪಾಲ್ತಾಡಿ ರಾಮಕೃಷ್ಣ ಆಚಾರ್: ಸುಪ್ರಿಯಾ ಪ್ರಕಾಶನ, ಪುತ್ತೂರು: ಪುಟ-೬೯

೧೧. **ಕನ್ನಡಾನುವಾದ: ತುಳು ಸಂಸ್ಕೃತಿದ ಪೊಲಬು:** ೨೦೦೮: ಡಾ.ಪಾಲ್ತಾಡಿ ರಾಮಕೃಷ್ಣ ಆಚಾರ್: ಕರ್ನಾಟಕ ತುಳು ಸಾಹಿತ್ಯ ಅಕಾಡಮಿ: ಪುಟ-೫೦

೧೨. **ಕೊಡಿಪು; ವಿಶ್ವ ತುಳು ಸಮ್ಮೇಳನೊ ನೆಂಪು ಸಂಚಿ: ೨೦೦೯:** (ಸಂ.)ಡಾ.ವಾಮನ ನಂದಾವರ: ವ್ಯವಸ್ಥಾಪನಾ ಸಮಿತಿ, ವಿಶ್ವ ತುಳು ಸಮ್ಮೇಳನ, ಉಜಿರೆ, ದ.ಕ.: ಲೇಖನ : ಪಾಡ್ದನಗಳಲ್ಲಿ ತುಳುವ ಸಂಸ್ಕೃತಿಯ ಪ್ರತಿನಿಧೀಕರಣ : ಪ್ರೊ.ಎ.ವಿ.ನಾವಡ : ಪುಟ-೧೬

೧೩. **ಕನ್ನಡ ಜಾನಪದ ವಿಶ್ವಕೋಶ:** ಸಂಪುಟ-೧: ೧೯೮೫: (ಸಂ.)ಚಂದ್ರಶೇಖರ ಕಂಬಾರ: ಪೂರ್ವೋಕ್ತ: ಪುಟ-೪೮೦

■■■

# ಅಧ್ಯಾಯ–೧೩

## ತುಳುನಾಡಿನ ವಾರ್ಷಿಕ ಆವರ್ತನದ ಆಚರಣೆಗಳ ಇಂದಿನ ಸ್ಥಿತಿಗತಿ

೧೩.೧: ಆಚರಣೆಗಳ ಇಂದಿನ ಸ್ಥಿತಿಗತಿ

೧೩.೧.೧: ಕಾರಣಗಳು

೧೩.೧.೨: ಪರಿಣಾಮಗಳು

# ಅಧ್ಯಾಯ–೧೩

# ತುಳುನಾಡಿನ ವಾರ್ಷಿಕ ಆವರ್ತನದ ಆಚರಣೆಗಳ ಇಂದಿನ ಸ್ಥಿತಿಗತಿ

## ೧೩.೧: ಆಚರಣೆಗಳ ಇಂದಿನ ಸ್ಥಿತಿಗತಿ

ಪ್ರಪಂಚದಲ್ಲಿ ಪ್ರತಿಯೊಂದಕ್ಕೂ ಚಲನಶೀಲ ಮತ್ತು ಬದಲಾವಣೆಯ ಗುಣ ಸ್ವಭಾವಗಳಿರುತ್ತವೆ. ಮಾನವ ಸಂಸ್ಕೃತಿ ನಾಗರೀಕತೆಗಳೂ ಇದಕ್ಕೆ ಹೊರತಾದುದಲ್ಲ. ಮನುಷ್ಯನ ನಂಬಿಕೆ, ಆಚರಣೆ, ಆರಾಧನೆ, ಕಲೆ, ಅಡುಗೆ, ಉಡುಗೆ, ತೊಡುಗೆ, ಮನೆ–ಮಠ, ಜೀವನ ಸೌಲಭ್ಯಗಳು ಇತ್ಯಾದಿಗಳಲ್ಲಿ ಬದಲಾವಣೆಗಳು ನಿರಂತರ ನಡೆಯುತ್ತಿರುವುದನ್ನು ನಾವು ಅನುಭವ ಮತ್ತು ಚರಿತ್ರೆಯ ಮೂಲಕ ತಿಳಿಯಬಹುದು. ವಿಕಾಸವಾದದ ನೆಲೆಯಲ್ಲಿ ಜಗತ್ತಿನಲ್ಲಿ ಇವೆಲ್ಲವೂ ಕಾಲ–ದೇಶದ ಔಚಿತ್ಯಗಳಿಗನುಗುಣವಾಗಿ ಪರಿವರ್ತನೆಯನ್ನು ಪಡೆದುಕೊಳ್ಳುತ್ತವೆ. ಮಾನವನಂತೂ ಬುದ್ಧಿವಂತ ಜೀವಿ. ಸದಾ ಹೊಸ ಹೊಸ ಶೋಧನೆಗಳಿಗೆ ತನ್ನನ್ನು ತೊಡಗಿಸಿಕೊಂಡು ಇಂದು ವಿಜ್ಞಾನದ ಹಾದಿಯಲ್ಲಿ ಮುನ್ನಡೆದು ಪ್ರಗತಿಯ ತುತ್ತತುದಿಯಲ್ಲಿದ್ದಾನೆ. ಈ ಕಾರಣಕ್ಕಾಗಿ ವಿಶಾಲವಾದ ಮಾನವ ಜಗತ್ತು ಇಂದು ಅತ್ಯಂತ ಸೂಕ್ಷ್ಮವಾಗಿದೆ. ಇದರರ್ಥ ಜಗತ್ತಿನ ಸಾಂಸ್ಕೃತಿಕ ವೈವಿಧ್ಯಗಳು ಮಸುಕಾಗುತ್ತಿವೆ. ಏಕಸಂಸ್ಕೃತಿಯ ರೂಪೀಕರಣವಾಗುತ್ತಿದೆ. ಜಗತ್ತಿನ ನೂರಾರು–ಸಾವಿರಾರು ವೈವಿಧ್ಯಮಯ ಸಾಂಸ್ಕೃತಿಕ ಘಟಕಗಳ ನಡುವೆ ಪರಸ್ಪರ ಕೊಡುಕೊಳ್ಳುವಿಕೆಗಳು ನಡೆದು ಮೂಲ ಸಂಸ್ಕೃತಿಗಳು ಅದರಲ್ಲಿ ಅಂತರ್ಗತವಾಗುತ್ತಿವೆ. ಈ ಎಲ್ಲಾ ವಿಚಾರಗಳನ್ನು ತುಳುನಾಡಿಗೂ ಅನ್ವಯಿಸಬಹುದು. ತುಳುನಾಡಿನಲ್ಲಿ ಇಂದು ಸಾಂಸ್ಕೃತಿಕ ಸಂಕರವಾಗಿರುವುದು ಸ್ಪಷ್ಟವಾಗುತ್ತದೆ. ಜಗತ್ತಿನ ಇತರ ಭಾಗಗಳಂತೆ ತುಳುನಾಡೂ ಇಂದು ಜಗತ್ತಿನ ಕಡೆಗೆ ತನ್ನನ್ನು ಮುಕ್ತವಾಗಿ ತೆರೆದುಕೊಂಡಿದೆ. ಈ ಪ್ರಕ್ರಿಯೆ ಎಷ್ಟರಮಟ್ಟಿಗೆ ನಡೆದಿದೆಯೆಂದರೆ ಬಹುಶಃ ತುಳುನಾಡಿನ ಸಾಮಾಜಿಕ, ರಾಜಕೀಯ, ಧಾರ್ಮಿಕ, ಸಾಂಸ್ಕೃತಿಕ ಇತಿಹಾಸವನ್ನು ತಿಳಿಯಲು ಇಂದು ಇತಿಹಾಸ ಗ್ರಂಥಗಳನ್ನೋ, ಶಾಸನಗಳನ್ನೋ, ಸಾಹಿತ್ಯಕೃತಿಗಳನ್ನೋ ಇಲ್ಲವೆ ವಸ್ತುಸಂಗ್ರಹಾಲಯಗಳಲ್ಲಿರುವ ಪ್ರಾಚೀನ ಪಳೆಯುಳಿಕೆಗಳನ್ನೋ ಅವಲಂಬಿಸಬೇಕಾದ ಅನಿವಾರ್ಯತೆ ಹುಟ್ಟಿಕೊಳ್ಳುತ್ತಿದೆ.

ಈವರೆಗಿನ ಅಧ್ಯಯನಗಳ ಪ್ರಕಾರ ಸಮಾಜದಲ್ಲಿಂದು ಕೆಳವರ್ಗದವರೆಂದು ಗುರುತಿಸಲ್ಪಡುವ ದ್ರಾವಿಡ ಮೂಲದ ಮುಗೇರ, ಮನ್ಸ, ಮಲೆಕುಡಿಯ, ಕೊರಗ, ಪಂಬದ, ನಲ್ಕೆ, ಪರವ, ಬಿಲ್ಲವ, ಬಂಟ, ಮೊಗವೀರರು–ಈ ಮೊದಲಾದವರೆಲ್ಲ ತುಳುನಾಡಿನ

ಮೂಲನಿವಾಸಿಗಳು. ಇದಕ್ಕೆ ಸಾಕ್ಷಿಯಾಗಿ ಇವರಲ್ಲಿ ಕೆಲವರನ್ನು ಇಂದಿಗೂ ಇಲ್ಲಿಗೆ ಅನಂತರ ಬಂದ ಬ್ರಾಹ್ಮಣ, ಜೈನ ಮೊದಲಾದ ಮೇಲ್ವರ್ಗದ ಕುಟುಂಬಗಳವರು 'ಮೂಲದಕ್‌ಲ್' (ಮೂಲದವರು) ಎಂದು ಗುರುತಿಸುತ್ತಾರೆ. ಈ ಮೇಲ್ವರ್ಗದವರಲ್ಲಿ ಇಂದಿಗೂ ಆಚರಣೆಗಳು ವಿಧಿಪ್ರಕಾರ ನಡೆಯಬೇಕಾದರೆ 'ಮೂಲದಕ್‌ಲ್' ಪಾಲ್ಗೊಳ್ಳುವುದು ಅತೀ ಅಗತ್ಯ. ಹಿಂದೆ 'ಕುರಲ್‌ಪರ್ಬ'ಕ್ಕೆ ತೆನೆ ಸಂಗ್ರಹಿಸುವ ವಿಧಿಯನ್ನು 'ಮೂಲದಕ್‌ಲೇ' ಮಾಡುತ್ತಿದ್ದರು. ಇಂದಿಗೂ ಭತ್ತಬೇಸಾಯವನ್ನು ಉಳಿಸಿಕೊಂಡಿರುವ ಕೆಲವು 'ಗುತ್ತುಮನೆ'ಗಳಲ್ಲಿ (ಊರಪ್ರಮುಖರ ಮನೆ) 'ಸುಗ್ಗಿ' ಭತ್ತ ಬೇಸಾಯಕ್ಕೆ ಸಂಬಂಧಿಸಿದ 'ಗದ್ದೆಗೋರುನ' (ಗದ್ದೆಕೋರುವುದು) ದಿನದಂದು ಗದ್ದೆಗೆ 'ಬಾಳೆಹಾಕುವುದು' ಮತ್ತು 'ಪೂಕರೆಪಾಡುನ' ಕ್ರಮವನ್ನು 'ಮೂಲದಕ್‌ಲೇ' ಮಾಡುವುದು ಸಂಪ್ರದಾಯವಾಗಿದೆ. ಆದರೆ ವಾಸ್ತವವಾಗಿ ಇಂದು ತುಳುನಾಡು ಸರ್ವಜನಾಂಗದ ನೆಲೆವೀಡು. ಈಗ ಇಲ್ಲಿ ಆರ್ಯಮೂಲದ ಬ್ರಾಹ್ಮಣರಿದ್ದಾರೆ; ಜೈನಧರ್ಮೀಯರಿದ್ದಾರೆ; ಕ್ರಿಶ್ಚಿಯನ್ನರಿದ್ದಾರೆ; ಮುಸ್ಲಿಮರಿದ್ದಾರೆ; ಕನ್ನಡಿಗರಿದ್ದಾರೆ; ಮಲಯಾಳಿಗಳಿದ್ದಾರೆ; ತಮಿಳರಿದ್ದಾರೆ; ಮರಾಠಿಗರಿದ್ದಾರೆ; ಕೊಂಕಣಿಗರಿದ್ದಾರೆ; ತೆಲುಗರಿದ್ದಾರೆ. ಆದಿಮ ಘಟ್ಟದಲ್ಲಿ 'ಮೂಲದವರ' ಅಧೀನದಲ್ಲಿದ್ದ ತುಳುನಾಡಿನ ನೆಲ-ಹೊಲಗಳೆಲ್ಲ ಇಂದು ನಂತರ ಬಂದ ಶಿಕ್ಷಿತ ಜನಾಂಗಗಳ ಪಾಲಾಗಿವೆ. ಹಾಗಾಗಿ 'ಮೂಲದವರು' ಆರ್ಥಿಕವಾಗಿ, ಸಾಮಾಜಿಕವಾಗಿ, ಶೈಕ್ಷಣಿಕವಾಗಿ, ರಾಜಕೀಯವಾಗಿ ಬಹಳಷ್ಟು ಹಿಂದುಳಿದಿದ್ದಾರೆ. ಈಗ ತಕ್ಕಮಟ್ಟಿಗೆ ಸುಧಾರಿಸಿದೆಯಾದರೂ, ಸ್ವಾತಂತ್ರ್ಯಪೂರ್ವದಲ್ಲಿ 'ಮೂಲದವರ' ಸ್ಥಿತಿಗತಿ ಚಿಂತಾಜನಕವಾಗಿತ್ತು. ಭೂತಾರಾಧನೆ, ನಾಗಾರಾಧನೆಗಳಿಗಷ್ಟೆ ಸೀಮಿತವಾಗಿದ್ದ ಇಲ್ಲಿನ ಆರಾಧನ ಸಂಸ್ಕೃತಿ ಇಂದು ನೂರಾರು ದೇವತೆಗಳ, ದೇವಾಲಯಗಳ ಬೀಡಾಗಿದೆ. ದ್ರಾವಿಡ ಮೂಲದ ಇಲ್ಲಿನ ಸಂಸ್ಕೃತಿ ಇಂದು ಆರ್ಯಸಂಸ್ಕೃತಿಯ ಪ್ರಭಾವಕ್ಕೊಳಗಾಗಿ ದ್ರಾವಿಡಾರ್ಯ ಮಿಶ್ರ ಸಂಸ್ಕೃತಿಯಾಗಿ ಮುಂದುವರಿಯುತ್ತಿದೆ. ಈ ನೆಲದ ಮೂಲ ಕಸುಬಾಗಿದ್ದ ಭತ್ತಬೇಸಾಯ ಇಂದು ಬಹುತೇಕ ಮಾಯವಾಗಿದೆ. ಮೊದಲನೆಯದಾಗಿ ಆಹಾರ ಬೆಳೆಯುತ್ತಿದ್ದ ಭತ್ತದ ಗದ್ದೆಗಳಲ್ಲಿ ಆರ್ಥಿಕ ಬೆಳೆಯಾಗಿ ಅಡಿಕೆ ತೋಟ ಗರಿಷ್ಠ ಪ್ರಮಾಣದಲ್ಲಿ ವ್ಯಾಪಿಸಿಕೊಂಡಿದೆ. ಜೊತೆಗೆ ತೆಂಗು, ಗೇರು, ರಬ್ಬರ್, ಕಾಳುಮೆಣಸು-ಹೀಗೆ ಅನೇಕ ವಾಣಿಜ್ಯ ಬೆಳೆಗಳು ತುಳುನಾಡಿನ ಆಹಾರೋತ್ಪಾದನಾ ಸಂಸ್ಕೃತಿಯ ಸ್ಥಾನವನ್ನು ಆಕ್ರಮಿಸಿಕೊಂಡಿವೆ. ಎರಡನೆಯದಾಗಿ ಸಾಂಪ್ರದಾಯಿಕ ವೃತ್ತಿ ತಂತ್ರಗಾರಿಕೆಗಳು ಮಾಯವಾಗಿ ವೈಜ್ಞಾನಿಕ ಸಾಧನ-ಸಲಕರಣೆಗಳು ಬಂದಿವೆ. ಜೋಡಿ ಎತ್ತುಗಳನ್ನು ಕಟ್ಟಿ ಉಳುಮೆ

ಮಾಡುತ್ತಿದ್ದಲ್ಲಿ ಇಂದು ಟಿಲ್ಲರ್-ಟ್ರಾಕ್ಟರ್‌ಗಳು ಆ ಕೆಲಸವನ್ನು ಮಾಡುತ್ತಿವೆ. ಹಾಗಾಗಿ ಹೊಲ ಇದ್ದರೂ ಜಾನುವಾರುಗಳೇ ಇಲ್ಲವಾಗಿವೆ. ಈ ಕಾರಣಕ್ಕಾಗಿ ಭತ್ತಬೇಸಾಯದ ಜೊತೆಜೊತೆಗೆ ಹುಟ್ಟಿಕೊಂಡ ಈ ನೆಲದ ಮೂಲ ಸಂಸ್ಕೃತಿಯೂ ಇಂದು ಗಮನಾರ್ಹವಾಗಿ ಮಾಯವಾಗಿದೆ. ಮಾತೃಮೂಲೀಯ ಕುಟುಂಬ ಪದ್ಧತಿ ಮತ್ತು ಕೂಡುಕುಟುಂಬ ವ್ಯವಸ್ಥೆಗಳೂ ಇಂದು ಸಾಕಷ್ಟು ಸಡಿಲಗೊಂಡಿವೆ. ಜಾಗತಿಕವಾದ ಪರಿವರ್ತನೆಗಳ ಪ್ರಭಾವ ತುಳುನಾಡಿನ ಮೇಲೆ ಆಗಿದೆಯಾದರೂ ಇಲ್ಲಿನ ಪ್ರತಿಯೊಂದು ಪರಿವರ್ತನೆಗಳಿಗೂ ಆಂತರಿಕವಾದ ಸಂಬಂಧಗಳಿರುವುದು ಅಧ್ಯಯನದಿಂದ ಸ್ಪಷ್ಟವಾಗುತ್ತದೆ.

ಆಹಾರದ ಬೆಳೆಯಾಗಿ ಬೆಳೆಯುತ್ತಿದ್ದ ಭತ್ತ ಬೇಸಾಯದಲ್ಲಿ ತುಳುವರಿಗೆ ಅಧ್ಯಾತ್ಮದ ಸಂಸರ್ಗವಿತ್ತು. ಆದುದರಿಂದ ಭತ್ತ ಬೇಸಾಯ ತುಳುವರಿಗೆ ಕೇವಲ ಕಸುಬಾಗಿರಲಿಲ್ಲ. ಅದೊಂದು ಆರಾಧನೆಯೂ ಆಗಿತ್ತು; ಮತ್ತು ಈ ಹಿನ್ನೆಲೆಯಲ್ಲಿ ವಾರ್ಷಿಕ ಆವರ್ತನದಲ್ಲಿ ಹಲವು ಆಚರಣೆಗಳನ್ನು ನಡೆಸಿಕೊಂಡು ಬರುತ್ತಿದ್ದರು. ಬೇಸಾಯದ ಚಟುವಟಿಕೆಯಲ್ಲಿ ಮತ್ತು ಬೇಸಾಯದ ಪೋಷಕವಾಗಿ ಹುಟ್ಟಿಕೊಂಡ ಆಚರಣೆಗಳಲ್ಲಿ ಒಂದು ರೀತಿಯ ಧಾರ್ಮಿಕ ಪಾವಿತ್ರ್ಯದ ಪರಿಸರ ಸಂನಿವೇಶ ಇತ್ತು. ಇದು ಅನಕ್ಷರಸ್ಥರ ಜಾನಪದ ವ್ಯವಸ್ಥೆಯಾಗಿದ್ದರೂ ಅದರಲ್ಲಿ ಒಂದು ಆರೋಗ್ಯಕರ ವೈಜ್ಞಾನಿಕ ದೃಷ್ಟಿಕೋನದ ವಾತಾವರಣವಿದ್ದದ್ದನ್ನು ಅರ್ಥೈಸಬಹುದಾಗಿದೆ. ಸೃಷ್ಟಿ ಪ್ರಕೃತಿಯ ಕಾಲಚಕ್ರದೊಂದಿಗೆ ಮಾನವ ಸಂಸ್ಕೃತಿಯ ಜೀವನಚಕ್ರದ ನಡಿಗೆಯನ್ನು ತುಳುಜನಪದರು ಸ್ಪಷ್ಟವಾಗಿ ಹೊಂದಿಸಿಕೊಂಡು ಸಕಲಜೀವಜಾಲಕ್ಕೆ ಅನುವಾಗುವ ರೀತಿಯಲ್ಲಿ ನಡೆದುಕೊಂಡಿದ್ದರು. ಆದರೆ ಇಂದು ತುಳುನಾಡಿನ ಸಂಸ್ಕೃತಿಯ ಮೂಲಆಶಯಗಳು ಉಳಿದಂತಿಲ್ಲ. ತುಳುನಾಡ ಸಂಸ್ಕೃತಿಯನ್ನು ನಿರ್ವಚಿಸುವ ವಿವಿಧ ರೀತಿಯ ಚಟುವಟಿಕೆಗಳು ಇಂದು ಕಣ್ಮರೆಯಾಗಿವೆ. ವಾರ್ಷಿಕ ಆವರ್ತನದ ಆಚರಣೆಗಳೂ ಇದಕ್ಕೆ ಹೊರತಾಗಿಲ್ಲ. ಕೆಲವು ಆಚರಣೆಗಳು ಉಳಿದಿದ್ದರೂ ಮೂಲರೂಪದಲ್ಲಿಲ್ಲ; ಅವು ಆರ್ಯೀಕರಣಗೊಂಡಿವೆ. ಕೌಟುಂಬಿಕ ವಲಯದ ಧಾರ್ಮಿಕ ಚೌಕಟ್ಟಿನಿಂದ ಹೊರಬಂದು ಸಾರ್ವಜನಿಕ ಸಂಭ್ರಮಾಚರಣೆಗಳಾಗಿಯೂ ಪರಿವರ್ತಿತವಾಗಿವೆ. ಕೆಲವೊಂದು ಆಚರಣೆಗಳು ಇಂದು ಕೇವಲ ಮೂಲದ ಮನೆಗಳಲ್ಲಿ ಮಾತ್ರ ಆಚರಿಸಲ್ಪಡುತ್ತವೆ; ವಿಭಜಿತ ಮನೆಗಳಲ್ಲಿ ಯಾವುದೇ ರೀತಿಯ ಆಚರಣೆಗಳು ನಡೆಯುವುದು ಕಂಡುಬರುವುದಿಲ್ಲ. ನಾಗಾರಾಧನೆಯು ನಾಗರಪಂಚಮಿಯ ಆಚರಣೆಯಾಗಿ ಬ್ರಾಹ್ಮಣ ಪುರೋಹಿತರ ನೇತೃತ್ವದಲ್ಲಿ ವೈದಿಕ ಕ್ರಮದಲ್ಲಿ ನಡೆಯುತ್ತದೆ. ದೇವಾಲಯ, ಮಸೀದಿ, ಚರ್ಚುಗಳೇ ಪ್ರಮುಖ ಧಾರ್ಮಿಕ ಶಕ್ತಿಕೇಂದ್ರಗಳಾಗಿವೆ.

ತುಳುನಾಡಿನ ಹೆಚ್ಚಿನ ದೇವಾಲಯಗಳು ಮೂಲತಃ ದೈವಾಲಯಗಳಾಗಿದ್ದ ಬಗ್ಗೆ ಆಧಾರಗಳು ಹೇಳುತ್ತವೆ. ಆದಾಗ್ಯೂ ಇಂದು ಈ ನಾಡಿನ ಪ್ರತಿಯೊಂದು ದೇವಾಲಯದಲ್ಲಿಯೂ ನಾಗಾರಾಧನೆ ಮತ್ತು ಭೂತಾರಾಧನೆಗಳಿಗೆ ಪ್ರತ್ಯೇಕ ಪ್ರಾತಿನಿಧ್ಯವಿದೆ. ಒಂದರ್ಥದಲ್ಲಿ ಇಲ್ಲಿನ ಮೂಲನಿವಾಸಿಗಳು ಎರಡನೆಯ ಸ್ಥಾನಕ್ಕೆ ಹೋದಂತೆ ಅವರ ಆರಾಧನಾ ಶಕ್ತಿಗಳಾದ ಭೂತ-ನಾಗಗಳು ಕೂಡ ಎರಡನೆಯ ಸ್ಥಾನಕ್ಕೆ ಪಲ್ಲಟವಾಗಿವೆ. ಇದನ್ನು ಸಂಸ್ಕೃತೀಕರಣ ಎನ್ನಲಾಗುತ್ತದೆ. 'ಬಿಸುಪರ್ಬ', 'ಕುರಲ್‌ಪರ್ಬ', 'ಆಟಿ ಆಚರಣೆಗಳು', 'ಪರ್ಬ ಆಚರಣೆ', 'ಕೆಡ್ಡಸ'-ಹೀಗೆ ಮೂಲ ಜನಪದ ಆಚರಣೆಗಳು ಇಂದು ಹಳ್ಳಿಗಳಲ್ಲಿ ಮಾಯವಾಗಿ, ನಗರಗಳಲ್ಲಿ ಅಲ್ಲಲ್ಲಿ ಸಾರ್ವಜನಿಕ ವೇದಿಕೆಗಳಲ್ಲಿ ಪ್ರದರ್ಶನವಾಗುತ್ತಿರುವುದು ವಿಷಾದನೀಯ. ಇದರ ಜೊತೆಗೆ ಮೂಲತಃ ತುಳುನಾಡಿನದಲ್ಲದ ಹತ್ತಾರು ಆಚರಣೆಗಳು ಇಂದು ತುಳುನಾಡಿನಲ್ಲಿ ವಾರ್ಷಿಕ ಆವರ್ತನದ ಆಚರಣೆಗಳಾಗಿ ಸೇರಿಕೊಂಡಿರುವುದು ವಿಶೇಷವಾಗಿ ಕಂಡುಬರುತ್ತದೆ. ಈ ನೆಲೆಯಲ್ಲಿ ತುಳಸೀ ಪೂಜೆ, ರಾಮನವಮಿ, ಚೌತಿಹಬ್ಬ, ಕೃಷ್ಣಾಷ್ಟಮಿ, ನವರಾತ್ರಿ, ಮಕರಸಂಕ್ರಮಣ, ನೂಲಹುಣ್ಣಿಮೆ, ವರಮಹಾಲಕ್ಷ್ಮಿವ್ರತ, ಷಷ್ಠಿ, ಮಹಾಶಿವರಾತ್ರಿ, ಯುಗಾದಿ, ಸೋಣಶನಿವಾರ ವ್ರತ-ಇವೇ ಮೊದಲಾದವುಗಳನ್ನು ಗುರುತಿಸಬಹುದು. ಇವುಗಳೆಲ್ಲ ಆರ್ಯಮೂಲದ ಇಲ್ಲವೆ ತುಳುವೇತರ ಶಿಷ್ಟ ಆಚರಣೆಗಳಾಗಿವೆ.

ಪ್ರಸ್ತುತ ಅಧ್ಯಯನದ ಹಿನ್ನೆಲೆಯಲ್ಲಿ ದ.ಕ.ಜಿಲ್ಲೆಯ ಬೆಳ್ತಂಗಡಿ ತಾಲೂಕಿನ ಕೊಯ್ಯೂರು ಗ್ರಾಮವನ್ನು ಕ್ಷೇತ್ರಕಾರ್ಯಗಳ ಮೂಲಕ ಸಮೀಕ್ಷೆ ನಡೆಸಿ ತುಳುನಾಡಿನ ವಾರ್ಷಿಕ ಆವರ್ತನದ ಆಚರಣೆಗಳ ಇಂದಿನ ಸ್ಥಿತಿಗತಿಯ ಚಿತ್ರಣವನ್ನು ಪಡೆಯಲು ಪ್ರಯತ್ನಿಸಲಾಗಿದೆ. ಇಲಾಖಾ ದಾಖಲೆಗಳ ಪ್ರಕಾರ ಈ ಗ್ರಾಮದಲ್ಲಿ ಒಟ್ಟು ೧೧೪೫ ಕುಟುಂಬಗಳಿವೆ. ಅವುಗಳಲ್ಲಿ ೨೩೭ ಕುಟುಂಬಗಳಿಗೆ ವಿಶೇಷ ಭೇಟಿನೀಡಿ ಮಾಹಿತಿ ಸಂಗ್ರಹಿಸಲಾಗಿದೆ. ಈ ಕುರಿತಾದ ಅಂಕಿಅಂಶಗಳ ಮಾಹಿತಿ ಕೋಷ್ಟಕವನ್ನು ಮುಂದಿನ ಪುಟದಲ್ಲಿ (ಪುಟ ಸಂಖ್ಯೆ- ೨೧೪-ಅ) ನೀಡಲಾಗಿದೆ.

ಅಧ್ಯಯನಕ್ಕೆ ಆರಿಸಿಕೊಂಡ ಒಂಬತ್ತು ಆಚರಣೆಗಳಲ್ಲಿ 'ಪತ್ತನಾಜೆ', 'ನಾಗರ ಪಂಚಮಿ' ಮತ್ತುಕೆಡ್ಡಸ'- ಈ ಮೂರು ಆಚರಣೆಗಳು ಮಾತ್ರ ತಕ್ಕಮಟ್ಟಿಗೆ ಉಳಿದುಕೊಂಡಿವೆ. ಆದರೆ 'ನಾಗರ ಪಂಚಮಿ' ಪೂರ್ತಿಯಾಗಿ ವೈದಿಕ ಕ್ರಮದಲ್ಲಿ ಆಚರಣೆಗೊಳ್ಳುತ್ತಿದೆ. ಪತ್ತನಾಜೆ', 'ಕೆಡ್ಡಸ' ಗಳು ಉಳಿದಿವೆಯಾದರೂ ಮೂಲದ ಭಕ್ತಿ, ಶ್ರದ್ಧೆಯ ಕ್ರಿಯಾವಿಧಿಗಳು ಕಂಡುಬರುವುದಿಲ್ಲ. 'ಬಿಸುಪರ್ಬ' ಆಚರಣೆ ಈಗ ಸಂಪೂರ್ಣ ಕಣ್ಮರೆಯಾಗಿದೆ ಎಂದೇ ಹೇಳಬಹುದು. ಸಾಂಕೇತಿಕವಾಗಿ ಸಿಹಿಊಟ ಇಲ್ಲವೆ ವಿಶೇಷ ಅಡುಗೆಗಳಿಗಷ್ಟೇ ಇದು ಸೀಮಿತಗೊಂಡಿದೆ. 'ಆಟಿ

## ತುಳುನಾಡಿನ ಆಚರಣೆಗಳು–ವಾರ್ಷಿಕ ಆವರ್ತನದ ಸಾಂಸ್ಕೃತಿಕ ಅಧ್ಯಯನ
### ಗ್ರಾಮ ಸಮೀಕ್ಷೆಯ ಅಂಕಿ ಅಂಶಗಳು
### ಕೊಯ್ಯೂರು ಗ್ರಾಮ, ಬೆಳ್ತಂಗಡಿ ತಾಲೂಕು, ದ.ಕ.ಜಿಲ್ಲೆ

| ಜಾತಿಗಳು | ಭೇಟಿ ನೀಡಿದ ಕುಟುಂಬಗಳು | ಭತ್ತಬೇಸಾಯ ಇರುವವರು | ಆಚರಣೆಗಳು | | | | | | | | |
|---|---|---|---|---|---|---|---|---|---|---|---|
| | | | ಬಿಸುಪರ್ಬ | ಪತ್ತನಾಜೆ | ಆಟಿ ಅಮಾವಾಸ್ಯೆ | ನಾಗರ ಪಂಚಮಿ | ಕುರಲ್ ಪರ್ಬ | ಪುದ್ವಾರ್ | ಕಾವೂರಿ ಸಂಕ್ರಮಣ | ಪರ್ಬ | ಕೆಡ್ಡಸ |
| ಮುಗೇರ/ಮೇರ | ೭ | ೦ | ೦ | ೪ | ೫ | ೩ | ೨ | ೧ | ೦ | ೫ | ೧ |
| ಮನ್ಸ | ೧೯ | ೧ | ೦ | ೬ | ೧೪ | ೮ | ೦ | ೨ | ೧ | ೯ | ೩ |
| ನಲ್ಕೆ | ೧ | ೦ | ೦ | ೧ | ೧ | ೧ | ೧ | ೧ | ೦ | ೧ | ೧ |
| ಮಲೆಕುಡಿಯ | ೨ | ೦ | ೦ | ೦ | ೨ | ೨ | ೦ | ೦ | ೦ | ೨ | ೨ |
| ನೇಕಾರ | ೪ | ೨ | ೦ | ೩ | ೪ | ೪ | ೪ | ೩ | ೨ | ೨ | ೪ |
| ವಿಶ್ವಕರ್ಮ | ೩ | ೧ | ೦ | ೨ | ೩ | ೩ | ೩ | ೧ | ೧ | ೩ | ೩ |
| ಮರಾಠಿ ನಾಯ್ಕ | ೨ | ೦ | ೦ | ೦ | ೧ | ೧ | ೦ | ೦ | ೦ | ೧ | ೧ |
| ದೇವಾಡಿಗ | ೩ | ೨ | ೦ | ೧ | ೩ | ೨ | ೧ | ೧ | ೧ | ೧ | ೧ |
| ಬಿಲ್ಲವ | ೧೧ | ೩ | ೦ | ೪ | ೧೦ | ೧೦ | ೩ | ೩ | ೩ | ೧೦ | ೧೧ |
| ಬಂಟ | ೧ | ೦ | ೦ | ೦ | ೧ | ೧ | ೦ | ೦ | ೦ | ೧ | ೧ |
| ಮಡಿವಾಳ | ೮ | ೫ | ೦ | ೮ | ೮ | ೫ | ೧ | ೧ | ೦ | ೫ | ೮ |
| ಒಕ್ಕಲಿಗ ಗೌಡ | ೧೧೧ | ೩೩ | ೦ | ೫೫ | ೧೧೦ | ೧೦೧ | ೫೭ | ೩೩ | ೩೯ | ೬೩ | ೧೦೧ |
| ಶಿವಳ್ಳಿ ಬ್ರಾಹ್ಮಣ | ೧೭ | ೧ | ೦ | ೯ | ೧೪ | ೧೫ | ೮ | ೧ | ೦ | ೧೬ | ೯ |
| ಹವ್ಯಕ ಬ್ರಾಹ್ಮಣ | ೨ | ೧ | ೦ | ೧ | ೦ | ೨ | ೧ | ೨ | ೦ | ೨ | ೨ |
| ಜೈನ್ | ೩ | ೨ | ೦ | ೧ | ೦ | ೩ | ೨ | ೦ | ೦ | ೨ | ೧ |
| ಮಲೆಯಾಳಿಕ್ರಿಶ್ಚಿಯನ್ | ೧ | ೦ | ೦ | ೦ | ೦ | ೦ | ೦ | ೦ | ೦ | ೦ | ೦ |
| ಮುಸ್ಲಿಮ್ | ೪೨ | ೪ | ೦ | ೦ | ೧೦ | ೧ | ೧ | ೦ | ೦ | ೦ | ೦ |
| **ಒಟ್ಟು** | **೨೩೭** | **೫೫** | **೦** | **೯೫** | **೧೮೬** | **೧೬೨** | **೮೪** | **೪೯** | **೪೭** | **೧೫೩** | **೧೪೯** |

ಅಮಾವಾಸ್ಯೆ'ಯ ಹಾಲೆರಸ ಕುಡಿಯುವ ಕ್ರಮ ಅಲ್ಪ ಸ್ವಲ್ಪ ಉಳಿದಿದೆಯಾದರೂ, ಉಳಿದ ಕ್ರಿಯಾವಿಧಿಗಳು ಮಾಯವಾಗುತ್ತಿವೆ. ಆ ದಿನ ಶಿವ ದೇವಾಲಯಗಳಿಗೆ ಹೋಗುವುದು, ತೀರ್ಥಸ್ನಾನ ಮಾಡುವುದು ಇತ್ಯಾದಿ ಕಂಡುಬರುತ್ತದೆ. ಕೆಲವು ಮನೆಗಳಲ್ಲಿ ಮಾತ್ರ 'ಕಳಿ' ಕುತ್ತುವುದು, ಭೂತಗಳಿಗೆ 'ಅಗೆಲು' ಬಡಿಸುವುದು, ದಾನಬಿಡುವುದು, ಹರಿಯುವ ನೀರಿನಲ್ಲಿ ತೀರ್ಥಸ್ನಾನ ಮಾಡುವ ಸಂಪ್ರದಾಯ ಮಾತ್ರ ಉಳಿದಿದೆ. 'ಕುರಲ್‌ಪರ್ಬ', 'ಪುದ್ವಾರ್' ಆಚರಣೆಗಳೂ ಗಣನೀಯ ಪ್ರಮಾಣದಲ್ಲಿ ನಿಂತು ಹೋಗಿವೆ. ಭತ್ತದ ಬೇಸಾಯವನ್ನು ಮಾಡುವವರು ಮಾತ್ರ ಇವುಗಳನ್ನು ಆಚರಿಸುತ್ತಾರೆ. ದೇವಾಲಯಗಳಲ್ಲಿ ಈ ಆಚರಣೆ ತಕ್ಕಮಟ್ಟಿಗೆ ಉಳಿದುಕೊಂಡಿದ್ದು, ಚೌತಿಹಬ್ಬದಂದು ಈ ಆಚರಣೆ ನಡೆಯುತ್ತದೆ. ಹಾಗಾಗಿ ಅದೇ ದಿನ ದೇವಾಲಯದಿಂದ 'ಕುರಲ್' ತಂದು ಮನೆ ತುಂಬಿಸಿಕೊಳ್ಳುವ ಸರಳವಾದ ಕ್ರಮ ಕಂಡುಬರುತ್ತದೆ. 'ಕಾವೇರಿ ಸಂಕ್ರಾಂತಿ' ಆಚರಣೆಯೂ ಭಾಗಶಃ ಕಣ್ಮರೆಯಾಗುತ್ತಿದ್ದು ಬೇಸಾಯ ಇರುವವರಲ್ಲಿ ಕೆಲವರು ಮಾತ್ರ ಆಚರಿಸುತ್ತಾರೆ. ಅಲ್ಲಿಯೂ 'ಬಿತ್ತ್‌ದಮುಡಿ' ಅಟ್ಟಕ್ಕೆ ಹಾಕುವ ಕ್ರಮ ಪೂರ್ತಿಯಾಗಿ ನಿಂತಿದೆ. ಈಗ 'ಮುಡಿ' ಕಟ್ಟುವ ಪದ್ಧತಿಯೇ ಇಲ್ಲವಾಗಿದೆ. 'ಪರ್ಬ' ಆಚರಣೆಯ ಸಡಗರ ಒಂದಷ್ಟು ಉಳಿದಿದೆಯಾದರೂ 'ಬಲೀಂದ್ರ ಪೂಜೆ' ಸಾಕಷ್ಟು ಕಡಿಮೆಯಾಗಿದೆ. ಜಾನುವಾರುಗಳಿಗೆ 'ತುಡರ್' ತೋರಿಸುವ ಕ್ರಮ ಕೆಲವೇ ಮನೆಗಳಲ್ಲಿ ಮಾತ್ರ ಉಳಿದಿದ್ದು, ಮೊದಲಿನ ಶ್ರದ್ಧೆ, ಭಕ್ತಿ, ನಂಬಿಕೆಗಳು ತಮ್ಮ ಮೌಲ್ಯ ಕಳೆದುಕೊಂಡಿವೆ. ಈ ಎಲ್ಲ ಪಲ್ಲಟಗಳಿಗೆ ಜನರು ಕೊಡುವ ಕಾರಣವೇನೆಂದರೆ ಭತ್ತ ಬೇಸಾಯ ಇಲ್ಲ ಎಂಬುದು. ಬೇಸಾಯ ಇರುವಾಗ ಅವುಗಳನ್ನೆಲ್ಲ ಮಾಡುತ್ತಿದ್ದೆವು ಎನ್ನುತ್ತಾರೆ.

ಒಟ್ಟಾರೆಯಾಗಿ ಹೇಳುವುದಾದರೆ ಈ ಪ್ರಪಂಚದಲ್ಲಿ ಸಂಸ್ಕೃತಿ–ನಾಗರಿಕತೆ ಮುಂತಾದವು ನಿರಂತರ ವಿಕಸನದ ಪ್ರಕ್ರಿಯೆಗೆ ಒಳಗಾಗುತ್ತಲೇ ಸ್ಥಿತ್ಯಂತರಗೊಳ್ಳುತ್ತಿರುತ್ತವೆ. ಪರಿಸರ ಹವಾಮಾನಗಳ ಪ್ರಾಕೃತಿಕ ಗುಣಸ್ವಭಾವಗಳನ್ನು ಗಮನಿಸಿದ ಮೂಲಜನಪದರು ಸಂಸ್ಕೃತಿಯೊಂದನ್ನು ಹುಟ್ಟುಹಾಕಿದ್ದಾರೆ. ಅಂದರೆ ಯಾವುದೋ ಕಾರಣದಿಂದ ಸೃಷ್ಟಿಯಾದ ಈ ತುಳುನಾಡಿನ ಪ್ರಕೃತಿ ಪರಿಸರದಲ್ಲಿ ಇಲ್ಲಿನ ಮೂಲ ಸಂಸ್ಕೃತಿಯೊಂದು ಹುಟ್ಟಿಕೊಂಡಿತು. ನಂತರ ಸಂಸ್ಕೃತೀಕರಣದ ಕಾರಣಕ್ಕಾಗಿ ಪ್ರಕೃತಿಯಲ್ಲಿ ಬದಲಾವಣೆಯಾಯಿತು. ಹೀಗೆ ಪ್ರಕೃತಿ ಮತ್ತು ಸಂಸ್ಕೃತಿ ಪರಸ್ಪರ ಪ್ರಭಾವಕ್ಕೊಳಗಾಗಿ ನಿರಂತರ ಸ್ಥಿತ್ಯಂತರಗಳಿಗೆ ಕಾರಣಗಳಾಗಿವೆ. ಹೀಗೆ ತುಳುನಾಡಿನ ಸಂಸ್ಕೃತಿಯಲ್ಲಿ ಸಾಕಷ್ಟು ಬದಲಾವಣೆಗಳು ಆಗಿರುವುದು ಅಧ್ಯಯನದಿಂದ ತಿಳಿದು ಬರುತ್ತದೆ. ಭೌಗೋಳಿಕ ಸ್ಥಿತಿ, ಹವಾಮಾನ, ಆಹಾರೋತ್ಪನ್ನ ಪದ್ಧತಿ, ಆರ್ಥಿಕತೆ, ಸಾಮಾಜಿಕ–

ರಾಜಕೀಯ ವಿಚಾರಗಳು, ಕಲೆ-ಸಂಗೀತ-ಸಾಹಿತ್ಯ ಹೀಗೆ ಒಟ್ಟೂ ಸಾಂಸ್ಕೃತಿಕ ಸಂನಿವೇಶಗಳು ಆದಾನ ಪ್ರದಾನಗಳೊಂದಿಗೆ ಬದಲಾಗುತ್ತಾ ಬಂದಿವೆ. ಸಮಾಜ ವ್ಯವಸ್ಥೆಯ ಅಂದಿನ ಗಟ್ಟಿ ನೆಲೆಗಟ್ಟಾಗಿದ್ದ ಜಾತಿ ವ್ಯವಸ್ಥೆ ಇಂದು ಮೂಲದ ಉದ್ದೇಶವನ್ನು ಕಳೆದುಕೊಂಡು ದುರ್ಬಲವಾಗಿದೆ. ದಟ್ಟಕಾಡುಗಳಿಂದ ಆವೃತವಾಗಿದ್ದ ತುಳುನಾಡು ಇಂದು ಕಾಡುರಹಿತವಾಗಿದೆ. ಹವಾಮಾನದಲ್ಲಿ ವೈರುಧ್ಯಗಳಾಗಿವೆ. ಮೂಲದ ಭತ್ತಬೇಸಾಯ ಸಂಸ್ಕೃತಿ ಇಂದು ಮಾಯವಾಗುತ್ತಿದೆ. ಇದರ ಜೊತೆಗಿದ್ದ ಕುಲಕಸುಬುಗಳೂ ಕಣ್ಮರೆಯಾಗುತ್ತಿವೆ. ಇವುಗಳ ಜೊತೆಗೆ ಸಹಸಂಸ್ಕೃತಿಗಳಾಗಿದ್ದ ಹಬ್ಬಹರಿದಿನ, ಆಚರಣೆ-ಆರಾಧನೆಗಳೂ ಗಣನೀಯವಾಗಿ ಸಡಿಲಗೊಂಡಿವೆ.

**೧೩.೧.೧: ಕಾರಣಗಳು**

ಒಟ್ಟಿನಲ್ಲಿ ತುಳುನಾಡಿನ ವಾರ್ಷಿಕ ಆವರ್ತನದ ಆಚರಣೆಗಳ ಇಂದಿನ ಸ್ಥಿತಿಗತಿ ಮೊದಲಿನಂತಿಲ್ಲ. ಇದಕ್ಕೆ ಮುಖ್ಯ ಕಾರಣಗಳನ್ನು ಈ ರೀತಿಯಾಗಿ ಗುರುತಿಸಬಹುದು.

೧. ತುಳುವೇತರ ಜನಾಂಗ-ಸಂಸ್ಕೃತಿಗಳ ಆಗಮನ; ವಿಶೇಷವಾಗಿ ವೈದಿಕ ಸಂಸ್ಕೃತಿಯ ಪ್ರಭಾವ
೨. ಭತ್ತ ಬೇಸಾಯವೆಂಬ ಆಹಾರ ಸಂಸ್ಕೃತಿಯಿಂದ ಜನ ಆರ್ಥಿಕ ಬೇಸಾಯದ ಕಡೆ ಮುಖ ಮಾಡಿರುವುದು
೩. ಕೂಡು ಕುಟುಂಬಗಳು ವಿಭಜನೆಯಾಗಿರುವುದು
೪. ಶೈಕ್ಷಣಿಕ ಪ್ರಗತಿ
೫. ಉದ್ಯೋಗ ಅರಸಿ ಪಟ್ಟಣಗಳಿಗೆ ವಲಸೆ
೬. ಹವಾಮಾನದ ಅನನುಕೂಲತೆ
೭. ಸಾಮಾಜಿಕ ವ್ಯವಸ್ಥೆಯ ಬದಲಾವಣೆ
೮. ಜನಸಂಖ್ಯಾ ಹೆಚ್ಚಳ
೯. ದೂರಾಲೋಚನೆಯ ಕೊರತೆ
೧೦. ಧಾರ್ಮಿಕತೆಯಲ್ಲಿ ನಿರಾಸಕ್ತಿ
೧೧. ವೈಜ್ಞಾನಿಕ ಮುನ್ನಡೆ
೧೨. ಜಾಗತಿಕ ವಿದ್ಯಮಾನ

### ೧೩.೧.೨: ಪರಿಣಾಮಗಳು

ತುಳುನಾಡಿನಲ್ಲಿ ಇಂದು ವಾರ್ಷಿಕ ಆವರ್ತನದ ಆಚರಣೆಗಳು ಬೇರೆ ಬೇರೆ ಕಾರಣಗಳಿಗಾಗಿ ಕಣ್ಮರೆಯಾಗುತ್ತಿವೆ; ಅಂದರೆ ಸಂಸ್ಕೃತೀಕರಣವಾಗುತ್ತಿದೆ. ಈ ಪ್ರಕ್ರಿಯೆ ಅನಿವಾರ್ಯ ಎಂಬ ವಾಸ್ತವಾಂಶವನ್ನು ಒಪ್ಪಿಕೊಳ್ಳಬೇಕಾಗುತ್ತದೆ. ಆದಾಗ್ಯೂ ಈ ಸ್ಥಿತ್ಯಂತರಗಳು ತುಳುನಾಡಿನಲ್ಲಿ ಕೆಲವು ಪರಿಣಾಮಗಳನ್ನುಂಟುಮಾಡಿರುವುದಂತು ಸತ್ಯ. ಹತ್ತು ಹಲವು ಸದುದ್ದೇಶಗಳಿಗಾಗಿ ಹುಟ್ಟಿ ಪ್ರಾಚೀನ ಪರಂಪರೆಯಿಂದ, ಸಂಪ್ರದಾಯಬದ್ಧವಾಗಿ ಬೆಳೆದು ಬಂದ ವಿಶಾಲವಾದ ಸಂಸ್ಕೃತಿಮರದ ಒಂದೊಂದೆ ಕೊಂಬೆಗಳು ಕಳಚಿಕೊಂಡಾಗ ಖಂಡಿತವಾಗಿಯೂ ಪರಿಸರದ ಮೇಲೆ, ಸಮಾಜದ ಮೇಲೆ, ಜನಜೀವನದ ಮೇಲೆ ಸಾಕಷ್ಟು ಋಣಾತ್ಮಕ ಪರಿಣಾಮಗಳು ಬೀರುತ್ತವೆ. ಆಧುನಿಕ ವಿಜ್ಞಾನದ ಪ್ರಗತಿಯಲ್ಲಿ ಸೌಲಭ್ಯಗಳನ್ನು ಸಾಧಿಸುವ ಉದ್ದೇಶವಿದ್ದರೆ, ಪ್ರಾಚೀನ ಸಂಸ್ಕೃತಿಯ ಸಂರಚನೆಯಲ್ಲಿ ಸಾಮಾಜಿಕ ಸೌಹಾರ್ದ ಮತ್ತು ಸಮಾಧಾನಗಳನ್ನು ಕಂಡುಕೊಳ್ಳುವ ದೃಷ್ಟಿಕೋನವಿತ್ತು.

೧. ವ್ಯಕ್ತಿ, ಕುಟುಂಬ ಮತ್ತು ಸಮಾಜದ ಮಾನಸಿಕ ನೆಮ್ಮದಿ ದೂರವಾಗುತ್ತಿದೆ.

೨. ಕೌಟುಂಬಿಕ ಸಂಬಂಧಗಳು ಕಡಿಮೆಯಾಗಿ, ಭಾವನೆಗಳಿಗೆ ಬೆಲೆಯಿಲ್ಲದೆ, ಜೀವನ ಕೇವಲ ವ್ಯಾವಹಾರಿಕವಾಗಿದೆ.

೩. ಜಾತಿ ವ್ಯವಸ್ಥೆಯೊಳಗಿದ್ದ ಸಾಮಾಜಿಕ ಶಾಂತಿಯ ವಾತಾವರಣಕ್ಕೆ ಭಂಗ ಉಂಟಾಗಿದೆ.

೪. ಭಯ-ಭಕ್ತಿ ಕಡಿಮೆಯಾಗಿ ಬೂಟಾಟಿಕೆ ಅತಿಯಾಗಿ, ಸ್ವೇಚ್ಛಾಚಾರ ಪ್ರವೃತ್ತಿ ನಿರ್ಮಾಣವಾಗಿದೆ.

೫. ಪರಿಸರ ಸಂರಕ್ಷಣೆಯ ಕಾಳಜಿ ಇಲ್ಲವಾಗಿ, ಹವಾಮಾನದಲ್ಲಿ ವೈಪರಿತ್ಯ ಉಂಟಾಗಿದೆ. ಜೀವ ವೈವಿಧ್ಯ ನಾಶವಾಗುತ್ತಿವೆ. ಇದರಿಂದ ಆರೋಗ್ಯ ಸಮಸ್ಯೆ ಹೆಚ್ಚಾಗುತ್ತಿದೆ.

೬. ಸಾತ್ವಿಕ ಗುಣಸ್ವಭಾವಗಳು ಮಾಯವಾಗಿ, ತಾಮಸ ಪ್ರವೃತ್ತಿ ರಾರಾಜಿಸುತ್ತಿವೆ.

೭. ಮೂಲಭಾಷೆ ಮತ್ತು ಸಂಸ್ಕೃತಿಗಳು ವಿನಾಶದ ಅಂಚಿನಲ್ಲಿವೆ.

೮. ಆವರ್ತನದ ಆಚರಣೆಗಳ ಜೊತೆಗಿನ ಕಲಾವಂತಿಕೆ, ಜಾನಪದ ಆಟ-ವಿನೋದಗಳ ಕಣ್ಮರೆ.

▪▪▪

# ಅಧ್ಯಾಯ–೧೪

# ಉಪಸಂಹಾರ

೧೪.೧: ಅಧ್ಯಯನದ ಫಲಿತ

೧೪.೨: ಅಧ್ಯಯನದ ಮುಂದಿನ ಸಾಧ್ಯತೆಗಳು

# ಅಧ್ಯಾಯ–೧೪

# ಉಪಸಂಹಾರ

## ೧೪.೧: ಅಧ್ಯಯನದ ಫಲಿತ

ತುಳುನಾಡ ಸಂಸ್ಕೃತಿಯನ್ನು ನಿರ್ವಚಿಸುವ ಸಂದರ್ಭ ಬಂದಾಗಲೆಲ್ಲ ನಾಗಾರಾಧನೆ, ಭೂತಾರಾಧನೆ, ಜಾನಪದ ಕುಣಿತಗಳು ಮತ್ತು ಪಾಡ್ದನ ಸಾಹಿತ್ಯಗಳನ್ನಷ್ಟೆ ವಿಶೇಷವಾಗಿ ಇಲ್ಲಿಯವರೆಗೆ ಗಮನಿಸಲಾಗಿದೆ. ಆದರೆ ಪ್ರಸ್ತುತ ಈ ಅಧ್ಯಯನವು ತುಳುನಾಡ ಸಂಸ್ಕೃತಿಯ ನಿರೂಪಣೆಗೆ ಸಂಬಂಧಿಸಿದಂತೆ ಒಂದು ಹೊಸ ಆಯಾಮವನ್ನು ಕಂಡುಕೊಂಡಿದೆ. ನಾಗಾರಾಧನೆ, ಭೂತಾರಾಧನೆಗಳು ತುಳುನಾಡಿನ ಧಾರ್ಮಿಕ ನಂಬಿಕೆಯ ಜೀವಾಳ ಎಂಬುವುದರಲ್ಲಿ ಎರಡು ಮಾತಿಲ್ಲ. ಆದರೆ ಈ ನಂಬಿಕೆ–ಆರಾಧನೆಗಳ ಮೂಲ ಸಂಬಂಧವಿರುವುದು ಈ ನಾಡಿನ ವಾರ್ಷಿಕ ಆವರ್ತನದ ಆಚರಣೆಗಳಲ್ಲಿ. ಮುಖ್ಯವಾಗಿ ತುಳುನಾಡಿನ ವಾರ್ಷಿಕ ಆವರ್ತನದ ಆಚರಣೆಗಳಲ್ಲಿ ನಾಗಾರಾಧನೆ, ಭೂತಾರಾಧನೆ, ಪಿತೃಗಳ ಆರಾಧನೆ, ಪ್ರಕೃತಿ ಆರಾಧನೆ, ಕೃಷಿ ಆರಾಧನೆಗಳು ಒಳಗೊಳ್ಳುತ್ತವೆ. ಆದಾಗ್ಯೂ ಈ ಆವರ್ತನದ ಆಚರಣೆ–ಆರಾಧನೆಗಳು ಹುಟ್ಟಿಕೊಂಡಿರುವುದು ಇಲ್ಲಿನ ಆಹಾರೋತ್ಪನ್ನ ವೃತ್ತಿಧರ್ಮವಾದ ಭತ್ತ ಬೇಸಾಯ ಸಂಸ್ಕೃತಿಯ ತಳಹದಿಯ ಮೇಲೆ ಎಂಬುದು ಸಂಶೋಧನ ಸತ್ಯವಾಗಿ ಕಂಡುಬರುತ್ತದೆ. ಅಂತೆಯೇ ಈ ನಾಡಿನ ಭತ್ತಬೇಸಾಯ ಸಂಸ್ಕೃತಿಯೂ ರೂಪಿತಗೊಂಡಿರುವುದು ಈ ಪ್ರದೇಶದ ಪರಿಸರ ಹವಾಗುಣಗಳ ವಾರ್ಷಿಕ ಆವರ್ತನದ ಹಿನ್ನೆಲೆಯಲ್ಲಿ ಎಂಬುದೂ ಸ್ಪಷ್ಟವಾಗುತ್ತದೆ. ಅಂದರೆ ಯಾವುದೇ ಒಂದು ಪ್ರದೇಶದ ಒಂದು ಸಂಸ್ಕೃತಿ ಸಂರಚನೆಗೊಳ್ಳುವುದು ಆ ಪ್ರದೇಶದ ಋತು ಆವರ್ತನಗಳ ಕಾಲಬದ್ಧ ವ್ಯವಸ್ಥೆ ಮತ್ತು ಅಲ್ಲಿನ ಜೀವನ ಸೌಲಭ್ಯ ಅನುಕೂಲತೆಗಳಿಂದ. ಹಾಗಾಗಿ ತುಳುನಾಡ ಸಂಸ್ಕೃತಿಯ ಸ್ವರೂಪ ಏನು ಎಂಬುದನ್ನು ಈ ನಾಡಿನ ವಾರ್ಷಿಕ ಆವರ್ತನದ ಆಚರಣೆಗಳು ಅತ್ಯಂತ ಸ್ಪಷ್ಟವಾಗಿ ನಿರೂಪಿಸುತ್ತವೆ.

ತುಳುನಾಡಿನ ಆಚರಣೆಗಳಿಗೆ ಕಡಿಮೆ ಎಂದರೂ ಇಲ್ಲಿನ ಭತ್ತ ಬೇಸಾಯ ಸಂಸ್ಕೃತಿಯಷ್ಟೆ ಇಲ್ಲವೆ ಅದಕ್ಕಿಂತಲೂ ಹಿಂದಿನ ಬೇಟೆ (ಕಾಡು) ಸಂಸ್ಕೃತಿ ಕಾಲದ ಪ್ರಾಚೀನ ಇತಿಹಾಸವಿದೆ. ಯಾಕೆಂದರೆ ಈ ಆಚರಣೆಗಳು ಬಹುತೇಕ ಭತ್ತಬೇಸಾಯ ಸಂಸ್ಕೃತಿಯ ಉಪಸಂಸ್ಕೃತಿಗಳಾಗಿವೆ. ಜೊತೆಗೆ ಬೇಟೆ ಸಂಸ್ಕೃತಿಯ ಪಳೆಯುಳಿಕೆಗಳೂ ಇದರಲ್ಲಿವೆ. ಪ್ರಕೃತಿಯ

ಮೇಲಿನ ಕುತೂಹಲಕರ ಸ್ವಭಾವ, ಭಯ-ಭಕ್ತಿಯ ನೋಟ, ಕೃತಜ್ಞತೆಯ ಸಲ್ಲಿಕೆ, ಭವಿಷ್ಯದ ಉತ್ತಮ ಬದುಕಿಗೆ ಹರಕೆ, ಶ್ರಮದ ವಿರಾಮ, ಜೀವನದ ಸಂಭ್ರಮ, ಮಾನಸಿಕ-ದೈಹಿಕ ಆರೋಗ್ಯ ರಕ್ಷಣೆ, ಕೌಟುಂಬಿಕ ಮತ್ತು ಸಾಮಾಜಿಕ ಬಂಧುತ್ವದ ಆಶಯ, ವ್ಯವಸ್ಥಿತ ಸಾಮಾಜಿಕ ಜೀವನ ದೃಷ್ಟಿ, ಕೃಷಿಸಂಸ್ಕೃತಿಯ ಕಾಲಬದ್ಧ ನಿರ್ವಹಣೆ ಮತ್ತು ಮುಂದುವರಿಕೆ, ಪರಿಸರ ಸಂರಕ್ಷಣೆ, ಭೂಮಿಮೇಲಿನ ಹಕ್ಕು ಚಲಾವಣೆ, ನ್ಯಾಯಾನ್ಯಾಯಗಳ ತೀರ್ಮಾನ-ಹೀಗೆ ಅನೇಕ ಕಾರಣಗಳಿಗಾಗಿ ತುಳುನಾಡಿನ ಆಚರಣೆಗಳು ವಾರ್ಷಿಕ ಆವರ್ತನದ ರೂಪದಲ್ಲಿ ಆಚರಿಸಲ್ಪಡುವುದು ಕಂಡುಬರುತ್ತದೆ. ಅಂದರೆ ಇಲ್ಲಿನ ಪ್ರಾದೇಶಿಕ ಪರಿಸರವನ್ನು ಪ್ರಯೋಗಾತ್ಮಕ ನೆಲೆಯಲ್ಲಿ ಗಮನಿಸಿದ ಇಲ್ಲಿನ ಮೂಲನಿವಾಸಿಗಳು ಆ ಮೂಲಕ ತಮ್ಮ ಜೀವನ ವಿಧಾನವನ್ನು ರೂಪಿಸಿಕೊಂಡಿದ್ದಾರೆ. ಮುಖ್ಯವಾಗಿ ಕುಟುಂಬ-ಸಂಸಾರ, ನೆರೆ-ಹೊರೆ, ಬಂಧು-ಬಳಗ ಮತ್ತು ಆಪ್ತೇಷ್ಟರನ್ನು ಒಂದುಗೂಡಿಸುವ ವಿಶಿಷ್ಟ ಶಕ್ತಿ ತುಳುನಾಡಿನ ವಾರ್ಷಿಕ ಆವರ್ತನದ ಆಚರಣೆಗಳಿಗಿರುವುದು ವಿಶೇಷವಾಗಿ ಗಮನ ಸೆಳೆಯುತ್ತದೆ. ಮಾತ್ರವಲ್ಲ, ಆವರ್ತನದ ಆಚರಣೆಗಳ ಸುಗಮ ನಿರ್ವಹಣೆಯಲ್ಲಿ ತುಳುನಾಡಿನ ಮಹಿಳೆಯರ ಪಾತ್ರ ಗಮನಾರ್ಹವಾಗಿ ಕಂಡುಬರುತ್ತದೆ. ಆಚರಣೆ-ಆರಾಧನೆ, ನಂಬಿಕೆ-ನಡವಳಿಕೆ, ಭಕ್ತಿ-ಶ್ರದ್ಧೆ, ಪ್ರೀತಿ-ವಿಶ್ವಾಸ ಮೊದಲಾದವುಗಳಲ್ಲಿ ಮಹಿಳೆಯರು ವಿಶೇಷವಾಗಿ ಆಸಕ್ತರಿರುವುದನ್ನು ಕಂಡುಕೊಳ್ಳಲಾಗಿದೆ. ಈ ಎಲ್ಲ ನೆಲೆಯಲ್ಲಿ ಹೇಳುವುದಾದರೆ ತುಳುನಾಡಿನ ವಾರ್ಷಿಕ ಆವರ್ತನದ ಒಂದೊಂದು ಆಚರಣೆಗಳೂ ಒಂದರೊಡನೊಂದು ಆಂತರಿಕ ಸಂಬಂಧವನ್ನು ಹೊಂದಿವೆ.

ಹೊಸವರ್ಷಾಚರಣೆಯ 'ಬಿಸುಪರ್ಬ' ಆಚರಣೆಯಲ್ಲಿ ಸಂಭ್ರಮದ ಜೊತೆಗೆ ಭವಿಷ್ಯದ ಒಳಿತಿಗಾಗಿ ಹರಕೆಯ ಆಶಯವಿದ್ದು, ಬೀಜ ಬಿತ್ತನೆಯ ಮೂಲಕ ಸೃಷ್ಟಿ ಸಂಸ್ಕೃತಿಯ ಮುಂದುವರಿಕೆಯ ಸಾಂಕೇತಿಕತೆಯಿದೆ. ಜೊತೆಗೆ ತುಳುನಾಡಿನ ಆಡಳಿತ ಹಿನ್ನೆಲೆಯಲ್ಲಿ ಜಮೀನ್ದಾರಿ ಪದ್ಧತಿಯ ಕಾಲದ ಧಣಿಗಳಿಗೆ ಒಕ್ಕಲಿಗ ಕಾಣಿಕೆ ಸಲ್ಲಿಸುವ ವಿಚಾರ ಈ ಆಚರಣೆಯಲ್ಲಿ ಥಳಕು ಹಾಕಿಕೊಂಡಿದೆ.

'ಪತ್ತನಾಜೆ' ಆಚರಣೆ ಇದರ ಮುಂದುವರಿಕೆಯಾಗಿ ಕೆಲಸ ನಿರ್ವಹಿಸುತ್ತದೆ. ಕ್ಷೇತ್ರ ರಕ್ಷಕ ಅಮೂರ್ತ ಶಕ್ತಿಗಳೆಂದು ನಂಬುವ ದೈವ-ನಾಗಗಳಿಗೆ ಸೇವೆ ಸಲ್ಲಿಸಿ ಮುಂದಿನ ಅನನುಕೂಲಕರ ವಾತಾವರಣದ ಮಳೆಗಾಲದಲ್ಲಿ ಜನ-ಜಾನುವಾರು-ಬೆಳೆ-ಬೇಸಾಯ ಇತ್ಯಾದಿಗಳನ್ನು ರಕ್ಷಿಸುವಂತೆ ಬೇಡಿಕೊಳ್ಳುವ ಆಶಯದೊಂದಿಗೆ ಅತ್ಯಂತ ಭಯ ಭಕ್ತಿಯಿಂದ ಕಾಲಾವಧಿ ಕರ್ತವ್ಯ ನಿರ್ವಹಿಸುವ ವಿಚಾರ ಕಂಡುಬರುತ್ತದೆ.

'ಆಟಿ ಅಮಾವಾಸ್ಯೆ' ಆಚರಣೆಯಲ್ಲಿ ಋತು ಆವರ್ತನ ಮತ್ತು ಕೃಷಿ ಆವರ್ತನದ ಹಿನ್ನೆಲೆಯಲ್ಲಿ ಪ್ರಕೃತಿ ವೈರುಧ್ಯಗಳನ್ನು ಎದುರಿಸಲು ಪ್ರಕೃತಿ ಚಿಕಿತ್ಸೆಯ ವೈದ್ಯಕೀಯ ಪರಿಹಾರವನ್ನು ಕಂಡುಕೊಳ್ಳುವ ಜನಪದರ ವೈಜ್ಞಾನಿಕ ದೃಷ್ಟಿ ಗೋಚರಿಸುತ್ತದೆ.

'ನಾಗರಪಂಚಮಿ'ಯಲ್ಲಿ ವಿಶೇಷವಾಗಿ ನಾಗ ಸಂಬಂಧಿ ಭಯ ಭಕ್ತಿಯ ಹಿನ್ನೆಲೆಯಲ್ಲಿ ಆರಾಧನಾ ಪ್ರಕ್ರಿಯೆಗಳು ನಡೆಯುತ್ತವೆ. ನಾಗಾರಾಧನೆ ಮೂಲತಃ ತುಳುನಾಡಿನ ಆಚರಣೆಯಾಗಿದ್ದರೂ ಇದರ ಮೇಲೆ ವೈದಿಕ ಸಂಸ್ಕೃತಿಯ ಪ್ರಭಾವ ಬಹಳಷ್ಟು ಆಗಿದ್ದು, ಅದು ಇಲ್ಲಿ ಸ್ವೀಕೃತವಾಗಿರುವುದು ಗಮನಾರ್ಹವಾಗಿದೆ.

'ಕುರಲ್‌ಪರ್ಬ' ಆಚರಣೆ ಭತ್ತಬೇಸಾಯ ಸಂಸ್ಕೃತಿಯ ಅತ್ಯಂತ ಮಹತ್ವದ ಹಬ್ಬವಾಗಿದೆ. ಬಿತ್ತನೆ ಮಾಡಿದ ಬೀಜ ವಾತಾವರಣದ ಕೃಪೆ ಮತ್ತು ಅವಕೃಪೆಗಳ ನಡುವೆಯೂ ದೈವ-ನಾಗಾದಿ ಶಕ್ತಿಗಳ ಮೇಲಿನ ನಂಬಿಕೆ ಮತ್ತು ಪ್ರಕೃತಿ ಚಿಕಿತ್ಸಕ ಕ್ರಮದಿಂದ ತೆನೆಕಟ್ಟಿ ನಿಂತಾಗ ಜನಪದರು ಸಂತೋಷ-ಸಂಭ್ರಮ ಮತ್ತು ಕೃತಜ್ಞತೆ ಹಾಗೂ ಸಮೃದ್ಧಿಯನ್ನು ಮನೆತುಂಬಿಸಿಕೊಳ್ಳುವ ದ್ಯೋತಕವಾಗಿ ಈ ಆಚರಣೆ ಅರ್ಥ ಪಡೆದುಕೊಳ್ಳುತ್ತದೆ.

'ಪುದ್ವಾರ್' ಆಚರಣೆ 'ಕುರಲ್‌ಪರ್ಬ' ಆಚರಣೆಯ ಒಂದು ಭಾಗವೇ ಆಗಿದೆ. ಹಿಂದೆ ಮೂಲತಃ ಇವೆರಡೂ ಆಚರಣೆಗಳನ್ನು ಒಂದೇ ದಿನ ಆಚರಿಸಲಾಗುತ್ತಿತ್ತು. ವರ್ಷದ ಮೊದಲ ಬೆಳೆಯಾದ 'ಏಣೇಲು' ಬೆಳೆಯ ಅನ್ನವನ್ನು ಜನಪದರು ತಾವು ಸ್ವೀಕರಿಸುವ ಮೊದಲು ಧಾರ್ಮಿಕ ಭಕ್ತಿ ಶ್ರದ್ಧೆಯಿಂದ ಪೂಜಿಸಿ, ತಮ್ಮ ಆರಾಧ್ಯ ದೈವಗಳಿಗೆ, 'ಕುಲೆ'(ಪಿತೃ)ಗಳಿಗೆ ಸಮರ್ಪಿಸುವ ಕ್ರಮ 'ಪುದ್ವಾರ್' ಆಚರಣೆಯಲ್ಲಿದೆ. ಭತ್ತ ಇಲ್ಲವೆ ಅಕ್ಕಿಗೆ ಹಾಗೂ ಇದರ ಉತ್ಪನ್ನಗಳಿಗೆ ತುಳುಜನಪದರು ದೈವತ್ವದ ಸ್ಥಾನ ಕಲ್ಪಿಸಿರುವುದು 'ಪುದ್ವಾರ್' ಆಚರಣೆಯಿಂದ ತಿಳಿದು ಬರುತ್ತದೆ.

'ನಿರ್ನಾಲ' ತಿಂಗಳ ಕೊನೆಯ ದಿನ ಅಂದರೆ ಸಂಕ್ರಾಂತಿಯಂದು ನಡೆಯುವ 'ಕಾವೊರಿ ಸಂಕ್ರಾಂತಿ' ಆಚರಣೆಯಲ್ಲಿ ಭತ್ತದ ಬೇಸಾಯವನ್ನು ಮುಂದುವರಿಸಿಕೊಂಡು ಹೋಗುವ ನೆಲೆಯಲ್ಲಿ ಬಿತ್ತನೆ ಬೀಜದ ಸಂರಕ್ಷಣೆಯ ಪರಿಕಲ್ಪನೆಯಿದೆ; ಮತ್ತು 'ಏಣೇಲು' ಬೇಸಾಯದ ಭತ್ತದ ರಕ್ಷಣೆಯ ಹಿನ್ನೆಲೆಯ ಸಾಂಕೇತಿಕತೆಯಿದೆ.

'ಪರ್ಬ' ಆಚರಣೆಯು ಕೃಷಿ ಮತ್ತು ಜಾನುವಾರುಗಳಿಗೆ ಸಂಬಂಧಿಸಿದ ಮಹತ್ವದ ಜಾನಪದ ಆಚರಣೆ. ಜೊತೆಗೆ ತುಳುನಾಡಿನ ಜನಾನುರಾಗಿ ಚಕ್ರವರ್ತಿಯಾಗಿದ್ದ ಎನ್ನಲಾದ 'ಬಲಿ'ಗೆ ಸಂಬಂಧಿಸಿದ ಕಥೆ ಈ ಆಚರಣೆಯಲ್ಲಿ ಸೇರಿಕೊಂಡಿದೆ. ಹಾಗಾಗಿ ಚಾರಿತ್ರಿಕ ಅಂಶಗಳು

'ಪರ್ಬ' ಆಚರಣೆಯ ಒಡಲಲ್ಲಿ ಪ್ರಕಟವಾಗುತ್ತವೆ. ದೀಪಾವಳಿಯಂದೇ 'ಪರ್ಬ' ಆಚರಣೆ ನಡೆಯುತ್ತದೆಯಾದರೂ 'ಪರ್ಬ' ಆಚರಣೆಯ ಪರಿಕಲ್ಪನೆ ತೀರ ಜಾನಪದ ಮೂಲದ್ದಾಗಿದೆ.

'ಕೆಡ್ಡಸ' ಆಚರಣೆ ತುಳುನಾಡಿನ ವಾರ್ಷಿಕ ಆವರ್ತನದ ಆಚರಣೆಗಳಲ್ಲಿ ಅತ್ಯಂತ ವಿಶಿಷ್ಟವಾದುದು. ತುಳುಜನಪದರಿಗೆ ಪ್ರಕೃತಿಯೊಂದಿಗಿನ ಅನ್ಯೋನ್ಯತೆ 'ಕೆಡ್ಡಸ' ಆಚರಣೆಯ ಮೂಲಕ ಅಭಿವ್ಯಕ್ತವಾಗುತ್ತದೆ. ಭೂಮಿಯನ್ನು ಒಂದು ಹೆಣ್ಣು ಎಂದು ಪರಿಗಣಿಸಿರುವ ತುಳುವರು ಆಕೆ ಫಲವತಿಯಾಗುವ ಕಾಲಸಂದರ್ಭದ ಆಚರಣೆಯನ್ನಾಗಿ 'ಕೆಡ್ಡಸ'ವನ್ನು ಆಚರಿಸುತ್ತಾರೆ.

ಒಟ್ಟಿನಲ್ಲಿ ತುಳುನಾಡಿನ ವಾರ್ಷಿಕ ಆವರ್ತನದ ಆಚರಣೆಗಳು ಇಲ್ಲಿನ ಜೀವನಾವಶ್ಯಕ ಕಸುಬಾದ ಬೇಸಾಯದ ಪೋಷಕ ಸಂಸ್ಕೃತಿಗಳಾಗಿವೆ. ಅಂದರೆ ಈ ಆಚರಣೆಗಳ ಮೂಲಕ ತುಳುನಾಡಿನ ವಿಶಿಷ್ಟ ಸಂಸ್ಕೃತಿಯ ಪರಿಚಯವಾಗುತ್ತದೆ. ಆಚರಣೆಗಳ ನೆಪದಲ್ಲಾದರೂ ಅಲ್ಪ ಸ್ವಲ್ಪ ಭತ್ತ ಬೇಸಾಯ ಸಂಸ್ಕೃತಿ ಉಳಿದುಕೊಂಡಿದೆ. ಇದರ ಜೊತೆಗೆ ಮುಖ್ಯವಾಗಿ ತುಳುಜನಪದರ ಧಾರ್ಮಿಕ ಭಕ್ತಿ, ಕಲೆ, ಸಾಹಿತ್ಯ, ನಂಬಿಕೆ, ಜನಪದ ಆಟ–ವಿನೋದ, ಪರಿಸರ ಪ್ರೀತಿ ಮತ್ತು ತುಳು ಭಾಷೆಯ ಸೊಗಡು–ಇತ್ಯಾದಿ ಆವರ್ತನದ ಆಚರಣೆಗಳ ಮೂಲಕ ಪ್ರಕಟವಾಗುತ್ತವೆ; ಮಾತ್ರವಲ್ಲ, ಮುಂದುವರಿದುಕೊಂಡು ಬರುತ್ತಿರುವುದು ಗಮನಾರ್ಹ ಸಂಗತಿ.

## ೧೪.೨: ಅಧ್ಯಯನದ ಮುಂದಿನ ಸಾಧ್ಯತೆಗಳು

ಕೆಲವೊಂದು ಅಧ್ಯಯನದ ಮಿತಿಗಳಿಂದಾಗಿ ತುಳುನಾಡನ್ನು ಒಂದು ಪ್ರಾದೇಶಿಕ ಘಟಕವೆಂದು ಕೇಂದ್ರೀಕರಿಸಿ ತುಳುನಾಡಿನ ವಾರ್ಷಿಕ ಆವರ್ತನದ ಆಚರಣೆಗಳನ್ನು ಮಾತ್ರ ಇಲ್ಲಿ ಅಧ್ಯಯನ ಮಾಡಲಾಗಿದೆ. ಹಾಗಾಗಿ ಈ ಅಧ್ಯಯನದ ಮುಂದುವರಿಕೆಯ ನೆಲೆಯಲ್ಲಿ

ಮೊದಲನೆಯದಾಗಿ ತುಳುನಾಡಿನ ಆವರ್ತನದ ಆಚರಣೆಗಳನ್ನು ಇಲ್ಲಿನ ವಿವಿಧ ಜನಾಂಗಗಳನ್ನು ಕೇಂದ್ರೀಕರಿಸಿ, ಪ್ರತಿಯೊಂದು ಜನಾಂಗದ ವಾರ್ಷಿಕ ಆವರ್ತನದ ಆಚರಣೆಗಳೆಂದು ಸಾಂಸ್ಕೃತಿಕ ಅಧ್ಯಯನ ಮಾಡಲು ಅವಕಾಶವಿದೆ.

ಎರಡನೆಯದಾಗಿ, ತುಳುನಾಡಿನ ಆವರ್ತನದ ಆಚರಣೆಗಳನ್ನು ಕರ್ನಾಟಕದ ಇತರ ಪ್ರಾದೇಶಿಕ ವಾರ್ಷಿಕ ಆವರ್ತನದ ಆಚರಣೆಗಳೊಂದಿಗೆ ತೌಲನಿಕ ನೆಲೆಯಲ್ಲಿಯೂ ಅಧ್ಯಯನ ಮಾಡಬಹುದಾಗಿದೆ.

ಮೂರನೆಯದಾಗಿ, ತುಳುನಾಡಿನ ಪ್ರತಿಯೊಂದು ಆವರ್ತನದ ಆಚರಣೆಗಳನ್ನೂ ಬಿಡಿಬಿಡಿಯಾಗಿ ಆಳವಾಗಿ ಅಧ್ಯಯನ ಮಾಡಲು ಪ್ರಯತ್ನಿಸಬಹುದಾಗಿದೆ. ಅಷ್ಟರಮಟ್ಟಿಗೆ ಆವರ್ತನದ ಆಚರಣೆಗಳಲ್ಲಿ ಸಾಂಸ್ಕೃತಿಕತೆ ಹರಳುಗಟ್ಟಿದೆ.

ನಾಲ್ಕನೆಯದಾಗಿ, ತುಳುನಾಡಿನ ಸಾಂಸ್ಕೃತಿಕ ಇತಿಹಾಸದ ಪುನರ್‌ರಚನೆಯ ಸಂದರ್ಭದಲ್ಲಿ ಈ ಆವರ್ತನದ ಆಚರಣೆಗಳಲ್ಲಿಯ ಮಾಹಿತಿಗಳನ್ನು ಆಕರವನ್ನಾಗಿ ಪರಿಗಣಿಸಬಹುದು.

ಐದನೆಯದಾಗಿ, ತುಳುನಾಡಿನ ಸಂಸ್ಕೃತಿಯ ವಿವಿಧ ಶಾಖೆಗಳಾದ ವಾಸ್ತುಕಲೆ, ಚಿತ್ರಕಲೆ, ಶಿಲ್ಪಕಲೆ, ವರ್ಣಕಲೆ, ಜಾನಪದ ಕುಣಿತಗಳು, ಜಾನಪದ ಆಟಗಳು, ವಿವಿಧ ಜನಾಂಗಗಳು, ತುಳುಭಾಷೆ, ತುಳುನಾಡಿನ ಭೌತಿಕ ವಸ್ತುವೈವಿಧ್ಯಗಳು, ತುಳುನಾಡಿನ ಸಾಮಾಜಿಕ ಜೀವನ ಪದ್ಧತಿ–ಮುಂತಾದ ವಿಷಯಗಳಿಗೆ ಸಂಬಂಧಿಸಿದ ಅಧ್ಯಯನಗಳಿಗೆ ಈ ಆವರ್ತನದ ಆಚರಣೆಗಳಲ್ಲಿಯ ಮಾಹಿತಿಗಳು ಆಕರಗಳಾಗಬಹುದು.

ಆರನೆಯದಾಗಿ, ತುಳುನಾಡಿನ ಜನಾಂಗಗಳ ಜೀವನಾವರ್ತನ ಆಚರಣೆಗಳಿಗೂ ವಾರ್ಷಿಕ ಆವರ್ತನದ ಆಚರಣೆಗಳಿಗೂ ನಡುವಿನ ಸಂಬಂಧಗಳ ಕುರಿತಾದ ಅಧ್ಯಯನಗಳಿಗೆ ಈ ಆವರ್ತನದ ಆಚರಣೆಗಳು ಸಹಕಾರಿಯಾಗಬಹುದು.

ಕೊನೆಯದಾಗಿ, ವಿಶೇಷವಾಗಿ ವಿಜ್ಞಾನದ ವಿದ್ಯಾರ್ಥಿಗಳು ತುಳುನಾಡಿನ ಆಚರಣೆಗಳ ಸಸ್ಯಶಾಸ್ತ್ರೀಯ ಅಧ್ಯಯನವನ್ನು ಮಾಡಲು ಒಳ್ಳೆಯ ಅವಕಾಶವಿದೆ.

■■■

# ಅನುಬಂಧ

೧. ಛಾಯಾಚಿತ್ರಗಳು

೨. ಸಂಶೋಧನ ಪ್ರಶ್ನಾವಳಿ

೩. ಮಾಹಿತಿದಾರರ ಹೆಸರು ಮತ್ತು ವಿಳಾಸ

೪. ಪರಾಮರ್ಶನ ಗ್ರಂಥಸೂಚಿ

# ೧.೧: 'ಬಿಸುಪರ್ಬ' (ಸೌರಮಾನ ಯುಗಾದಿ)


೧.೧.೧: 'ಅಪ್ಪರೆ ಪಾಡುನ' (ಅಪ್ಪರೆ ಹಾಕುವುದು)


೧.೧.೨: ಗದ್ದೆ ಉಳುವ ರೈತ
(ಕೃಪೆ: ಡಾ.ಎಸ್.ಎ. ಕೃಷ್ಣಯ್ಯ, ಉಡುಪಿ)


೧.೧.೩: 'ಕೈ ಬಿತ್ತ್ ದೀಪುನ' (ಬೀಜ ಬಿತ್ತನೆ)


೧.೧.೪: ಹಟ್ಟಿಯ ಅಟ್ಟದಲ್ಲಿ ನೇತು ಹಾಕಿರುವ 'ನೆಕ್ಕಿ ಕೋಲು'

## ೧.೨: 'ಪತ್ತನಾಜೆ'



೧.೨.೧: ಭೂತದ ಪದೊಲಿ (ಮಣೆಮಂಚ)
(ಕೃಪೆ: ಡಾ.ಎಸ್.ಎ. ಕೃಷ್ಣಯ್ಯ, ಉಡುಪಿ)



೧.೨.೨: ಭೂತದ ಪದೊಲಿ (ಮಣೆಮಂಚ)
(ಕೃಪೆ: ಡಾ.ಎಸ್.ಎ. ಕೃಷ್ಣಯ್ಯ, ಉಡುಪಿ)



೧.೨.೩: ಭೂತಕ್ಕೆ 'ಬಾರಣೆ' (ಆಹಾರ)
(ಕೃಪೆ: ಡಾ.ಎಸ್.ಎ. ಕೃಷ್ಣಯ್ಯ, ಉಡುಪಿ)



೧.೨.೪: ಭೂತ ಕೋಲ–ಒಂದು ನೋಟ
(ಕೃಪೆ: ಡಾ.ಎಸ್.ಎ. ಕೃಷ್ಣಯ್ಯ, ಉಡುಪಿ)



೧.೨.೫: ಭೂತ ಕೋಲ–ಒಂದು ನೋಟ
(ಕೃಪೆ: ಡಾ.ಎಸ್.ಎ. ಕೃಷ್ಣಯ್ಯ, ಉಡುಪಿ)

# ೧.೩: 'ಆಟಿ ಅಮಾವಾಸ್ಯೆ'



೧.೩.೧: ಹಾಲೆ ಮರದಿಂದ ತೊಗಟೆ ಸಂಗ್ರಹಿಸುತ್ತಿರುವ ಮಹಿಳೆ



೧.೩.೨: ಹಾಲೆ ಮರದ ತೊಗಟೆ ಮತ್ತು ಬೆಣಚು ಕಲ್ಲು



೧.೩.೩: ಹಾಲೆ ಗಿಡ



೧.೩.೪: ಗೊಬ್ಬರದ ರಾಶಿಗೆ ಕುತ್ತಿರುವ 'ಕಳೆ'



೧.೩.೫: ಸೌತೆ ಬಳ್ಳಿಗೆ ಕುತ್ತಿರುವ 'ಕಳೆ'



೧.೩.೬: ವೀಳ್ಯದ ಬಳ್ಳಿಯಲ್ಲಿ 'ಕಳ್ಳಿ'



೧.೩.೭: ಅಲಸಂಡೆ ಬಳ್ಳಿಯಲ್ಲಿ 'ಕಳ್ಳಿ'



೮: ಗದ್ದೆಗೆ 'ಕಳ್ಳಿ' ಮತ್ತು ಕಾಸರ್ಕನ ಗೆಲ್ಲು ಕುತ್ತಿರುವುದು



೧.೩.೯: ಗದ್ದೆಯಲ್ಲಿ ಕುತ್ತಿರುವ 'ಕಾಪು'



೧.೩.೧೦: 'ಆಟಿ ಕಳೆಂಜ' (ಕೃಪೆ: ಡಾ.ಎಸ್.ಎ. ಕೃಷ್ಣಯ್ಯ, ಉಡುಪಿ)

## ೧.೪: 'ನಾಗರ ಪಂಚಮಿ'



೧.೪.೧: ನಾಗನ ಕಟ್ಟೆ
(ಕೃಪೆ: ಡಾ.ಎಸ್.ಎ. ಕೃಷ್ಣಯ್ಯ, ಉಡುಪಿ)



೧.೪.೨: ನಾಗ ಮಂಡಲ
(ಕೃಪೆ: ಡಾ.ಎಸ್.ಎ. ಕೃಷ್ಣಯ್ಯ, ಉಡುಪಿ)



೧.೪.೩: ನಾಗ ಮಂಡಲ
(ಕೃಪೆ: ಡಾ.ಎಸ್.ಎ. ಕೃಷ್ಣಯ್ಯ, ಉಡುಪಿ)



೧.೪.೪: ನಾಗ ನೃತ್ಯ
(ಕೃಪೆ: ಡಾ.ಎಸ್.ಎ. ಕೃಷ್ಣಯ್ಯ, ಉಡುಪಿ)



೧.೪.೫ : ನಾಗ ದರ್ಶನ
(ಕೃಪೆ: ಡಾ.ಎಸ್.ಎ. ಕೃಷ್ಣಯ್ಯ, ಉಡುಪಿ)



೧.೪.೬: ಅವೈದಿಕರ ನಾಗಾರಾಧನಾ ಕ್ರಮ
(ಕೃಪೆ: ಆರ್.ಆರ್.ಸಿ. ಉಡುಪಿ)



೧.೪.೭: ಅವೈದಿಕರ ನಾಗಾರಾಧನೆಯ ಸಂದರ್ಭ
(ಕೃಪೆ: ಆರ್.ಆರ್.ಸಿ. ಉಡುಪಿ)



೧.೪.೮: ಅವೈದಿಕರ ನಾಗಾರಾಧನೆ–'ಎರುಕೋಲ'
(ಕೃಪೆ: ಆರ್.ಆರ್.ಸಿ. ಉಡುಪಿ)



೪.೯: ಅವೈದಿಕರ ನಾಗಾರಾಧನೆ–ಒಂದು ನೋಟ
(ಕೃಪೆ: ಆರ್.ಆರ್.ಸಿ. ಉಡುಪಿ)



೧.೪.೧೦: ಅವೈದಿಕರ ನಾಗದರ್ಶನ
(ಕೃಪೆ: ಆರ್.ಆರ್.ಸಿ. ಉಡುಪಿ)


೧.೪.೧೧: ನಾಗಾರಾಧನೆ–ತಿಗಣೆ ಕೋಲ
(ಕೃಪೆ: ಆರ್.ಆರ್.ಸಿ. ಉಡುಪಿ)


೧.೪.೧೨: ನಾಗದರ್ಶನ
(ಕೃಪೆ: ಆರ್.ಆರ್.ಸಿ. ಉಡುಪಿ)


೧.೪.೧೩: ನಾಗಾರಾಧನೆ
(ಕೃಪೆ: ಆರ್.ಆರ್.ಸಿ. ಉಡುಪಿ)


೧.೪.೧೪: ನಾಗಾರಾಧನೆಯ ಒಂದು ನೋಟ
(ಕೃಪೆ: ಆರ್.ಆರ್.ಸಿ. ಉಡುಪಿ)


೧.೪.೧೫: ಕುದುರೆ ಕೋಲ
(ಕೃಪೆ: ಡಾ.ಎಸ್.ಎ. ಕೃಷ್ಣಯ್ಯ, ಉಡುಪಿ)

# ೧.೫: 'ಕುರಲ್ ಪರ್ಬ' (ಕದಿರು ಹಬ್ಬ)


೧.೫.೧: ಸಸ್ಯ ಸಂಪತ್ತಿನೊಂದಿಗೆ ಭತ್ತದ ತೆನೆ


೧.೫.೨: ಭತ್ತದ ತೆನೆಗೆ ನಮಸ್ಕರಿಸುತ್ತಿರುವುದು
(ಕೃಪೆ: ಡಾ. ಎಸ್. ಎ. ಕೃಷ್ಣಯ್ಯ, ಉಡುಪಿ)


೧.೫.೩: 'ಇಟ್ಟೊವು' ಗಿಡಗಳು


೧.೫.೪: 'ನೈಕಂರ್ಬು' ಗಿಡ


೧.೫.೫: ರಥ ಹೂವು


೧.೫.೬: ಮಾವಿನ ಎಲೆ



೧.೫.೭: ಹಲಸಿನ ಎಲೆ



೧.೫.೮: 'ಪೊಲಿಬಲ್ಲ್'



೧.೫.೦೯: ಅಟ್ಟಕ್ಕೆ ಕಟ್ಟಿರುವ 'ಕುರಲ್'



೧.೫.೧೦: ತೆನೆಯಿಂದ ಮಾಡಿರುವ ಕಲಾಕೃತಿ



೧.೫.೧೧: ದೇವರ ಗುಡಿಯಲ್ಲಿ 'ಕುರಲ್'



೧.೫.೧೨: 'ಇಲ್ಲ್ ಬೂರು'

# ೧.೬: 'ಪುದ್ವಾರ್' (ಹೊಸ ಅಕ್ಕಿ ಊಟ)



೧.೬.೧: 'ಪುದ್ವಾರ್'–ಪಿತೃಗಳಿಗೆ 'ಅಗೆಲು'



೧.೬.೨: ಸಿದ್ಧಗೊಂಡ 'ಪುದ್ವಾರ್' ಊಟ



.೬.೩: ಚಿತ್ತಾರ ಬಿಡಿಸಿರುವ 'ಪುದ್ವಾರ್' ಅನ್ನ ಬೇಯಿಸುವ ಮಡಕೆ



೧.೬.೪: 'ಪುದ್ವಾರ್' ಪದಾರ್ಥದ ಮಡಕೆ



೧.೬.೫: 'ಕರಿ ಕೆಸು'



೧.೬.೬: 'ಪುದ್ವಾರ್' ಮರದ ಸೌಟು

# ೧.೭: 'ಕಾವೊರಿ ಸಂಕ್ರಾಂತಿ' (ಕಾವೇರಿ ಸಂಕ್ರಮಣ)



೧.೭.೧: ಭತ್ತದ ರಾಶಿಗೆ 'ಕಲ್ಲು-ಮುಳ್ಳು-ವಿಭೂತಿ'



೧.೭.೨: 'ಬಿತ್ತ್‌ದ ಮುಡಿ' (ಬಿತ್ತನೆ ಬೀಜದ ಮುಡಿ)

# ೧.೮: 'ಪರ್ಬ' (ದೀಪಾವಳಿ)



೧.೮.೧: 'ಬಿಲಕ್ಕಿ ಮರ'
(ಬಲೀಂದ್ರ ಮರ)



೧.೮.೨: ನೊಗ ನೇಗಿಲು ಪೂಜೆ



೧.೮.೩: ಗೋಪೂಜೆ



೧.೮.೪
'ನಿಗ' (ನೊಗ)



೧.೮.೫
'ನಾಯೆರ್' (ನೇಗಿಲು)



೧.೮.೬
'ಸೇರ್' (ಸೇರು)



೧.೮.೭
'ಕಲಸೆ'



೧.೮.೮
'ಬಸ್ ಮುಳ್ಳು'



೧.೮.೯
'ಪರ್ದತ್ತಿ' (ಪೈರು ಕೊಯ್ಯುವ ಕತ್ತಿ)



೧.೮.೧೦
'ಮಿಜ'



೧.೮.೧೧
'ಪಿಕ್ಕಾಸ್'



೧.೮.೧೪: 'ಕೈಪಲು'



೧.೮.೧೨
'ಕೊಟ್ಟು' (ಹಾರೆ)



೧.೮.೧೫: 'ಸಬ್ಬಲ್'



೧.೮.೧೬: 'ಉಜ್ಜೆರ್' (ಒನಕೆ)



೧.೮.೧೩
'ಮುಡಿ ಕೊದಂಟಿ'



೧.೮.೧೭: 'ಮೊಟ್ಟೆ ಪಲಾಯಿ' (ಹಲಗೆ)

# ೧.೯: 'ಕೆಡ್ಡಸ'



೧.೯.೧: ಭೂಮಿಗೆ ಎಣ್ಣೆ ಹೊಯ್ಯುತ್ತಿರುವುದು



೧.೯.೨: ಭೂಮಿಗೆ ಎಣ್ಣೆ ಹೊಯ್ದಿರುವ ನೋಟ

# ೧.೧೦: ಇತರ



೧.೧೦.೧: ಗದ್ದೆಗೆ 'ತರೊಳಿ ಕಣೆ'
(ಸುಗ್ಗಿ ಬೆಳೆಗೆ)



೧.೧೦.೨: ಗದ್ದೆಗೆ 'ಮುಂಡೆವು'
(ಕೊಳಕೆ ಬೆಳೆಗೆ)



೧.೧೦.೩: ಭತ್ತದ 'ತುಪ್ಪೆ'



೧.೧೦.೪: ಭತ್ತದ ಕಟಾವು



೧.೧೦.೫: ಗದ್ದೆಯಲ್ಲಿ 'ಪೂಕರೆ' ಹಾಕಿರುವುದು



೧.೧೦.೬: ಕೋಳಿ ಅಂಕ



೧.೧೦.೭: ಕಂಬಳದ ಕೋಣಗಳು



೧.೧೦.೮: ಕಂಬಳದ ದೃಶ್ಯ



.೧೦.೯: ನೇಗಿಲು ತಯಾರಿಸುತ್ತಿರುವ ಕುಶಲಕರ್ಮಿ



೧.೧೦.೧೦: ದುಡಿ ನಲಿಕೆ

## ೨. ಸಂಶೋಧನ ಪ್ರಶ್ನಾವಳಿ

**ಮಾಹಿತಿದಾರನ ಹೆಸರು:**
**ಲಿಂಗ:** **ವಯಸ್ಸು:** **ಜಾತಿ:**
**ಉದ್ಯೋಗ:**
**ವಿಳಾಸ:**
**ದೂರವಾಣಿ ಸಂಖ್ಯೆ:**
**ಮಾಹಿತಿ ನೀಡಿದ ದಿನಾಂಕ, ಸಮಯ, ಸ್ಥಳ:**

**ಪ್ರಶ್ನೆಗಳು**

೧. ಆಚರಣೆಗಳು ಎಂದರೇನು? ಧಾರ್ಮಿಕ ಆಚರಣೆಗಳ ಬಗ್ಗೆ ನಿಮಗೆ ಒಲವು ಇದೆಯಾ?

೨. ಒಂದು ವರ್ಷದಲ್ಲಿ ನೀವು ಯಾವ ಯಾವ ಧಾರ್ಮಿಕ ಆಚರಣೆಗಳನ್ನು ಆಚರಿಸುತ್ತೀರಿ?

೩. ನೀವು ಆಚರಿಸುವ ಈ ಆಚರಣೆಗಳ ಆಶಯ ಮತ್ತು ಉದ್ದೇಶಗಳೇನು?

೪. ....................................ಹಬ್ಬವನ್ನು ನೀವು ಆಚರಿಸುತ್ತೀರಾ?

೫. ಹಾಗಾದರೆ...........................ಹಬ್ಬ ಎಂದರೇನು? ಇದರ ಆಶಯವೇನು?

೬. ಈ ಹಬ್ಬವನ್ನು ಯಾವಾಗ ಆಚರಿಸುತ್ತೀರಿ?

೭. ಈ ಆಚರಣೆಯಲ್ಲಿ ಯಾವುದನ್ನು (ಪ್ರಕೃತಿ, ದೈವ, ದೇವರು, ಹಿರಿಯರು) ಪೂಜಿಸಲಾಗುತ್ತದೆ?

೮. ಈ ಆಚರಣೆಯ ವಿಧಿವಿಧಾನಗಳು ಹೇಗೆ?

೯. ಈ ಆಚರಣೆಯಲ್ಲಿ ಬಳಸುವ ವಸ್ತು ಪರಿಕರಗಳು ಯಾವುವು?

೧೦. ಈ ವಸ್ತುಗಳನ್ನು ಬಳಸುವುದರ ಔಚಿತ್ಯವೇನು?

೧೧. ಈ ಆಚರಣೆ ದಿನದ ಉಡುಗೆ ತೊಡುಗೆ ಮತ್ತು ಅಡುಗೆ ವಿಶೇಷಗಳೇನು?

೧೨. ಈ ಆಚರಣೆಗೆ ಸಂಬಂಧಿಸಿದಂತೆ ಗಾದೆಮಾತುಗಳು ಇವೆಯಾ?

೧೩. ಇದಕ್ಕೆ ಸಂಬಂಧಿಸಿದ ಪಾಡ್ದನ ಸಾಹಿತ್ಯ ಏನಾದರೂ ಇದೆಯಾ?

೧೪. ಇದಕ್ಕೆ ಸಂಬಂಧಿಸಿದ ಲಿಖಿತ ಸಾಹಿತ್ಯ ಏನಾದರೂ ಇದೆಯಾ?

೧೫. ಈ ಆಚರಣೆಯ ಸಂದರ್ಭದಲ್ಲಿ ಏನಾದರೂ ವಿಧಿನಿಷೇಧಗಳು ಇವೆಯಾ? ಇದ್ದರೆ ಅದು ಯಾಕೆ?

೧೬. ಈ ಆಚರಣೆಗೆ ಈಗ ಮೊದಲಿನ ಮಹತ್ವ ಇದೆಯಾ? ಇಲ್ಲದಿದ್ದರೆ ಯಾಕಿಲ್ಲ?

೧೭. ಈ ಆಚರಣೆಗೂ ಇತರ ಆಚರಣೆಗೂ ಏನಾದರೂ ಸಂಬಂಧ ಇದೆಯಾ?

**(ಮೇಲಿನ ಪ್ರಶ್ನಾವಳಿಯ ೪ನೆಯ ಪ್ರಶ್ನೆಯ ಬಿಟ್ಟ ಸ್ಥಳದಲ್ಲಿ ಬಿಸುಪರ್ಬ, ಪತ್ತನಾಜೆ, ಆಟಿಅಮಾವಾಸ್ಯೆ, ನಾಗರಪಂಚಮಿ, ಕುರಲ್‌ಪರ್ಬ, ಪುದ್ವಾರ್, ಕಾವೇರಿ ಸಂಕ್ರಾಂತಿ, ಪರ್ಬ, ಕೆಡ್ಡಸ–ಈ ಒಂಬತ್ತು ಆಚರಣೆಗಳಲ್ಲಿ ಯಾವುದಾದರೂ ಒಂದನ್ನು ಮಾತ್ರ ತುಂಬಿಸಿ ಪ್ರಶ್ನೆ ಕೇಳಲಾಗಿದೆ; ಮತ್ತು ಮುಂದಿನ ಎಲ್ಲಾ ಪ್ರಶ್ನೆಗಳನ್ನೂ ೪ನೆಯ ಪ್ರಶ್ನೆಯಲ್ಲಿ ಕೇಳಲಾದ ಆಚರಣೆಗೆ ಸಂಬಂಧಿಸಿದಂತೆ ಕೇಳಲಾಗಿತ್ತು.)**

■■■

## ೩. ಮಾಹಿತಿದಾರರ ಹೆಸರು ಮತ್ತು ವಿಳಾಸ

೧. **ಅಣ್ಣು ಗೌಡ,** ವಯಸ್ಸು-೬೫ವರ್ಷ, ಜಾತಿ-ಒಕ್ಕಲಿಗ ಗೌಡ, ಬಂಡಮುಗುರು ಮನೆ, ಕೋಳ್ನಾಡು ಅಂಚೆ ಮತ್ತು ಗ್ರಾಮ, ಬಂಟ್ವಾಳ ತಾಲೂಕು, ದ.ಕ.

೨. **ಅಣ್ಣು ಪರವ,** ವಯಸ್ಸು-೪೭ವರ್ಷ, ಜಾತಿ-ಪರವ, ಕಲ್ಲಗುಂಡು ಮನೆ, ಕಕ್ಕಿಂಜೆ ಅಂಚೆ, ಚಿಬಿದ್ರೆ ಗ್ರಾಮ, ಬೆಳ್ತಂಗಡಿ ತಾಲೂಕು, ದ.ಕ.

೩. **ಅಣ್ಣು ಪೂಜಾರಿ,** ವಯಸ್ಸು-೮೫ವರ್ಷ, ಜಾತಿ-ಬಿಲ್ಲವ, ಕುದ್ಕೋಳಿ ಮನೆ, ಕೊಯ್ಯೂರು ಅಂಚೆ ಮತ್ತು ಗ್ರಾಮ, ಬೆಳ್ತಂಗಡಿ ತಾಲೂಕು, ದ.ಕ.

೪. **ಓಬಯ್ಯ ಗೌಡ,** ವಯಸ್ಸು-೬೦ವರ್ಷ, ಜಾತಿ-ಒಕ್ಕಲಿಗ ಗೌಡ, ಪಿಲಿಕಜೆ ಮನೆ, ಬಂಗಾಡಿ ಅಂಚೆ, ಇಂದಬೆಟ್ಟು ಗ್ರಾಮ, ಬೆಳ್ತಂಗಡಿ ತಾಲೂಕು, ದ.ಕ.

೫. **ಕಮಲ,** ವಯಸ್ಸು-೫೮ವರ್ಷ, ಜಾತಿ-ಒಕ್ಕಲಿಗ ಗೌಡ, ಕಡೀರ ಮನೆ, ಕೊಕ್ಕಡ ಅಂಚೆ ಮತ್ತು ಗ್ರಾಮ, ಬೆಳ್ತಂಗಡಿ ತಾಲೂಕು, ದ.ಕ.

೬. **ಕಮಲ,** ವಯಸ್ಸು-೭೯ವರ್ಷ, ಜಾತಿ-ಬಂಟ್ಸ್, ಮೈರಲ್ಕೆ ಮನೆ, ಓಡಿಲ್ನಾಳ ಅಂಚೆ ಮತ್ತು ಗ್ರಾಮ, ಬೆಳ್ತಂಗಡಿ ತಾಲೂಕು, ದ.ಕ.

೭. **ಕುಂಞಣ್ಣ ಮಲೆಕುಡಿಯ,** ವಯಸ್ಸು-೮೭ವರ್ಷ, ಜಾತಿ-ಮಲೆಕುಡಿಯ, ನಿಡ್ದಾಜೆ ಮನೆ ಕಾಯರ್ತಡ್ಕ ಅಂಚೆ, ಕಳೆಂಜ ಗ್ರಾಮ, ಬೆಳ್ತಂಗಡಿ ತಾಲೂಕು, ದ.ಕ.

೮. **ಕುಸುಮ,** ವಯಸ್ಸು-೪೮, ಜಾತಿ-ಒಕ್ಕಲಿಗ ಗೌಡ, ನೇಲ್ಯಲ್ಕೆ ಮನೆ, ಕೊಯ್ಯೂರು ಅಂಚೆ ಮತ್ತು ಗ್ರಾಮ, ಬೆಳ್ತಂಗಡಿ ತಾಲೂಕು, ದ.ಕ.

೯. **ಕೂಸಪ್ಪ ಪೂಜಾರಿ,** ವಯಸ್ಸು-೬೦ವರ್ಷ, ಜಾತಿ-ಬಿಲ್ಲವ, ಮೂಡಬೈಲು ಮನೆ, ಬಾರ್ಯ ಅಂಚೆ ಮತ್ತು ಗ್ರಾಮ, ಬೆಳ್ತಂಗಡಿ ತಾಲೂಕು, ದ.ಕ.

೧೦. **ಕೃಷ್ಣಪ್ಪ ಪೂಜಾರಿ,** ವಯಸ್ಸು-೫೫ವರ್ಷ, ಜಾತಿ-ಬಿಲ್ಲವ, ಸುಳ್ಯೋಡಿಮನೆ, ಸವಣಾಲು ಅಂಚೆ ಮತ್ತು ಗ್ರಾಮ, ಬೆಳ್ತಂಗಡಿ ತಾಲೂಕು, ದ.ಕ.

೧೧. **ಕೋಟಿಯಪ್ಪ ಗೌಡ,** ವಯಸ್ಸು-೫೫ವರ್ಷ, ಜಾತಿ-ಒಕ್ಕಲಿಗ ಗೌಡ, ಕಡೀರ ಮನೆ, ಕೊಕ್ಕಡ ಅಂಚೆ ಮತ್ತು ಗ್ರಾಮ, ಬೆಳ್ತಂಗಡಿ ತಾಲೂಕು, ದ.ಕ.

೧೨. **ಗಂಗಯ್ಯ ಗೌಡ,** ವಯಸ್ಸು-೬೪ವರ್ಷ, ಜಾತಿ-ಒಕ್ಕಲಿಗ ಗೌಡ, ಕಡೀರ ಮನೆ, ಕೊಕ್ಕಡ ಅಂಚೆ ಮತ್ತು ಗ್ರಾಮ, ಬೆಳ್ತಂಗಡಿ ತಾಲೂಕು, ದ.ಕ.

೧೩. **ಚಂದನ,** ವಯಸ್ಸು-೪೫ವರ್ಷ, ಜಾತಿ-ಜೈನ, ಉಳಿಯಬೀಡು ಮನೆ, ಪಟ್ರಮೆ ಅಂಚೆ ಮತ್ತು ಗ್ರಾಮ, ಬೆಳ್ತಂಗಡಿ ತಾಲೂಕು, ದ.ಕ.

೧೪. **ಚನನ ಗೌಡ,** ವಯಸ್ಸು-೮೫ವರ್ಷ, ಜಾತಿ-ಒಕ್ಕಲಿಗ ಗೌಡ, ಅಡೆಂಕಿಲೊಟ್ಟು ಮನೆ, ಕೊಯ್ಯೂರು ಅಂಚೆ ಮತ್ತು ಗ್ರಾಮ, ಬೆಳ್ತಂಗಡಿ ತಾಲೂಕು, ದ.ಕ.

೧೫. **ಜಯರಾಮ ಭಟ್ ಕೆ.,** ವಯಸ್ಸು–೫೬ವರ್ಷ, ಜಾತಿ–ಶಿವಳ್ಳಿ ಬ್ರಾಹ್ಮಣ, ಬಜಿಲೋಡಿ ಮನೆ, ಕೊಯ್ಯೂರು ಅಂಚೆ ಮತ್ತು ಗ್ರಾಮ, ಬೆಳ್ತಂಗಡಿ ತಾಲೂಕು, ದ.ಕ.

೧೬. **ಜಯಮ್ಮ,** ವಯಸ್ಸು–೫೨ವರ್ಷ, ಜಾತಿ–ಒಕ್ಕಲಿಗ ಗೌಡ, ಬಚ್ಚಿರೆದಡಿ ಮನೆ, ಕೊಯ್ಯೂರು ಅಂಚೆ ಮತ್ತು ಗ್ರಾಮ, ಬೆಳ್ತಂಗಡಿ ತಾಲೂಕು, ದ.ಕ.

೧೭. **ತಿಮ್ಮಪ್ಪ,** ವಯಸ್ಸು–೫೦ವರ್ಷ, ಜಾತಿ–ಹೊಲೆಯ(ಮನ್ಸ), ಅಡ್ಕರೆಗುರಿ ಮನೆ, ಬೆಳ್ಳಿಪ್ಪಾಡಿ ಅಂಚೆ ಮತ್ತು ಗ್ರಾಮ, ಪುತ್ತೂರು ತಾಲೂಕು, ದ.ಕ.

೧೮. **ದೇಜಪ್ಪ,** ವಯಸ್ಸು–೬೫ವರ್ಷ, ಜಾತಿ–ಬಿಲ್ಲವ, ಶ್ರೀದೇವಿಕೃಪ ಮನೆ, ಗರ್ಡಾಡಿ ಅಂಚೆ ಮತ್ತು ಗ್ರಾಮ, ಬೆಳ್ತಂಗಡಿ ತಾಲೂಕು, ದ.ಕ.

೧೯. **ದೇವಕಿ ಕೆ.,** ವಯಸ್ಸು–೬೦ವರ್ಷ, ಜಾತಿ–ಮರಾಠಿ ನಾಯ್ಕ, ಖಂಡಿಗ ಮನೆ, ಕುಂಬ್ರ ಅಂಚೆ, ಒಳಮೊಗ್ರು ಗ್ರಾಮ, ಪುತ್ತೂರು ತಾಲೂಕು, ದ.ಕ.

೨೦. **ಧರ್ಣಮ್ಮ,** ವಯಸ್ಸು–೬೦ವರ್ಷ, ಜಾತಿ–ಒಕ್ಕಲಿಗ ಗೌಡ, ಬೇರಿಕೆ ಮನೆ, ಪುದುವೆಟ್ಟು ಅಂಚೆ ಮತ್ತು ಗ್ರಾಮ, ಬೆಳ್ತಂಗಡಿ ತಾಲೂಕು, ದ.ಕ.

೨೧. **ಧರ್ಮಣ ನಾಯ್ಕ,** ವಯಸ್ಸು–೭೩ವರ್ಷ, ಜಾತಿ–ಮರಾಠಿ ನಾಯ್ಕ, ತಡ್ವೆಜಾಲು ಮನೆ, ಮಾಚಾರು, ಉಜಿರೆ ಅಂಚೆ ಮತ್ತು ಗ್ರಾಮ, ಬೆಳ್ತಂಗಡಿ ತಾಲೂಕು, ದ.ಕ.

೨೨. **ನೇಮಣ್ಣ ಗೌಡ,** ವಯಸ್ಸು–೬೨ವರ್ಷ, ಜಾತಿ–ಒಕ್ಕಲಿಗ ಗೌಡ, ಕೊಳಂಗಾಜೆ ಮನೆ, ಧರ್ಮಸ್ಥಳ ಅಂಚೆ ಮತ್ತು ಗ್ರಾಮ, ಬೆಳ್ತಂಗಡಿ ತಾಲೂಕು, ದ.ಕ.

೨೩. **ಪೂವಪ್ಪ ಮೂಲ್ಯ,** ವಯಸ್ಸು–೭೧ವರ್ಷ, ಜಾತಿ–ಮೂಲ್ಯ, ಪಡಂಬಿಲ ಮನೆ, ಬಂಗಾಡಿ ಅಂಚೆ, ಇಂದಬೆಟ್ಟು ಗ್ರಾಮ, ಬೆಳ್ತಂಗಡಿ ತಾಲೂಕು, ದ.ಕ.

೨೪. **ಬಾಬು ಗೌಡ,** ವಯಸ್ಸು–೫೪ವರ್ಷ, ಜಾತಿ–ಒಕ್ಕಲಿಗ ಗೌಡ, ಕಡೀರ ಮನೆ, ಕೊಕ್ಕಡ ಅಂಚೆ ಮತ್ತು ಗ್ರಾಮ, ಬೆಳ್ತಂಗಡಿ ತಾಲೂಕು, ದ.ಕ.

೨೫. **ಬಾಲಣ್ಣ ಗೌಡ,** ವಯಸ್ಸು–೭೦ವರ್ಷ, ಜಾತಿ–ಒಕ್ಕಲಿಗ ಗೌಡ, ಪಿಲಿಕಳ ಮನೆ, ಬಯಲು ಅಂಚೆ, ನೆರಿಯ ಗ್ರಾಮ, ಬೆಳ್ತಂಗಡಿ ತಾಲೂಕು, ದ.ಕ.

೨೬. **ಮಂಚ ಮುಗೇರ,** ವಯಸ್ಸು–೭೦ವರ್ಷ, ಜಾತಿ–ಮುಗೇರ, ಗುತ್ತುಮನೆ, ಪಜಿರಡ್ಕ, ಕಲ್ಮಂಜ ಅಂಚೆ ಮತ್ತು ಗ್ರಾಮ, ಬೆಳ್ತಂಗಡಿ ತಾಲೂಕು, ದ.ಕ.

೨೭. **ಮಾಯಿಲ ಗೌಡ,** ವಯಸ್ಸು–೮೫ವರ್ಷ, ಜಾತಿ–ಒಕ್ಕಲಿಗ ಗೌಡ, ನಂದಿಲ ಮನೆ, ನಿಡ್ಲೆ ಅಂಚೆ ಮತ್ತು ಗ್ರಾಮ, ಬೆಳ್ತಂಗಡಿ ತಾಲೂಕು, ದ.ಕ.

೨೮. **ಮಿತ್ರಾವತಿ ಜೈನ್,** ವಯಸ್ಸು–೭೬ವರ್ಷ, ಜಾತಿ–ಜೈನ, ಸಾವರ ಮನೆ, ಸುಲ್ಕೇರಿ ಅಂಚೆ, ಸಾವರ ಗ್ರಾಮ, ಬೆಳ್ತಂಗಡಿ ತಾಲೂಕು, ದ.ಕ.

೨೯. **ಮುದರು,** ವಯಸ್ಸು–೯೦ವರ್ಷ, ಜಾತಿ–ಹೊಲೆಯ(ಮನ್ಸ), ಅಡ್ಕರೆಗುರಿ ಮನೆ, ಬೆಳ್ಳಿಪ್ಪಾಡಿ ಅಂಚೆ ಮತ್ತು ಗ್ರಾಮ, ಪುತ್ತೂರು ತಾಲೂಕು, ದ.ಕ.

೩೦. **ಯಮುನ,** ವಯಸ್ಸು–೪೩, ಜಾತಿ–ಗೌಡ, ತೋಟ ಮನೆ, ಕೊಯ್ಯೂರು ಅಂಚೆ ಮತ್ತು ಗ್ರಾಮ, ಬೆಳ್ತಂಗಡಿ ತಾಲೂಕು, ದ.ಕ.

೩೧. **ರಂಗನಾಥ ನೂರಿತ್ತಾಯ,** ವಯಸ್ಸು–೫೦ವರ್ಷ, ಜಾತಿ–ಶಿವಳ್ಳಿ ಬ್ರಾಹ್ಮಣ, ಕಡಂಬು ಮನೆ, ತೆಂಕಕಾರಂದೂರು ಅಂಚೆ ಮತ್ತು ಗ್ರಾಮ, ಬೆಳ್ತಂಗಡಿ ತಾಲೂಕು, ದ.ಕ.

೩೨. **ರಾಮಣ್ಣ ಗೌಡ,** ವಯಸ್ಸು–೫೫ವರ್ಷ, ಜಾತಿ–ಒಕ್ಕಲಿಗ ಗೌಡ, ಬಾರ್ತೊಳಿ ಮನೆ, ಬೆಳ್ಳಿಪ್ಪಾಡಿ ಅಂಚೆ ಮತ್ತು ಗ್ರಾಮ, ಪುತ್ತೂರು ತಾಲೂಕು, ದ.ಕ.

೩೩. **ರೇವತಿ,** ವಯಸ್ಸು–೫೨ವರ್ಷ, ಜಾತಿ–ಒಕ್ಕಲಿಗ ಗೌಡ, ದೇಲೋಡಿ ಮನೆ, ಕೊಯ್ಯೂರು ಅಂಚೆ ಮತ್ತು ಗ್ರಾಮ, ಬೆಳ್ತಂಗಡಿ ತಾಲೂಕು, ದ.ಕ.

೩೪. **ವಾಸಪ್ಪ ನಾಯ್ಕ,** ವಯಸ್ಸು–೭೦ವರ್ಷ, ಜಾತಿ–ಮರಾಠಿ ನಾಯ್ಕ, ಪಿಲಿಕುಡೇಲು ಮನೆ, ಮೊಗ್ರು ಅಂಚೆ ಮತ್ತು ಗ್ರಾಮ, ಬೆಳ್ತಂಗಡಿ ತಾಲೂಕು, ದ.ಕ.

೩೫. **ವಿಮಲ,** ವಯಸ್ಸು–೪೨ವರ್ಷ, ಜಾತಿ–ಬಿಲ್ಲವ, ಕುದ್ಕೋಳಿ ಮನೆ, ಕೊಯ್ಯೂರು ಅಂಚೆ ಮತ್ತು ಗ್ರಾಮ, ಬೆಳ್ತಂಗಡಿ ತಾಲೂಕು, ದ.ಕ.

೩೬. **ವೀರಮ್ಮ,** ವಯಸ್ಸು–೭೫ವರ್ಷ, ಜಾತಿ–ಬಿಲ್ಲವ, ಕುಂಡಡ್ಕ ಮನೆ, ನಾವೂರ ಅಂಚೆ ಮತ್ತು ಗ್ರಾಮ, ಬೆಳ್ತಂಗಡಿ ತಾಲೂಕು, ದ.ಕ.

೩೭. **ವೆಂಕಣ,** ವಯಸ್ಸು–೪೩ವರ್ಷ, ಜಾತಿ–ಹೊಲೆಯ(ಮನ್ಸ), ಅಮರ ನಿಲಯ, ಆದೂರು ಪೆರಾಲ್, ಕೊಯ್ಯೂರು ಅಂಚೆ ಮತ್ತು ಗ್ರಾಮ, ಬೆಳ್ತಂಗಡಿ ತಾಲೂಕು, ದ.ಕ.

೩೮. **ಶಾರದ,** ವಯಸ್ಸು–೫೮ವರ್ಷ, ಜಾತಿ–ಮರಾಠಿ ನಾಯ್ಕ, ಮಲೆಡ್ಕ ಮನೆ, ಪೆರ್ಮಾಣು ಅಂಚೆ, ನಡ ಗ್ರಾಮ, ಬೆಳ್ತಂಗಡಿ ತಾಲೂಕು, ದ.ಕ.

೩೯. **ಶ್ರೀಪತಿ ಭಟ್,** ವಯಸ್ಸು–೭೬ವರ್ಷ, ಶಿವಳ್ಳಿ ಬ್ರಾಹ್ಮಣ, ಅನಾಬೆ ಮನೆ, ಬಂದಾರು ಅಂಚೆ ಮತ್ತು ಗ್ರಾಮ, ಬೆಳ್ತಂಗಡಿ ತಾಲೂಕು, ದ.ಕ.

೪೦. **ಸೀತಾರಾಮ ಗೌಡ,** ವಯಸ್ಸು–೬೨ವರ್ಷ, ಜಾತಿ–ಒಕ್ಕಲಿಗ ಗೌಡ, ದೇಲೋಡಿ ಮನೆ, ಕೊಯ್ಯೂರು ಅಂಚೆ ಮತ್ತು ಗ್ರಾಮ, ಬೆಳ್ತಂಗಡಿ ತಾಲೂಕು, ದ.ಕ.

೪೧. **ಸುಂದರ,** ವಯಸ್ಸು–೪೫ವರ್ಷ, ಜಾತಿ–ವಿಶ್ವಕರ್ಮ, ಹಲಂಗಾಯಿ ಮನೆ, ತೆಂಕಕಾರಂದೂರು ಅಂಚೆ ಮತ್ತು ಗ್ರಾಮ, ಬೆಳ್ತಂಗಡಿ ತಾಲೂಕು, ದ.ಕ.

೪೨. **ಹೇಮಲತಾ ರೈ,** ವಯಸ್ಸು–೫೨ವರ್ಷ, ಜಾತಿ–ಬಂಟ್ಸ್, ಅನಿಕುಟೇಲು ಮನೆ, ಕುಂಬ್ರ ಅಂಚೆ, ಒಳಮೊಗ್ರು ಗ್ರಾಮ, ಪುತ್ತೂರು ತಾಲೂಕು, ದ.ಕ.

೪೩. **ಹೊನ್ನಮ್ಮ,** ವಯಸ್ಸು–೪೮ವರ್ಷ, ಜಾತಿ–ಒಕ್ಕಲಿಗ ಗೌಡ, ಕಡೀರ ಮನೆ, ಕೊಕ್ಕಡ ಅಂಚೆ ಮತ್ತು ಗ್ರಾಮ, ಬೆಳ್ತಂಗಡಿ ತಾಲೂಕು, ದ.ಕ.

■■■

## ೪. ಪರಾಮರ್ಶನ ಗ್ರಂಥಗಳು


### ಕನ್ನಡ

**ಅರ್ದಲ–೨೦೦೯**

(ಸಂ.)ರಾಧಾಕೃಷ್ಣ ಕೆ., ಉಳಿಯತಡ್ಕ, ತುಳುವೆರೆ ಆಯನೊ ಸಮಿತಿ, ಬದಿಯಡ್ಕ, ಪೆರಡಾಲ, ಕಾಸರಗೋಡು

**ಅಳಿಯ ಸಂತಾನಕಟ್ಟ್‌ದ ಗುಟ್ಟು–೨೦೦೯**

ಸತ್ಯಮಿತ್ರ ಬಂಗೇರ, ವ್ಯವಸ್ಥಾಪನಾ ಸಮಿತಿ, ವಿಶ್ವ ತುಳು ಸಮ್ಮೇಳನ, ಉಜಿರೆ

**ಆನ್ವಯಿಕ ಜಾನಪದ–೧೯೮೫**

ವಿವೇಕ ರೈ ಬಿ.ಎ., ಮಂಗಳಗಂಗೋತ್ರಿ, ಮಂಗಳೂರು ವಿಶ್ವವಿದ್ಯಾನಿಲಯ

**ಐರ್ಯ–೧೯೯೯**

ಐರ್ಯ ಲಕ್ಷ್ಮೀನಾರಾಯಣ ಆಳ್ವ ಅಭಿನಂದನ ಗ್ರಂಥ, ಐರ್ಯ ಲಕ್ಷ್ಮೀನಾರಾಯಣ ಆಳ್ವ ಅಭಿನಂದನ ಸಮಿತಿ, ಮಂಗಳೂರು

**ಕದಿಕೆ–೧೯೯೪**

(ಸಂ.)ಲೀಲಾವತಿ ಕೆ., ಅಖಿಲ ಭಾರತ ತುಳು ಒಕ್ಕೂಟ, ಮಂಗಳೂರು

**ಕನ್ನಡ–ಕನ್ನಡ–ಇಂಗ್ಲಿಷ್ ನಿಘಂಟು–೧೯೯೭**

ಐಬಿಎಚ್

**ಕನ್ನಡ–ಕನ್ನಡ ಶಬ್ದಕೋಶ–೧೯೯೫**

ಸಂಕೇಶ್ವರ ಪ್ರಿಂಟರ್ಸ್, ಪ್ರೈ.ಲಿ.

**ಕನ್ನಡ ಜಾನಪದ ವಿಶ್ವಕೋಶ–ಸಂಪುಟ–೧–೧೯೮೫**

(ಸಂ.)ಚಂದ್ರಶೇಖರ ಕಂಬಾರ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

**ಕನ್ನಡ ಜಾನಪದ ವಿಶ್ವಕೋಶ–ಸಂಪುಟ–೨–೧೯೮೫**

(ಸಂ) ಚಂದ್ರಶೇಖರ ಕಂಬಾರ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

**ಕನ್ನಡ ರತ್ನ ಕೋಶ–೧೯೮೪**

**ಕನ್ನಡ ವಿಶ್ವಕೋಶ: ಸಂಪುಟ–೧–೧೯೬೯**

ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ

**ಕರಾವಳಿ ಕರ್ನಾಟಕದ ಕನ್ನಡ ಶಾಸನಗಳ ಅಧ್ಯಯನ–೨೦೦೧**

ಕೆ.ಜಿ.ವಸಂತ ಮಾಧವ, ನಾನಾ ಪ್ರಕಾಶನ, ಹಳೆಯಂಗಡಿ

**ಕರಾವಳಿ ಕರ್ನಾಟಕದ ರಾಜಕೀಯ ಇತಿಹಾಸ ಅಧ್ಯಯನ ಮತ್ತು ಸಂಶೋಧನೆ–೧೯೯೮**

ಡಾ.ಕೆ.ಜಿ.ವಸಂತ ಮಾಧವ, ನಮ್ಮಿ ಅನಂತ ಪ್ರಕಾಶನ, ಹಳೆಯಂಗಡಿ

**ಕರಾವಳಿ ಜಾನಪದ–೨೦೦೭**

(ಸಂ.) ನಾವಡ ಎ.ವಿ., ಸ್ವಾಗತ ಸಮಿತಿ, ಅಖಿಲಭಾರತ ೭೪ನೆಯ ಕನ್ನಡ ಸಾಹಿತ್ಯ ಸಮ್ಮೇಳನ, ಉಡುಪಿ

**ಕರಾವಳಿ ಜಾನಪದ–೧೯೯೦**

ಪುರುಷೋತ್ತಮ ಬಿಳಿಮಲೆ, ಶೋಭನ ಎನ್.ಎನ್

**ಕರ್ನಾಟಕದ ಸಂಕ್ಷಿಪ್ತ ಇತಿಹಾಸ**

ಡಾ. ಸೂರ್ಯನಾಥ ಕಾಮತ್

**ಕರ್ನಾಟಕ ಸಂಸ್ಕೃತಿ ಸಮೀಕ್ಷೆ–೨೦೦೩**

ಡಾ.ಎಚ್.ತಿಪ್ಪೇರುದ್ರಸ್ವಾಮಿ

ಡಿ.ವಿ.ಕೆ.ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು

**ಕಲೆಂಬಿ–೨೦೦೯**

(ಸಂ.)ಡಾ.ವಾಮನ ನಂದಾವರ, ವ್ಯವಸ್ಥಾಪನಾ ಸಮಿತಿ, ವಿಶ್ವ ತುಳು ಸಮ್ಮೇಳನ, ಉಜಿರೆ

**ಕುಂಬಾರ ಜನಾಂಗ–೨೦೦೩**

ಬಸವರಾಜ ಕುಂಚೂರು, ಶ್ರೀಚಕ್ರ ಪ್ರಕಾಶನ, ದಾವಣಗೆರೆ

**ಕೊಡಿಪು–೨೦೦೯**

(ಸಂ)ಡಾ.ವಾಮನ ನಂದಾವರ, ವ್ಯವಸ್ಥಾಪನಾ ಸಮಿತಿ, ವಿಶ್ವತುಳು ಸಮ್ಮೇಳನ, ಉಜಿರೆ

**ಕೋಟದವರು–೧೯೯೫**

ಡಾ.ಪಾ.ನ.ಮಯ್ಯ, ಪಾರಂಪಳ್ಳಿ ಪ್ರಕಾಶನ, ಮಂಗಳೂರು

**ಕೋಟಿ ಚೆನ್ನಯ ಜಾನಪದೀಯ ಅಧ್ಯಯನ–೨೦೦೧**

ಡಾ.ವಾಮನ ನಂದಾವರ, ಹೇಮಾಂಶು ಪ್ರಕಾಶನ, ಮಂಗಳೂರು

**ಗಡಿನಾಡಿನ ಕಿಡಿ–೧೯೯೦**

(ಸಂ.)ಶ್ರೀ ವೈ.ಎಸ್.ವಿ.ಭಟ್, ಲಲಿತ ಕಲಾ ಸದನ(ರಿ.)ಕಾಸರಗೋಡು

**ಗಾದೆಲು–೨೦೦೯**

ಬಿ.ಎಸ್.ಶಿವಕುಮಾರ್, ವ್ಯವಸ್ಥಾಪನಾ ಸಮಿತಿ, ವಿಶ್ವ ತುಳು ಸಮ್ಮೇಳನ, ಉಜಿರೆ

**ಗೌಡ ಜನಾಂಗ: ಇತಿಹಾಸ ಮತ್ತು ಸಂಸ್ಕೃತಿ–೨೦೦೩**

(ಸಂ)ಡಾ.ಕೆ.ಚಿನ್ನಪ್ಪ ಗೌಡ, ಬೆಳ್ಳಿಹಬ್ಬ ಆಚರಣಾ ಸಮಿತಿ, ಒಕ್ಕಲಿಗರ ಯಾನೆ ಗೌಡರ ಸೇವಾ ಸಂಘ, ಮಂಗಳೂರು

**ಜನಪದ ಸುತ್ತಮುತ್ತ–೧೯೯೨**

ಡಾ.ವಾಮನ ನಂದಾವರ, ಪ್ರಜಾಬಂಧು ಪ್ರಕಾಶನ ಮಂಗಳೂರು

**ಜಾತ್ರೆ ಮತ್ತು ಇತರ ಸಂಶೋಧನಾತ್ಮಕ ಪ್ರಬಂಧಗಳು–೧೯೯೦**

(ಸಂ) ಚಂದ್ರಶೇಖರ ದಾಮ್ಲೆ, ನೆಹರು ಮೆಮೋರಿಯಲ್ ಕಾಲೇಜು, ಸುಳ್ಯ

**ಜಾನಪದ ಅನುಶೀಲನ–೧೯೯೭**

ಎಸ್.ಆರ್.ಅರುಣ ಕುಮಾರ್, ಪೂರ್ಣ ಪ್ರಕಾಶನ, ಧರ್ಮಸ್ಥಳ

**ಜಾನಪದ ಜೀವನ–೧೯೮೧**

ಶ್ರೀಕೃಷ್ಣಭಟ್ ಅರ್ತಿಕಜೆ, ಸಂತ ಫಿಲೋಮಿನಾ ಕಾಲೇಜು, ಪುತ್ತೂರು

**ಜಾನಪದ ನೆಲೆಯಲ್ಲಿ ಮಹಿಳೆ–೧೯೯೩**

ಶಾರದಾ ಶಾಮಣ್ಣ, ಕಳಸ ಪ್ರಕಾಶನ, ಬೆಂಗಳೂರು

**ಜಾನಪದ ಮಿನದನ – ೧೯೯೭**

ಪಾಲ್ತಾಡಿ ರಾಮಕೃಷ್ಣ ಆಚಾರ್, ಸುಪ್ರಿಯಾ ಪ್ರಕಾಶನ, ಪುತ್ತೂರು

**ಜಾನಪದ ಲೇಖನ ಸಂಚಯ–೨೦೦೫**

ಶಾಂತಿನಾಯಕ, ಜಾನಪದ ಪ್ರಕಾಶನ, ಹೊನ್ನಾವರ

**ಜಾನಪದ ಸೌರಭ–೧೯೯೩**

ಡಾ.ಬಿ.ಎಸ್.ಸ್ವಾಮಿ, ಗೋರಕ್ಷನಾಥ ಪ್ರಕಾಶನ ಬೆಂಗಳೂರು

**ಜಾಲಾಟ–೧೯೮೫**

ಡಾ.ಕೆ.ಚಿನ್ನಪ್ಪ ಗೌಡ, ಶ್ರೀ.ಧ.ಮಂ. ಕಾಲೇಜು, ಉಜಿರೆ

**ಡಿಲ್ಲಿಡ್ ತುಳು ಬೊಲ್ಪು–೨೦೦೩**

(ಸಂ.)ಸ್ಮರಣ ಸಂಚಿಕೆ ಸಮಿತಿ, ತುಳುನಾಡು ಡೆವೆಲಪ್‌ಮೆಂಟ್ ಫೋರಂ, ನವದೆಹಲಿ

**ತಮ್ಮಲೆ ಅರುವತ್ತ ಕಟ್ಟ್–೨೦೦೮**

ಬೋಳ ಚಿತ್ತರಂಜನ್ ದಾಸ್ ಶೆಟ್ಟಿ, ಪ್ರಸಾರಾಂಗ, ದ್ರಾವಿಡ ವಿಶ್ವವಿದ್ಯಾನಿಲಯ, ಕುಪ್ಪಂ, ಆಂದ್ರಪ್ರದೇಶ

**ತುಲು ಜಾನಪದ ಆಚರಣೆಗಳು–೨೦೦೭**

ಬನ್ನಂಜೆ ಬಾಬು ಅಮೀನ್, ಪ್ರಸಾರಾಂಗ, ದ್ರಾವಿಡ ವಿಶ್ವವಿದ್ಯಾನಿಲಯ, ಕುಪ್ಪಂ, ಆಂದ್ರಪ್ರದೇಶ

**ತುಳು–ಇಂಗ್ಲೀಷ್ ಡಿಕ್ಷನರಿ–೧೯೬೭**

(ಸಂ.)ಮರಿಯಪ್ಪ ಭಟ್ಟ ಎಂ. ಶಂಕರಕೆದಿಲಾಯ ಎ., ಮದ್ರಾಸು ವಿಶ್ವವಿದ್ಯಾಲಯ

**ತುಳು ಕರ್ನಾಟಕ ಅರಸು ಮನೆತನಗಳು–೨೦೦೦**

(ಸಂ.)ಹೇರಂಜೆಕೃಷ್ಣ ಭಟ್ಟ, ಡಾ.ಎಸ್.ಶೆಟ್ಟಿ, ಪ್ರಸರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ

**ತುಳು ಚಾರಿತ್ರಿಕ ದಾಖಲೆ(ತುಳುವ ಚರಿತ್ರೆ)–೨೦೦೯**

ಡಾ.ಗುರುರಾಜ ಭಟ್, ವ್ಯವಸ್ಥಾಪನಾ ಸಮಿತಿ, ವಿಶ್ವ ತುಳು ಸಮ್ಮೇಳನ, ಉಜಿರೆ

**ತುಳು ಜಾನಪದ ಆಚರಣೆಗಳು–೨೦೦೩**

ಬನ್ನಂಜೆ ಬಾಬು ಅಮೀನ್, ಕೆಮ್ಮಲಜೆ ಜಾನಪದ ಪ್ರಕಾಶನ, ಉಡುಪಿ

**ತುಳು ಜನಪದ ಸಾಹಿತ್ಯ–೧೯೮೫**

ಡಾ.ಬಿ.ಎ.ವಿವೇಕ ರೈ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

**ತುಳು ಜಾನಪದ ಕಾವ್ಯ: ಇಹಪರ ಲೋಕದೃಷ್ಟಿ–೨೦೦೮**

ರಾಜಶ್ರೀ, ಶ್ರೀ ಧ.ಮಂ.ತುಳುಪೀಠ, ಮಂಗಳೂರು ವಿಶ್ವವಿದ್ಯಾನಿಲಯ

**ತುಳು ದೇಶ ಭಾಷಾ ವಿಚಾರವು–೧೯೭೦**

ಕಡವ ಶಂಭುಶರ್ಮಾ: ಕೆ.ವಿ.ಶರ್ಮ, ಪೆರ್ಲ

**ತುಳು ನಡೆನುಡಿ–೧೯೮೮**

ವೆಂಕಟರಾಜ ಪುಣಿಂಚತ್ತಾಯ: ರಾಷ್ಟ್ರಕವಿ  ಗೋವಿಂದ ಪೈ ಸಂಶೋಧನ ಕೇಂದ್ರ, ಉಡುಪಿ:

**ಮಂಗಳ ತಿಮರು–೧೯೮೭**

(ಸಂ.) ಏರ್ಯ ಲಕ್ಷ್ಮೀನಾರಾಯಣ ಆಳ್ವ: ಅಮಟಾಡಿ ಮಂಗಳ ತಿಮರು ಶ್ರೀ ಅಣ್ಣಪ್ಪ ಸ್ವಾಮಿ ದೈವಸ್ಥಾನ, ಬಂಟ್ವಾಳ,ದ.ಕ.

**ತುಳುನಾಡ್‌ದ ಜನಾಂಗೊಲೆ ಅಧ್ಯಯನ–೨೦೦೭**

ಡಾ.ವಾಮನ ನಂದಾವರ, ಪ್ರಸಾರಾಂಗ, ದ್ರಾವಿಡ ವಿಶ್ವವಿದ್ಯಾನಿಲಯ, ಕುಪ್ಪಂ, ಆಂದ್ರಪ್ರದೇಶ

**ತುಳುನಾಡ ದೈವಗಳು: ಸಾಂಸ್ಕೃತಿಕ ವಿಶ್ಲೇಷಣೆ–೨೦೧೦**

ಬನ್ನಂಜೆ ಬಾಬು ಅಮೀನ್, ಕೆಮ್ಮಲಜೆ ಜಾನಪದ ಪ್ರಕಾಶನ, ಉಡುಪಿ

**ತುಳುನಾಡಿನ ಇತಿಹಾಸ–೧೯೬೯**

ರಮೇಶ ಕೆ.ವಿ., ಗೋವಿಂದ ಪೈ ಸ್ಮಾರಕ ಸಂಶೋಧನ ಕೇಂದ್ರ, ಉಡುಪಿ

**ತುಳುನಾಡಿನ ಗತವೈಭವ–೧೯೮೮**

ಉದಯವರ್ಮರಾಜ, ಕನ್ನಡ ಸಾಹಿತ್ಯ ಪರಿಷತ್ತು, ಕೆರಳ ವಿಶೇಷ ಘಟಕ, ಕಾಸರಗೋಡು

**ತುಳುನಾಡಿನ ಜನಪದ ಆಟಗಳು–೨೦೦೦**

ಗಣನಾಥ ಎಕ್ಕಾರು, ಜ್ಞಾನೋದಯ ಪ್ರಕಾಶನ, ಬೆಂಗಳೂರು

**ತುಳುನಾಡಿನ ಜೈನಧರ್ಮ–ಒಂದು ಸಾಂಸ್ಕೃತಿಕ ಅಧ್ಯಯನ–೨೦೦೨**

ಡಾ.ಎಸ್.ಡಿ.ಶೆಟ್ಟಿ, ರಾಷ್ಟ್ರಕವಿ ಗೋವಿಂದ ಪೈ ಸಂಶೋಧನ ಕೇಂದ್ರ, ಉಡುಪಿ

**ತುಳುನಾಡಿನ ಶಾಸನಗಳ ಸಾಂಸ್ಕೃತಿಕ ಅಧ್ಯಯನ–೨೦೦೨**

ಡಾ.ಶೈಲಾ ಟಿ.ವರ್ಮ, ಜ್ಞಾನೋದಯ ಪ್ರಕಾಶನ, ಬೆಂಗಳೂರು

**ತುಳುನಾಡು–೧೯೬೩**

ಡಾ.ಗುರುರಾಜ ಭಟ್ ಪಿ., (ಸಂ.)ಲಕ್ಷ್ಮೀನಾರಾಯಣ ಭಟ್ ಕೆ.

ಭವ್ಯವಾಣಿ, ಉಡುಪಿ

**ತುಳು ನಾಡು–ನುಡಿ–೧೯೯೯**

ಪಾಲ್ತಾಡಿ ರಾಮಕೃಷ್ಣ ಆಚಾರ್, ಕರ್ನಾಟಕ ಸಂಘ ಪುತ್ತೂರು

**ತುಳುನಾಡು ಪೂರ್ವಸ್ಮೃತಿ, ತೆಂಕನಾಡು–೧೯೪೭**

ಗೋವಿಂದ ಪೈ, ಸ್ವಾಗತ ಸಮಿತಿ, ೩೧ನೆಯ ಕನ್ನಡ ಸಾಹಿಯ ಸಮ್ಮೇಳನ, ಕಾಸರಗೋಡು

**ತುಳು ನಿಘಂಟು–ಸಂಪುಟ–೧–೧೯೮೮**

ಡಾ.ಉಪಾಧ್ಯಾಯ ಯು.ಪಿ., ರಾಷ್ಟ್ರಕವಿ ಗೋವಿಂದ ಪೈ ಸಂಶೋಧನ ಕೇಂದ್ರ, ಉಡುಪಿ

**ತುಳು ನಿಘಂಟು–ಸಂಪುಟ–೨–೧೯೯೨**

ಡಾ.ಉಪಾಧ್ಯಾಯ ಯು.ಪಿ.,ರಾಷ್ಟ್ರಕವಿ ಗೋವಿಂದ ಪೈ ಸಂಶೋಧನ ಕೇಂದ್ರ, ಉಡುಪಿ

**ತುಳು ನಿಘಂಟು–ಸಂಪುಟ–೩–೧೯೮೮**

ಡಾ.ಉಪಾಧ್ಯಾಯ ಯು.ಪಿ., ರಾಷ್ಟ್ರಕವಿ ಗೋವಿಂದ ಪೈ ಸಂಶೋಧನ ಕೇಂದ್ರ, ಉಡುಪಿ

**ತುಳು ನಿಘಂಟು–ಸಂಪುಟ–೪–೧೯೯೭**

ಡಾ.ಉಪಾಧ್ಯಾಯ ಯು.ಪಿ., ರಾಷ್ಟ್ರಕವಿ ಗೋವಿಂದ ಪೈ ಸಂಶೋಧನ ಕೇಂದ್ರ, ಉಡುಪಿ

**ತುಳು ನಿಘಂಟು–ಸಂಪುಟ–೫–೧೯೯೭**

ಡಾ.ಉಪಾಧ್ಯಾಯ ಯು.ಪಿ., ರಾಷ್ಟ್ರಕವಿ ಗೋವಿಂದ ಪೈ ಸಂಶೋಧನ ಕೇಂದ್ರ, ಉಡುಪಿ

**ತುಳು ನಿಘಂಟು–ಸಂಪುಟ–೬–೧೯೯೭**

ಡಾ.ಉಪಾಧ್ಯಾಯ ಯು.ಪಿ., ರಾಷ್ಟ್ರಕವಿ ಗೋವಿಂದ ಪೈ ಸಂಶೋಧನ ಕೇಂದ್ರ, ಉಡುಪಿ

**ತುಳು ನಿಘಂಟು–ಸಂಪುಟ–೭–೧೯೯೭**

ಡಾ.ಉಪಾಧ್ಯಾಯ ಯು.ಪಿ., ರಾಷ್ಟ್ರಕವಿ ಗೋವಿಂದ ಪೈ ಸಂಶೋಧನ ಕೇಂದ್ರ, ಉಡುಪಿ

**ತುಳು ಪಾಡ್ದನ ಸಂಪುಟ–೧೯೯೭**

(ಸಂ.)ಅಮೃತ ಸೋಮೇಶ್ವರ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

**ತುಳುವ ಜಾನಪದ–ಕೆಲವು ನೋಟಗಳು–೨೦೦೭**

ಡಾ.ಅಮೃತ ಸೋಮೇಶ್ವರ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

**ತುಳುವ ದರ್ಶನ–೧೯೮೮**

ಡಾ.ಪೀಟರ್ ಜೆ.ಕ್ಲಾಸ್, ಕನ್ನಡಾನುವಾದ: ನಾವಡ ಎ.ವಿ., ಸುಭಾಶ್ಚಂದ್ರ, ಪ್ರಾದೇಶಿಕ ವ್ಯಾಸಂಗ, ಕುಂದಾಪುರ

**ತುಳುವ ಪತ್ರಿಕೆ–೨೦೦೩(ಜನವರಿ–ಮಾರ್ಚ್)**

ಕರ್ನಾಟಕ ತುಳು ಸಾಹಿತ್ಯ ಅಕಾಡೆಮಿ, ಮಂಗಳೂರು

**ತುಳುವ ಮಂದಾರ–೨೦೦೭**

ಡಾ.ಹರಿಕೃಷ್ಣ ಭರಣ್ಯ, ಪ್ರಸಾರಾಂಗ, ದ್ರಾವಿಡ ವಿಶ್ವವಿದ್ಯಾನಿಲಯ, ಕುಪ್ಪಂ, ಆಂಧ್ರಪ್ರದೇಶ

**ತುಳುವರ ಆಚರಣೆಗಳಲ್ಲಿ ಕಲಾವಂತಿಕೆ–೧೯೮೯**

ಕ.ವೆಂ.ರಾಜಗೋಪಾಲ, ಕರ್ನಾಟಕ ಲಲಿತಾಕಲಾ ಅಕಾಡೆಮಿ, ಬೆಂಗಳೂರು

**ತುಳುವರಿವರು–೧೯೯೭**

(ಸಂ.)ಪಾದೇಕಲ್ಲು ವಿಷ್ಣು ಭಟ್ಟ, ರಾಷ್ಟ್ರಕವಿ ಗೋವಿಂದ ಪೈ ಸಂಶೋಧನ ಕೇಂದ್ರ, ಉಡುಪಿ

**ತುಳುವಾಲ ಬಲಿಯೇಂದ್ರ–೨೦೦೯**

ಎನ್.ಎ.ಶೀನಪ್ಪ ಹೆಗ್ಡೆ, ವ್ಯವಸ್ಥಾಪನಾ ಸಮಿತಿ, ವಿಶ್ವ ತುಳು ಸಮ್ಮೇಳನ, ಉಜಿರೆ

**ತುಳುವೆರೆ ಅಟಿಲ್ ಅರಗಣೆ–೨೦೦೮**

ಇಂದಿರಾ ಹೆಗ್ಗಡೆ, ಪ್ರಸಾರಾಂಗ, ದ್ರಾವಿಡ ವಿಶ್ವವಿದ್ಯಾನಿಲಯ, ಕುಪ್ಪಂ, ಆಂಧ್ರಪ್ರದೇಶ

**ತುಳು ಸಾಹಿತ್ಯ ಚರಿತ್ರೆ-೨೦೦೭**

(ಸಂ.)ಪ್ರೊ.ಎ.ವಿ.ನಾವಡ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

**ತುಳು ಸಂಸ್ಕೃತಿ ಚತುರ್ಮುಖೀ ಅಧ್ಯಯನ-೧೯೯೯**

ಕೆ.ಮೋಹನ ಕೃಷ್ಣ ರೈ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

**ತುಳು ಸಂಸ್ಕೃತಿದ ಪೊಲಬು-೨೦೦೮**

ಡಾ.ಪಾಲ್ತಾಡಿ ರಾಮಕೃಷ್ಣ ಆಚಾರ್, ಕರ್ನಾಟಕ ತುಳು ಸಾಹಿತ್ಯ ಅಕಾಡೆಮಿ, ಮಂಗಳೂರು

**ತೌಳವ-೧೯೯೭**

ಡಾ.ಪುಂಡಿಕ್ಯಾ ಗಣಪಯ್ಯ ಭಟ್, ಸಿಂಧೂರ ಪ್ರಕಾಶನ, ಮೂಡಬಿದಿರೆ

**ತೌಳವ ಗಾಥಾ ಮಂಜರಿ ಅಂದ್‌ಂಡ ಸಾರ ತುಳು ಗಾದೆಲು-೨೦೦೯**

ರೆವೆ. ಅಗಸ್ಟ್ ಮೆನ್ನರ್, ವ್ಯವಸ್ಥಾಪನಾ ಸಮಿತಿ, ವಿಶ್ವ ತುಳು ಸಮ್ಮೇಳನ, ಉಜಿರೆ

**ದ.ಕ.ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ-೨೦೦೭**

(ಸಂ.)ಡಾ.ಆರ್.ಗೋಪಾಲ್, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು

**ದ.ಕ ಜಿಲ್ಲೆಯ ಐತಿಹ್ಯಗಳು-೧೯೯೪**

ಡಾ.ಸುಬ್ಬಣ್ಣ ರೈ, ಮಾಣಿ ಜೂನಿಯರ್ ಛೇಂಬರ್, ದ.ಕ.

**ದ.ಕ.ಜಿಲ್ಲೆಯ ಕೈಫಿಯತ್ತುಗಳು-೧೯೮೩**

(ಸಂ.)ಕುಶಾಲಪ್ಪ ಗೌಡ ಕೆ., ಚಿನ್ನಪ್ಪ ಗೌಡ ಕೆ., ಶ್ರೀ ಧ.ಮಂ.ಪುಸ್ತಕ ಪ್ರಕಾಶನ ಮಾಲೆ, ಉಜಿರೆ, ದ.ಕ.

**ದ.ಕ.ಜಿಲ್ಲೆಯ ಪ್ರಾಚೀನ ಇತಿಹಾಸ-೧೯೨೮**

ಐಗಳ ಮಂಜೇಶ್ವರ ಗಣಪತಿ ರಾವ್, ಶಾರದಾ ಪ್ರೆಸ್ ಮಂಗಳೂರು

**ದ.ಕ.ಜಿಲ್ಲೆಯ ಪ್ರಾಚೀನ ಇತಿಹಾಸ-೨೦೦೪(ದ್ವಿತೀಯಾವೃತ್ತಿ)**

ಐಗಳ ಮಂಜೇಶ್ವರ ಗಣಪತಿರಾವ್, ರಾಷ್ಟ್ರಕವಿ ಗೋವಿಂದ ಪೈ ಸಂಶೋಧನ ಕೇಂದ್ರ, ಉಡುಪಿ

**ದ.ಕ.ಜಿಲ್ಲೆಯ ಭೈರರು-೧೯೯೦**

ಡಾ.ಡಿ.ಆರ್.ಪಾಂಡುರಂಗ, ರಾಷ್ಟ್ರಕವಿ ಗೋವಿಂದ ಪೈ ಸಂಶೋಧನ ಕೇಂದ್ರ ಉಡುಪಿ

**ದ.ಕ.ಜಿಲ್ಲೆಯ ಹರಿಜನರ ಮತ್ತು ಗಿರಿಜನರ ಸಾಮಾಜಿಕ ಇತಿಹಾಸ-೧೯೯೪**

ಪಿ.ಕಮಲಾಕ್ಷ, ಕನ್ನಡ ಪುಸ್ತಕ ಪ್ರಾಧಿಕಾರ-ಬೆಂಗಳೂರು

**ದಕ್ಷಿಣ ಕನ್ನಡ ಅಂದು-ಇಂದು-೧೯೯೧**

ಕೆ.ಶಿವರಾಮ ಕಾರಂತ, ಎಸ್‌ಬಿಎಸ್ ಪಬ್ಲಿಷರ್ಸ್ ಡಿಸ್ಟ್ರಿಬ್ಯೂಟರ್ಸ್, ಬೆಂಗಳೂರು

**ದಕ್ಷಿಣ ಕನ್ನಡದ ಇತಿಹಾಸ(ತುಳುವ ಚರಿತ್ರೆ)-೨೦೦೯**

ಕೇಶವ ಕೃಷ್ಣ ಕುಡ್ವ, ವ್ಯವಸ್ಥಾಪನಾ ಸಮಿತಿ, ವಿಶ್ವ ತುಳು ಸಮ್ಮೇಳನ, ಉಜಿರೆ

**ದಕ್ಷಿಣದ ಸಿರಿನಾಡು-೧೯೯೭**

ಡಾ.ಕೆ.ಅನಂತರಾಮು, ಅನಂತ ಪ್ರಕಾಶನ ಮೈಸೂರು

**ದ್ರಾವಿಡ ಸಂಸ್ಕೃತಿ–೨೦೦೪**

ಡಾ.ಎ.ಸುಬ್ಬಣ್ಣ ರೈ, ಸಿವಿಜಿ ಪಬ್ಲಿಕೇಶನ್ಸ್, ಬೆಂಗಳೂರು

**ನಾಗಬೆರ್ಮೆ–೨೦೦೯**

ಡಾ.ಪಾಲ್ತಾಡಿ ರಾಮಕೃಷ್ಣ ಆಚಾರ್, ಸುಪ್ರಿಯಾ ಪ್ರಕಾಶನ, ಪುತ್ತೂರು

**ನಾಡುನುಡಿಯದೊಂದು ಬಗೆ–೨೦೦೪**

ಮುದ್ದು ಮೂಡುಬೆಳ್ಳೆ, ಹೇಮಾಂಶು ಪ್ರಕಾಶನ, ಮಂಗಳೂರು

**ನಿಶಾನಿ–೨೦೦೭**

(ಸಂ.)ಡಾ.ಕೆ.ಕಮಲಾಕ್ಷ, ತುಳುವೆರೆ ಆಯನೊ ಸಮಿತಿ, ಬದಿಯಡ್ಕ, ಪೆರಡಾಲ, ಕಾಸರಗೋಡು

**ನುಡಿಕಟ್ಟ್–೨೦೦೯**

ಬನ್ನಂಜೆ ಬಾಬು ಅಮೀನ್, ಕೆಮ್ಮಲಜೆ ಜಾನಪದ ಪ್ರಕಾಶನ, ಉಡುಪಿ

**ನುಡಿ ಸಿಂಗಾರ–೨೦೦೬**

ಡಾ.ಗಣೇಶ್ ಅಮೀನ್ ಸಂಕಮಾರ್, ಸಿರಿ ಪ್ರಕಾಶನ, ಮಂಗಳೂರು

**ಪತ್ತಾಯೊ–೧೯೯೫**

(ಸಂ.)ಡಾ.ಯು.ಪಿ.ಉಪಾಧ್ಯಾಯ, ದಶಮಾನೋತ್ಸವ ಸಂಚಿಕೆ, ತುಳುಕೂಟ ಉಡುಪಿ

**ಪನಿಯಾರ–೧೯೮೯**

(ಸಂ.)ಕೆ.ಚಿನ್ನಪ್ಪ ಗೌಡ, ಅಖಿಲ ಭಾರತ ತುಳು ಸಮ್ಮೇಳನ, ಮೂಲ್ಕಿ, ನೆನಪಿನ ಸಚಿಚಿಕೆ, ತುಳುಕೂಟ, ಮಂಗಳೂರು

**ಪರ್ವಕಾಲ–೨೦೦೭**

ಕೆ.ಎಲ್.ಕುಂಡಂತಾಯ, ಸರಸ್ವತಿ ಪ್ರಕಾಶನ, ಅದಮಾರು, ಉಡುಪಿ

**ಪರಶುರಾಮ ಸೃಷ್ಟಿಯ ವೈವಿಧ್ಯ–೨೦೧೦**

ಡಾ.ಕೆ.ಪ್ರಭಾಕರ ಆಚಾರ್, ಕರ್ನಾಟಕ ಜೀವವೈವಿಧ್ಯ ಪ್ರಶಸ್ತಿ ನಿಧಿ, ಬೆಂಗಳೂರು

**ಪಾಡ್ದನೊಳು–೧೮೮೬**

ಮ್ಯಾನರ್ ಎ.: ಬಾಸೆಲ್ ಮಿಷನ್ ಪ್ರೆಸ್, ಮಂಗಳೂರು

**ಪಾಣರ ಜನಾಂಗ–ಬದುಕು ಮತ್ತು ಸಂಸ್ಕೃತಿ, ತುಳುನಾಡಿನಲ್ಲಿ ಭೂರಾಧನೆ–೨೦೦೪**

ಡಾ.ಪಾಲ್ತಾಡಿ ರಾಮಕೃಷ್ಣ ಆಚಾರ್, ಪ್ರಸರಾಂಗ, ಮಂಗಳೂರು ವಿಶ್ವವಿದ್ಯಾಲಯ

**ಪೂಕರೆ ಮತ್ತು ಇತರ ಜಾನಪದೀಯ ಲೇಖನಗಳು–೨೦೦೪**

ಪೂವಪ್ಪ ಕಣಿಯೂರು, ರಾಜ್‌ಪ್ರಕಾಶನ, ಮೈಸೂರು

**ಪೊಲಿ ಕೆನರಾ–೨೦೦–೨೦೦೦**

(ಸಂ.)ಮುಕುಂದ ಪ್ರಭು ಎಂ., ಜಿಲ್ಲಾಧಿಕಾರಿ, ದಕ್ಷಿಣ ಕನ್ನಡ, ಮಂಗಳೂರು

**ಪೊಳಲಿ ನುಡಿಮಾಲೆ–೧೯೯೫**

ಅ.ಬಾಲಕೃಷ್ಣ ಶೆಟ್ಟಿ ಪೊಳಲಿ, ಕನ್ನಡ ಚೈತನ್ಯ, ನವದೆಹಲಿ

**ಪಾಣಾಜೆ ಪಂಡಿತರ ವೈದ್ಯರತ್ನಮಾಲೆ–೨೦೦೯**

ಪಾಣಾಜೆ ವೈದ್ಯ ಶಂಕರನಾರಾಯಣ ಭಟ್ಟರು, ವ್ಯವಸ್ಥಾಪನಾ ಸಮಿತಿ, ವಿಶ್ವ ತುಳು ಸಮ್ಮೇಳನ, ಉಜಿರೆ

**ಪೊರ್ಲು–೧೯೮೩**

(ಸಂ.)ವಿಶುಕುಮಾರ್, ತುಳುಕೂಟ, ಬೆಂಗಳೂರು

**ಪ್ರಾಚೀನ ತುಳುನಾಡು–೧೯೫೪**

ಶೀನಪ್ಪ ಹೆಗ್ಡೆ ಎನ್.ಎ., ಕಿಲ್ಲೆ ಎನ್.ಎಸ್., ಶ್ರೀಮತಿ ಇಂದಿರಾ ಕಿಲ್ಲೆ, ಮಂಗಳೂರು

**ಬಂಟರು ಒಂದು ಸಮಾಜೋ ಸಾಂಸ್ಕೃತಿಕ ಅಧ್ಯಯನ–೨೦೦೪**

ಇಂದಿರಾ ಹೆಗ್ಗಡೆ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು

**ಬಿತ್ತ್‌ಲ್ ತಿರ್ಗ್‌ನಗ–೨೦೦೯**

ರತ್ನಕುಮಾರ್ ಎಂ., ವ್ಯವಸ್ಥಾಪನಾ ಸಮಿತಿ, ವಿಶ್ವ ತುಳು ಸಮ್ಮೇಳನ, ಉಜಿರೆ

**ಬಿಲ್ಲವರು–ಒಂದು ಅಧ್ಯಯನ–೨೦೦೩**

ಬಾಬುಶಿವ ಪೂಜಾರಿ, ಬಿಲ್ಲವ ಜಾಗೃತಿ ಬಳಗ, ಮುಂಬಯಿ

**ಬೊಳ್ಳಿ–೨೦೦೦**

(ಸಂ.)ಉಷಾ ಪಿ. ರೈ, ತುಳುಕೂಟ, ಬೆಂಗಳೂರು

**ಭಾರತೀಯ ಹಬ್ಬಗಳ ವೈಶಿಷ್ಟ್ಯ–೨೦೦೨**

ಪ್ರೊ. ವಿದ್ವಾನ್ ವಿ.ಎನ್.ಭಟ್, ವಿಶ್ವನಾಥ ಪ್ರಕಾಶನ, ಶಿವಮೊಗ್ಗ

**ಭಾರತೀಯ ಹಬ್ಬಗಳು–೧೯೭೧**

ಸಿ.ವಿ.ಕೆರಿಮನಿ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

**ಭಾರತೀಯರ ಹಬ್ಬಗಳು–೧೯೯೬**

ಪಂಡಿತ ಜೆ.ಎ.ಕವಲಿ, ರಾಮಾಶ್ರಯ ಪಬ್ಲಿಕೇಶನ್, ಧಾರವಾಡ

**ಭೂತನಾಗರ ನಡುವೆ–೧೯೮೭**

ಲೀಲಾಭಟ್, ಪ್ರಕೃತಿ ಪ್ರಕಾಶನ, ಕೋಟೆಕಾರು

**ಭೂತಾರಾಧನೆ ಕೆಲವು ಅಧ್ಯಯನಗಳು – ೧೯೮೩**

ಡಾ.ಕೆ.ಚಿನ್ನಪ್ಪ  ಗೌಡ, ತುಳುವ ಪ್ರಕಾಶನ, ಮಂಗಳೂರು

**ಭೂತಾರಾಧನೆ–ಜಾನಪದೀಯ ಅಧ್ಯಯನ–೧೯೯೦**

ಡಾ.ಕೆ.ಚಿನ್ನಪ್ಪ ಗೌಡ, ಮದಿಪು ಪ್ರಕಾಶನ, ಮಂಗಳ ಗಂಗೋತ್ರಿ

**ಮದಿಪು–೧೯೮೪**

(ಸಂ.)ಡಾ.ಬಿ.ಎ.ವಿವೇಕ ರೈ, ತುಳುಕೂಟ, ಮಂಗಳೂರು

**ಮಲೆಕುಡಿಯರು –೧೯೯೬**

ಬಿ.ಎ.ವಿವೇಕ ರೈ, ಡಿ.ಯದುಪತಿ ಗೌಡ, ಶ್ರೀ ಧ.ಮಂ.ತುಳುಪೀಠ, ಮಂಗಳೂರು ವಿಶ್ವವಿದ್ಯಾಲಯ

**ಮುಗೇರರು ಜನಾಂಗ-ಜಾನಪದ ಅಧ್ಯಯನ-೧೯೯೭**

ಡಾ.ಅಭಯ ಕೌಕ್ರಾಡಿ, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ಕರ್ನಾಟಕ ತುಳು ಸಾಹಿತ್ಯ ಅಕಾಡೆಮಿ, ಮಂಗಳೂರು

**ಮೌಖಿಕ ಸಂಕಥನ-೨೦೦೯**

ಡಾ.ಪೂವಪ್ಪ ಕಣಿಯೂರು, ತರಂಗಿಣಿ ಪ್ರಕಾಶನ, ಸುಳ್ಯ

**ವೈದ್ಯಸಾರ-೨೦೦೯**

ದೇವು ಶೆಟ್ಟಿ, ಮಾಬು ಶೆಟ್ಟಿ, ವ್ಯವಸ್ಥಾಪನಾ ಸಮಿತಿ, ವಿಶ್ವ ತುಳು ಸಮ್ಮೇಳನ, ಉಜಿರೆ

**ಶಿವಳ್ಳಿ ಬ್ರಾಹ್ಮಣರು-೨೦೦೧**

(ಸಂ.)ಬಿ.ಎಲ್.ರಾವ್, ಮುಂಬಯಿ

**ಸಂಕ್ಷಿಪ್ತ ಕನ್ನಡ ನಿಘಂಟು(ಕನ್ನಡ ಕನ್ನಡ)-೧೯೭೫**

ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

**ಸಂಸ್ಕೃತಿ-೧೯೯೪**

(ಸಂ.)ಯು.ಕೆ.ಶಾಮ ಭಟ್, ವಿಜಯ ಕಾಲೇಜು, ಮುಲ್ಕಿ

**ಸಂಸ್ಕೃತಿ ಸಿರಿ-೨೦೦೩**

ಡಾ.ಕೆ.ಚಿನ್ನಪ್ಪ ಗೌಡ, ಮದಿಪು ಪ್ರಕಾಶನ, ಮಂಗಳಗಂಗೋತ್ರಿ

**ಸಂಚಯ-೧೯೯೯**

ಏರ್ಯ ಲಕ್ಷ್ಮೀನಾರಾಯಣ ಆಳ್ವ, ಏರ್ಯ ಲಕ್ಷ್ಮೀನಾರಾಯಣ ಆಳ್ವ ಅಭಿನಂದನ ಸಮಿತಿ, ಮಂಗಳೂರು

**ಸಸ್ಯ ಜಾನಪದ-೨೦೦೦**

ಡಾ.ಬಿ.ಶಿವರಾಮ ಶೆಟ್ಟಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

**ಸಾಂಸ್ಕೃತಿಕ ತುಳುನಾಡು-೧೯೯೪**

ಯಜ್ಞಾವತಿ ಕೇಸವ ಕಂಗನ್, ಚಂದ್ರಿಕಾ ಪ್ರಕಾಶನ, ಮಂಗಳೂರು

**ಸಾಹಿತ್ಯ ಸಿರಿ-೨೦೦೪**

(ಸಂ.)ಡಾ.ವಾಮನ ನಂದಾವರ, ಕರ್ನಾಟಕ ತುಳು ಸಾಹಿತ್ಯ ಅಕಾಡೆಮಿ, ಮಂಗಳೂರು

**ಸಾಹಿತ್ಯ ಸಂಸ್ಕೃತಿ ಮತ್ತು ಮಹಿಳೆ-೨೦೦೭**

ಸಾರಾ ಅಬೂಬಕ್ಕರ್, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

**ಸಿಂಗದನ-೧೯೮೭**

ಡಾ.ವಾಮನ ನಂದಾವರ, ಹೇಮಾಂಶು ಪ್ರಕಾಶನ, ಮಂಗಳೂರು

**ಸೀಮೆ-೧೯೯೫**

(ಸಂ.)ಅರುಣ್ ಕುಮಾರ್ ಎಸ್.ಆರ್., ವಿಜಯಾ ಕಾಲೇಜು, ಮುಲ್ಕಿ

**ಸೇರಿಗೆ-೨೦೦೦**

ಡಾ.ಕೆ.ಚಿನ್ನಪ್ಪ ಗೌಡ, ಮದಿಪು ಪ್ರಕಾಶನ, ಮಂಗಳ ಗಂಗೋತ್ರಿ

**ಸೊರಗೆ-೨೦೦೮**

(ಸಂ.)ವಸಂತ ಕುಮಾರ ಪೆರ್ಲ, ಪ್ರಸಾರಾಂಗ, ದ್ರಾವಿಡ ವಿಶ್ವವಿದ್ಯಾಲಯ, ಕುಪ್ಪಂ, ಆಂಧ್ರಪ್ರದೇಶ

**ಸ್ತ್ರೀ ಸಂವೇದನೆ-೧೯೯೫**

ಬಿ.ಎಂ.ರೋಹಿಣಿ, ಹೇಮಾಂಶು ಪ್ರಕಾಶನ, ಮಂಗಳೂರು

**ಸ್ತ್ರಿ ಸಂಸ್ಕೃತಿ ಶಿಕ್ಷಣ-೨೦೦೦**

ಬಿ.ಎಂ.ರೋಹಿಣಿ, ಹೇಮಾಂಶು ಪ್ರಕಾಶನ, ಮಂಗಳೂರು

**ಸ್ತ್ರೀ ಸಂವೇದನೆ-೨೦೦೭**

ಶಾಂತಿ ನಾಯಕ, ಜಾನಪದ ಪ್ರಕಾಶನ, ಹೊನ್ನಾವರ

## English

**A Kannada-English Dictionary:** 1893:

Rev. F. Kittel: Basel Mission Press, Mangalore

**Ancient Karnataka Vol.1: istory of Tuluva:** 1963:

B.A.Satethur: oriental Book Agency.

**Bucher's Kannada-English Dictionary:** Second Edition-1994:

Rev. J. Bucher: Asian Educational Services, Newdelhi

**Grammer of Tulu Language-**1832:

Rev J.Brigel: Basel Mission Press, Mangalore

**Night Life in South Canara:** 1876:

Martha Aston: Souvenir, Bharatiya Vidya Bhavan, Mangalore

**On Behalf of Bhukas–Devil and ghost worship in western India:** Dec 14 1875:

Walhouse M.J,: Journal of the Authropological Institute of great Britain.

**Studies in Tuluva History and Culture:** 1975:

Dr. Gururaa Bhatt: Kallianpura D.K.

**The Practical Sanskrit-English Dictionary:** Second Edition-2003:

Motilal Banarsidass Publishers Private Limited, Delhi **The Devil Worship of Tuluvas**: 1894-1897: Burwell A.C.: Ind. Antiquary Vol.XXIII, XXIV, XXV, XXVI

**.The Siri Myth and Ritual" A Mass Possession cult of south India:** 1875:

Peter J.claus, Ethnology -14,1 47-48

**Tulu English Dictionary**: 1983:

Rev.A. Manner: Asian Educational Services, New Delhi

■■■